

ಕಣ್ಣಿನಿಂದ ನಕಾಶೆ ನೋಡಿ ನೋಡಿ ನಮಗೆ ಭಾರತ ದೇಶ ಅನ್ನೋದು ಅರ್ಧ ಮುಳುಗಿ ನೀರಲ್ಲಿ ನಿಂತ ಟೈಟಾನಿಕ್‌ನಂತೆ ಭಾಸವಾಗುತ್ತದೆ. ಮೇಲ್ಭಾಗದಲ್ಲಿ ಕಾಶ್ಮೀರ, ಪದತಲದಲ್ಲಿ ಕನ್ಯಾಕುಮಾರಿ ಎಂದೆಲ್ಲ ಅನಿಸುತ್ತದೆ. ಹೊರತು, ಇದೊಂದು ವಿಶಾಲವಾದ, ಸಮತಟ್ಟಾದ ಭೂಮಿಯ ತುಂಡು ಎಂಬ ಕಲ್ಪನೆ ಬರುವುದೇ ಇಲ್ಲ. ಉರುಳುವ ಗೋಲದ ಹೊರ ಮೈಯ ಯಾವುದೇ ಬಿಂದುವೂ, ಆ ಗೋಲದ ಅತ್ಯುನ್ನತ ಬಿಂದುವೇ ಆಗಿರುತ್ತದೆ. ಅಂದರೆ, ನಾವು ನಿಂತ ಸ್ಥಳವೇ ಈ ಭೂಗೋಲದ ಅತ್ಯುನ್ನತ ಶಿಖರ! ಹೀಗೆ ಮನಗಂಡ ತಕ್ಷಣ ಹೇಗೆ ಫಕ್ಕನೆ ಎಲ್ಲ ಬದಲಾಗತೊಡಗುತ್ತದಲ್ಲವೆ?

ಕಾಲದ ಕಲ್ಪನೆಯೂ ಇಂಥದ್ದೇ. ಗಡಿಯಾರ, ಕ್ಯಾಲೆಂಡರು, ಡೈರಿ, ವಯಸ್ಸು... ಹೀಗೆಲ್ಲ ಕಾಲವನ್ನು ಒಂದು ಪ್ರಮಾಣಬದ್ಧ ಅನುಕ್ರಮದಲ್ಲಿ ಅಳವಡಿಸಿಕೊಂಡಿರುವ ನಮಗೆ, ಕಾಲವೊಂದು ಎಡದಿಂದ ಬಲಕ್ಕೆ ಚಲಿಸುವ ಸರಳರೇಖೆಯಂತೆ ಭಾಸವಾಗುತ್ತದೆ. ಬಾಲ್ಯ ಎಡಗಡೆಗೆ, ಭವಿಷ್ಯ ಬಲಗಡೆಗೆ, ಈಗ ರನ್ ರೇಟ್ ಇಷ್ಟಿದೆ, ಹೀಗೆ ನಲ್ವತ್ತೈದನೇ ಓವರ್‌ನಲ್ಲಿ ಇಷ್ಟು ರನ್ ಆಗಬಹುದು-ಎಂಬಷ್ಟೇ ತಾರ್ಕಿಕವಾದ ರೀತಿಯಲ್ಲಿ ನಮ್ಮ ಬದುಕಿನ ನಕ್ಷೆಯ ಜೊತೆಗೆ, 'ಅನುಭವಿ'ಸುವ ನಮೂನೆಯನ್ನೂ ಸರಳಗೊಳಿಸುತ್ತ ಹೋಗುತ್ತೇವೆ. ಚಲಿಸುವ ಈ ಗೆರೆಯನ್ನೇ ಅಳಿಸಿಬಿಟ್ಟರೆ ಹೇಗಿರುತ್ತದೆ?

ಬಹುಶ: ಸಾಹಿತ್ಯ ಮಾಡುವುದೇ ಅದನ್ನು! ಕಾಲದ ಈ ಹುಸಿ ವಿನ್ಯಾಸವನ್ನು ಮುರಿಯಲೆಂದೇ ಮನುಷ್ಯ ಸಾಹಿತ್ಯದ ಮೊರೆ ಹೋಗುತ್ತಾನೆ. ಕಾಲದ ಭಂಗುರತೆ ಮತ್ತು ಅನಿವಾರ್ಯತೆ ಎರಡನ್ನೂ ತರ್ಕಾತೀತವಾಗಿ ನಾವು ಸಾಹಿತ್ಯದಲ್ಲಿ ಅನುಭವಿಸಬಲ್ಲೆವು. ಯಾವ ಚುಕ್ಕಿಗಳ ಹಂಗಿಗೂ ಒಳಪಡದ ವಿಸ್ತೃತ ಮಾನವೀಯ ರಂಗವಲ್ಲಿಯ ಭಾಗವಾಗಬಲ್ಲೆವು.

ನಿಮ್ಮ ಹೊಸ ವರುಷದ ಮೊದಲ ದಿನ ಹೇಗೆ ಕಳೆಯುತ್ತೀರಿ ಎಂದು ಗಂಭೀರವಾಗಿ ಕೇಳಿದವರಿಗೆ ಕಿಲಾಡಿ ತಾತ ಖುಷ್ವಂತ್ ಸಿಂಗ್ ಹೇಳುತ್ತಾರೆ-''ಹ್ಯಾಂಗೋವರಿನಿಂದ ಸಿಡಿಯುವ ತಲೆಯನ್ನು ಕೈಲಿ ಹಿಡಿದು''! ತನ್ನನ್ನು ತೀರ ಗಂಭೀರವಾಗಿ ತೆಗೆದುಕೊಳ್ಳುವ ಮನುಷ್ಯನಷ್ಟು ಹಾಸ್ಯಾಸ್ಪದ ಸಂಗತಿ ಬೇರಿಲ್ಲ.

ಯಾವ ಹೂವೂ ಹೊಸ ವರುಷಕ್ಕೆಂದೇ ಕಾಯುವುದಿಲ್ಲ.

ನಮ್ಮಿಂದ ಈ ಜಗತ್ತಲ್ಲ ಸರಿ, ಆದರೆ ನಾವಿದ್ದರೆ ಮಾತ್ರ ಈ ಜಗತ್ತು ಎಂಬುದನ್ನು ಮರೆಯದಿರೋಣ. ಸಿನಿಕರಾಗದೆ, ಹುಬ್ಬು ಗಂಟಿಕ್ಕದೆ ಸಡಿಲಾಗೋಣ. ಆಗ ನಮ್ಮ ನಿತ್ಯ ದೀಪವೇ ಆಕಾಶಬುಟ್ಟಿಯಾಗಬಲ್ಲದು.

ಹಾರ್ದಿಕ ಹಿತಾಶಯಗಳೊಂದಿಗೆ,

ಸಂಪಾದಕ

# ಭಾವ ಲೋಕ

## ಕತೆಗಳು


ಮೇಷ್ಟ್ರ ಸೈಕಲ್ಲಿನ ಬೇಬಿ ಸೀಟು/ 8
ಅಪಾರ

ಮುಳುಗಡೆ / 18
ವನಿತಾ ಕೇರುಗೋಡು

ಯಮುನೆ ಹೇಳಿದ ಕತೆ / 40
ಮಣಿಮಾಲಿನ ವಿ.ಕೆ.

ಒದ್ದೆ ಅಂಗಳದ ಕನಸ ತುಣುಕುಗಳು / 56
ಜಯಶ್ರೀ ಕಾಸರವಳ್ಳಿ

ಕುರುವಿನ ಗುಲಾಮ / 104
ಎಸ್. ಸುರೇಂದ್ರನಾಥ್

ಬಂಗಾರದ ಕಡಲೆ / 124
ವಿ.ಎನ್. ಲಕ್ಷ್ಮೀನಾರಾಯಣ


## ಲಘು ಕತೆಗಳು


ಶಿವರಾತ್ರಿ ಮಜ / 50
ವಿವೇಕ ಎಲ್. ಪಟಗಾರ

ಬಿಡುಗಡೆ / 98
ಸುಮಾ ಎಂಬಾರ್

ಕಹೋ ನಾ ಪ್ಯಾರ್ ಹೈ / 140
ವಿಭಾ ತಿರಕಪಡಿ

ಮೆಕ್ತೂಬ್ / 149
ಕೆ. ಸುನಿಲ್ ಪ್ರಭು

ದಯೆ (ಒಂದಾಣೆ ಮಾಲೆ) / 55
ಎಂ.ಆರ್. ಭಟ್

ಯಾರು ಬಲಶಾಲಿ? (ಜನಪದ) / 115
ಎ.ಕೆ. ರಾಮಾನುಜನ್ /ಮಹಾಬಲೇಶ್ವರರಾವ್




## ಶತಮಾನದ ಮೆಲುಕು


ಕಾಲದೊಡನೆ ಅಶ್ವತ್ಥನ ಸ್ಪರ್ಧೆ / 30
ಪು.ತಿ. ನರಸಿಂಹಾಚಾರ್


## ವಿಶ್ವ ಭಾರತಿ


ಪ್ರೀತಿ
ಕ್ಲಾರೀಸ್ ಲೀಸ್ಪೆಕ್ಟರ್ / 66
ಮಲ್ಲಿಕಾರ್ಜುನ ಹಿರೇಮಠ

ಕಾಲಾಪಾನಿ
ಹಿಮಾಂಶು ಜೋಷಿ /86
ತಿಪ್ಪೇಸ್ವಾಮಿ


## ಕವಿ ಸಮಯ


ಎಂ.ಆರ್. ಭಗವತಿ / 80
ವೈದೇಹಿ / 82
ಸಿ.ವಿ. ಶೇಷಾದ್ರಿ / 84




# ಭಾವನಾ

ಸಂಪುಟ -1 ಸಂಚಿಕೆ - 10
ಜನವರಿ 2001

ಪ್ರಕಾಶಕರು, ಮುದ್ರಕರು, ಮಾಲಿಕರು
**ವಿಜಯ ಸಂಕೇಶ್ವರ**
ಆನಂದ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

ಸಂಪಾದಕ
**ಜಯಂತ ಕಾಯ್ಕಿಣಿ**

**ಮುಖಪುಟ ಕಲಾಕೃತಿ :** ಚಂದ್ರಕಾಂತ ಕುಸನೂರ್

**ಸಂಚಿಕೆಯ ಕಲಾವಿದರು:** ಸೃಜನ್, ಇಕ್ಬಾಲ್ ಅಹ್ಮದ್, ಚಂದ್ರಕಾಂತ ಕುಸನೂರ್, ದೇವದಾಸ್, ಉಮೇಶ್, ಶಂಕರ ಪಾಟೀಲ, ಚೌಗಲೆ, ರಾಧಾಕೃಷ್ಣ ಬಂದಗದ್ದೆ, ಪ್ರೀತಿ ಸಂಯುಕ್ತಾ, ರಾಮಕೃಷ್ಣ ಸಿದ್ರಪಾಲ, ಡಿ.ವಿ. ಬಡಿಗೇರ್, ಪದ್ಮನಾಭ, ಕೆ.ಎನ್. ರಾಮಚಂದ್ರನ್, ಸಿ.ವಿ. ಶೇಷಾದ್ರಿ, ಶಿವಕುಮಾರ್, ಶಶಿಧರ್, ಶ್ರೀಪಾದ್

**ಸಂಪಾದಕೀಯ ಕಾರ್ಯಾಲಯ**
ನಂ. 38, ಎ.ಎಂ. ರಸ್ತೆ, ಕಲಾಸಿಪಾಳ್ಯಂ ನ್ಯೂ ಎಕ್ಸ್‌ಟೆನ್‌ಷನ್
ಬೆಂಗಳೂರು - 560 002
ಫೋನ್: 2246350, 2226044, 2229102
ಫ್ಯಾಕ್ಸ್: 080-2246349
E-mail: vksbc@ bgl.vsnl.net.in

**ಪ್ರಧಾನ ಕಛೇರಿ**
ಗಿರಿರಾಜ ಅನೆಕ್ಸ್
ಸರ್ಕ್ಯೂಟ್ ಹೌಸ್ ರಸ್ತೆ, ಹುಬ್ಬಳ್ಳಿ
ದೂರವಾಣಿ: 0836-253656, 253657
ಫ್ಯಾಕ್ಸ್: 0836-253630

## ಮಧುವನ

ಅಶೋಕ ಚೊಳಚಗುಡ್ಡ / 136

## ಸಹವಾಸ

ಹಾ.ರಾ. ಶಂಕರ ನಾರಾಯಣ / 116

## ಕ್ಯಾನ್‌ವಾಸ್

ಚಂದ್ರಕಾಂತ ಕುಸನೂರ್ / 152

## ಅಂಕಣಗಳು

ಭಳಾರೇ ವಿಚಿತ್ರಂ / 52
ಕಥನ ಕುತೂಹಲ / 96
ಶಬ್ದತೀರ / 134
ಮಂಟಪ / 146
ಕೊನೇ-ಸಿಪ್ / 160

ಮೊಗ್ಗಿನ ಜಡೆ / 4
ಭಾವ ಬಿಂದು / 6
ಕಾಗದದ ದೋಣಿ / 18
ಸಾಲ್ ಮಿಂಚು / 23
ಮುದ್ದು ತಪ್ಪು / 78
ಸ್ಫೂರ್ತಿದೇವತೆ / 102
ಗರಿ / 142
ತೆರೆದ ಅಂಚೆ / 158





ಶಂಕರ ಪಾಟೀಲ



ಅಪಾರ

# ಮೇಷ್ಟ್ರ ಸೈಕಲ್ಲಿನ ಬೇಬಿ ಸೀಟು



ಶನಿವಾರದ ಮಾರ್ನಿಂಗ್‌ಸ್ಕೂಲಿನ ಎರಡನೇ ಪೀರಿಯಡ್‌ನಲ್ಲಿ, ಎಯ್ತ್ 'ಬಿ' ವಿದ್ಯಾರ್ಥಿಗಳಿಗೆ 'ಸರಳರೂಪಕ್ಕೆ ತನ್ನಿ' ಎಂಬ ಲೆಕ್ಕದ ಎರಡನೇ ಸ್ಟೆಪ್ಪನ್ನು ಬೋರ್ಡಿನ ಮೇಲೆ ಮಾಡಿ ಬಾಗಿಲ ಕಡೆಗೆ ತಿರುಗಿದ ಗೋಪಾಲಯ್ಯ ಮೇಷ್ಟ್ರು, ಅಲ್ಲಿ ಎಷ್ಟೋ ಹೊತ್ತಿನಿಂದ ಎಂಬಂತೆ ನಿಂತಿದ್ದ ತಮ್ಮ ಧರ್ಮಪತ್ನಿಯನ್ನು ಕಂಡು ತುಸು ಅಚ್ಚರಿಗೊಂಡರು. ಮರುಕ್ಷಣವೇ, ತಮ್ಮ ಇಪ್ಪತ್ತೆಂಟು ವರ್ಷಗಳ ಸರ್ವೀಸಿನಲ್ಲಿ ಶಾರದಮ್ಮ, ಎಂದೂ, ಯಾವ ಕಾರಣಕ್ಕೂ, ತಮ್ಮನ್ನು ಹುಡುಕಿಕೊಂಡು ಶಾಲೆಯ ತನಕ ಬಂದಿರಲಿಲ್ಲವೆಂಬುದು ನೆನಪಾಗಿ, ಸಣ್ಣ ಆತಂಕದಿಂದಲೇ, ಲೆಕ್ಕವನ್ನು ಅಲ್ಲಿಗೇ ಕೈಬಿಟ್ಟು, 'ಗಲಾಟೆ ಮಾಡದೆ ಪ್ರಯತ್ನಿಸುತ್ತಿರಿ' ಎಂದು ತಮ್ಮ ವಿದ್ಯಾರ್ಥಿಗಳಿಗೆ ಹೇಳಿ ಹೊರಬಂದರು.






ಮೇಷ್ಟ್ರು ಹೊರಗೆ ಬಂದ ತಕ್ಷಣ, ಗಾಬರಿಗೊಂಡಿದ್ದ ಶಾರದಮ್ಮ, ಮಗಳು ಪೃಥ್ವಿಕಾ ಬೆಳಗ್ಗಿನಿಂದ ಮನೆಯಲ್ಲಿಲ್ಲದ್ದನ್ನೂ, ಎರಡು ದಿನ ದಿಂದ ಅವಳು ಒಂಥರಾ ಇದ್ದುದನ್ನೂ, ತಮಗೆ ತಿಳಿಸದೆ ಎಂದೂ ಹೀಗೆ ಹೊರಗೆ ಹೋದವಳಲ್ಲ ವೆಂಬುದನ್ನೂ, ಕಡೆಗೆ ತಮಗೇಕೋ ಸಿಕ್ಕಾಬಟ್ಟೆ ಭಯವಾಗುತ್ತಿದೆಯೆಂಬುದನ್ನೂ ಒಂದೇ ಉಸಿರಿ ನಲ್ಲಿ ಹೇಳಿಮುಗಿಸಿದರು. 'ಗಾಬರಿ ಪಡಬೇಡ, ಪುಟ್ಟಿಯೇನು ಪುಟ್ಟಮಗುವೇ? ಕಾಲೇಜು ಓದೋ ಹುಡುಗಿ' ಎಂಬ ಸಮಾಧಾನದ ಮಾತಾಡಿದರೂ, ಮೇಷ್ಟ್ರಿಗೂ ಎಂಥದೋ ಆತಂಕ ನಿಧಾನವಾಗಿ ತುಂಬಿಕೊಳ್ಳುತ್ತಿದ್ದುದು, ಅವರು ತಕ್ಷಣ ಹೆಡ್ ಮಾಸ್ಟರ ಕೋಣೆಗೆ ಹೋಗಿ, ಅರ್ಧ ದಿನದ ಸಿ ಎಲ್ ಹಾಕಿ ಬಂದದ್ದರಿಂದಲೇ ತಿಳಿಯುವಂತಿತ್ತು. ಮನೆಗೆ ಹೋಗುವ ದಾರಿಯಲ್ಲಿ ಶಾರದಮ್ಮ, ಮಗಳು ಇಲ್ಲದಿರುವುದನ್ನು ತಾನು ಮೊದಲಿಗೆ ಹೇಗೆ ಕಂಡುಕೊಂಡೆ ಎಂಬುವುದನ್ನ ಪದೇ ಪದೇ ಅಳುವ ದನಿಯಲ್ಲಿ ವಿವರಿಸುವಾಗ, ಮೇಷ್ಟ್ರು ತಾಳ್ಮೆ ಕಳೆದುಕೊಂಡು, 'ಅಂದರೆ ನಿನ್ನ ಮಾತುಗಳ ಅರ್ಥವೇನು? ನಮ್ಮ ಪುಟ್ಟಿ ಯಾವನ ಜೊತೆಗೋ ಓಡಿಹೋಗಿದ್ದಾಳೆ ಅಂತಲಾ?' ಎಂದು ಸಿಡಿಮಿಡಿಗೊಂಡರು. ಮೇಷ್ಟ್ರು ರೇಗಿ ದ್ದಕ್ಕೋ, ತಮ್ಮ ಮನದಾಳದಲ್ಲಿನ ಅನುಮಾನ ವನ್ನು ಆಡಿ ತೋರಿಸಿದ್ದಕ್ಕೋ, ಅಂತೂ ಮನೆ ತಲುಪುವತನಕ ಶಾರದಮ್ಮ ಮತ್ತೆ ಮಾತಾಡಲಿಲ್ಲ.

ಮನೆಗೆ ಬಂದ ಮೇಷ್ಟ್ರು, ಮಗಳ ಕೋಣೆಯಲ್ಲಿ, ಏನು ಎಂಬುದು ಗೊತ್ತಿಲ್ಲ ದೆಯೂ ಏತಕ್ಕಾಗಿಯೊ ಹುಡುಕಾಡಿದರು. ಗೋಡೆಗೆ ನೇತು ಹಾಕಿದ ಪೃಥ್ವಿಕಾಳ ಬಟ್ಟೆ ಗಳನ್ನೂ, ಮುಕ್ತಾಯದ ಹಂತದಲ್ಲಿದ್ದ ಅವಳ ಹೊಸ ಪೇಂಟಿಂಗನ್ನೂ, ಗೋಡೆಗೆ ಹಚ್ಚಿದ ಅವಳ ಇಷ್ಟದ ಸ್ಟೆಫಿಗ್ರಾಫ್‌ಳ ಪೋಸ್ಟರನ್ನೂ ನೋಡುತ್ತ, ಮೇಷ್ಟ್ರಿಗೆ, ಮಗಳು ಒಳಗೆಲ್ಲೋ ಸ್ನಾನ ಮಾಡುತ್ತಿರಬಹುದು ಅಷ್ಟೇ ಎಂದೆನಿಸಿಬಿಟ್ಟಿತು. ಆದರೆ ಸಂಜೆಯಾದರೂ ಪೃಥ್ವಿಕಳ ಸುಳಿವೇ ಇಲ್ಲದಿರಲು, ಮನೆಯ ಉಷ್ಣತೆ ನಿಧಾನ ವಾಗಿಯೇ ಏರತೊಡಗಿತು. ಮನೆಯ ಹೊರಗೆ, ಒಳಗೆ, ಮತ್ತೆ ಗೇಟಿನವರೆಗೆ ಹೋಗಿ, ಬಗ್ಗಿ, ಬೀದಿಯ ಅಂಚಿನವರೆಗೂ ದೃಷ್ಟಿ ಹಾಯಿಸಿ ಮಾಡುತ್ತಿದ್ದ ಮೇಷ್ಟ್ರಿಗೆ, ಇನ್ನೇನು ಅಳಲು ಸಿದ್ಧ ಳಾಗಿ ನಿಂತಿರುವ ತಮ್ಮ ಹೆಂಡತಿಯತ್ತ ನೋಡುವ ಧೈರ್ಯವಾಗಲಿಲ್ಲ. ಸ್ವಲ್ಪ ಹೊತ್ತಿನ ಬಳಿಕ ಒಳಗೆ ಹೋಗಿ, ಪ್ಯಾಂಟು ಧರಿಸಿ, ಚಪ್ಪಲಿ ಮೆಟ್ಟಿ ಕೊಂಡು, ಪತ್ನಿಗೆ, 'ನೋಡು, ಪುಟ್ಟಿ ಅಂಥವ ಳಲ್ಲ, ನೀನು ಧೈರ್ಯವಾಗಿರು, ನಾನು ಅವಳ ಗೆಳತಿಯರ ಮನೆಗಳಲ್ಲಿ ವಿಚಾರಿಸುತ್ತೀನಿ' ಎಂದು ಹೇಳಿ ಮನೆಯಿಂದ ಹೊರಬಿದ್ದರು. ಟಿವಿಯಲ್ಲಿ ಮೆಗಾಸೀರಿಯಲ್ ನೋಡುತ್ತಾ ಕುಳಿತಿದ್ದ ದಪ್ಪ ನೆಯ ಹೆಂಗಸರ, 'ಬೆಳಿಗ್ಗೆಯಿಂದಲೂ ಕಾಣ್ತಾ ಇಲ್ವಾ?', 'ರಾತ್ರಿ ಇದ್ದಳೋ?', 'ನಿಮಗೆ ಹೇಳದೇ ಹೋದಳಾ?' ಎಂಬಂಥ ರಾಗದ ಪ್ರಶ್ನೆಗಳನ್ನ ಎದುರಿಸಲಾರದೆ ಕಂಗಾಲಾಗಿ, ಬೇಗನೆ ತಿರುಗಿ ಮನೆಗೆ ಬಂದ ಮೇಷ್ಟ್ರು, ತೀರ ನಿಶ್ಶಕ್ತರಾಗಿದ್ದರು.

ಮಬ್ಬುಗತ್ತಲಿನಲ್ಲಿ, ಮನೆಯ ಬಾಗಿಲಿನಲ್ಲಿ ಎದುರುಬದುರಿಗೆ ಮೌನವಾಗಿ ಕುಳಿತ ದಂಪತಿ ಗಳಿಗೆ, ತಾವು ಕಾಯುತ್ತಾ ಕುಳಿತಿರುವುದು ಮಗಳಿ ಗಾಗಿಯೋ ಅಥವಾ ಮಗಳ ಕುರಿತ ಸುದ್ದಿ ಗಾಗಿಯೋ ಎಂಬಂಥ ವಿಚಿತ್ರ ಅನುಮಾನ ವಾಯಿತು. ಅಂತೂ, ಯಾವ ಕ್ಷಣವನ್ನು ಎದುರಿ ಸಲು ದಂಪತಿಗಳು ದೇವರಲ್ಲಿ ಧೈರ್ಯ ಬೇಡುತ್ತಾ ಕುಳಿತಿದ್ದರೋ, ಆ ಕ್ಷಣ ಬಂದೇ ಬಿಟ್ಟಿತ್ತು, ರಾತ್ರಿ ಎಂಟು ಗಂಟೆಯ ಸಮಯದಲ್ಲಿ, ಪೃಥ್ವಿಕಾಳ ಗೆಳತಿ ಎಂದು ಹೇಳಿಕೊಂಡು ಬಂದ ಆ ಹಸಿರು ಲಂಗದ ಹುಡುಗಿಯ ರೂಪದಲ್ಲಿ. ಅವಳು ಹೇಳಿದ್ದರ ಸಾರಾಂಶವಿಷ್ಟೇ: ಹಿಂದೀ 'ಮಧ್ಯಮಾ' ಪರೀಕ್ಷೆಯ ತಯಾರಿಗೆ ಪದ್ಮನಾಭ ಎಂಬುವನ ಹತ್ತಿರ ಟ್ಯೂಷನ್‌ಗೆಂದು ಹೋಗು ತ್ತಿದ್ದ ಪೃಥ್ವಿಕಾ, ಕಳೆದೆರಡು ತಿಂಗಳಿನಿಂದ

## ಅಘನಾಶಿನಿ



ಅಘ ಎಂದರೆ ಪಾಪ, ದುಃಖ, ತೊಂದರೆ. ಇದು ನಿಘಂಟಿನ ಅರ್ಥ. ಇದನ್ನು ನಾಶ ಮಾಡುವವಳೇ ಅಘನಾಶಿನಿ. ತನ್ನ ಸುಂದರಾತಿ ಸುಂದರ ಬಳುಕಿನಿಂದ ಉತ್ತರ ಕನ್ನಡ ಜಿಲ್ಲೆಯಲ್ಲಿ ಹರಿದು ಅರಬ್ಬೀ ಸಮುದ್ರವನ್ನು ಸೇರುವ ಗೋಕರ್ಣ ಕ್ಷೇತ್ರಕ್ಕೆ ಹೋಗುವ ಹಾದಿಯಲ್ಲಿ, ವಿಶಾಲ ಸೇತುವೆಯಡಿ, ಘನಗಂಭೀರವಾಗಿ ತುಂಬಿಹರಿಯುತ್ತಾಳೆ. ಇದೇ ನದಿಯ ಒಂದು ಮಗ್ಗುಲನ್ನು, ದಶಕದ ಹಿಂದೆ ನೋಡಿದ್ದು.

ನದೀ ತಟಕ್ಕೆ ಸನಿಹದಲ್ಲಿ ಒಂದು ಆಲಯ. ಅದು ಗೋಪಾಲಕೃಷ್ಣ ದೇವಳವಿರಬೇಕು. ಅದು ಸಣ್ಣ ತಂಗುದಾಣ. ದೇವಳದಲ್ಲಿ ದೇವ ಮೂರ್ತಿ ಮೋಹಕವಾಗಿದೆ ಅನ್ನುವಷ್ಟೇ, ಸಹಜ ಸುಂದರ ಆವರಣದಲಿ ನಕ್ಕು ನಲಿವ ತುಂಟತನದ ಮರಿ ಗೋಪಾಲರುಗಳ ಜೀವಂತ ಕೇಕೆಯೂ ಇದೆ ಅಂದರೆ ಸರಿಯಾಗಬಹುದು. ಅವರ ನಗು, ಆಟ-ಪಾಠಗಳು ಸ್ವೇಚ್ಛ. ಭಟ್ಟರ ವಸತಿ ದೇವಳದ ಕಾಂಪೊಂಡಿನಲ್ಲೇ. ಮನೆಮಂದಿ ಜಗುಲಿ ಮೆಟ್ಟಲು ಎಲ್ಲೆಡೆ ಆಸೀನರು. ಜಗುಲಿಯೇ ಸುತ್ತಮುತ್ತಲ ಹಳ್ಳಿಗಳಿಗೆ ಅಂಚೆ ಆಫೀಸು. ಹೀಗಾಗಿ ಸದಾ ಜನಜಂಗುಳಿ. ಬಸ್ಸಿಗೆ ಕಾಯುವವರು, ಅಂಚೆಗೆ ಕಾಯುವವರೇ ಹೆಚ್ಚಾಗಿ ಗೋಪಾಲಕೃಷ್ಣ ದೇವರಿಗಾಗಿ ಕಾಯುವ ಭಕ್ತರು ಬಹು ವಿರಳ.

ಅಂದು ಗೋಕುಲಾಷ್ಟಮಿ ದಿನ. ದೇವಳ ನಂದಗೋಕುಲದಂತಿತ್ತು. ಹೊರ ಬಯಲಿನಲ್ಲಿ ಅಲ್ಲಿ, ಇಲ್ಲಿ ಗಿಡ್ಡ ಗೋವುಗಳು. ಮೋಡ, ನಿಲ್ಲದ ಮಳೆ. ಆದರೂ ಚಳಿಯಿಲ್ಲದ ಉಲ್ಲಾಸ ವಾತಾವರಣ. ಸನಿಹದ ಶಿರಸಿಯಿಂದ ಬಂದ, ತಂದ ಹಣ್ಣು, ಹಂಪಲು ಹೂ ಏನೇನೋ.



ಅಘನಾಶಿನಿ ನದಿ ಮೇಲೊಂದು ಸಿಮೆಂಟು ಸೇತುವೆ. ನದಿ ಇಲ್ಲಿ ತುಂಬಾ ದೊಡ್ಡದಲ್ಲ, ಅಗಲವೂ ಮಿತಿ ಮೀರಿಲ್ಲ. ಕಿವಿಗೆ ಬಿದ್ದ ಸಮಾಚಾರ, 'ನಲವತ್ತಾರು ದಿನದಿಂದ ಬಿಡದ ಮಳೆ ಸೇತುವೆಯ ಮೇಲೆಲ್ಲಾ ಪಾಚಿ. ನಡೆಯಲು ಜಾರಿಕೆಯ ಭಯ. ಅಕ್ಕ ಪಕ್ಕ ಆಧಾರವಿಲ್ಲದ ಬೋಳು ಸೇತುವೆ. ನೀರಿನಲ್ಲಿ ಕೊಚ್ಚಿಬಂದ ಮರದ ದೊಡ್ಡ ಕಾಂಡ ಸೇತುವೆಯ ತೂಬಿಗೆ ಅಡ್ಡಬಿದ್ದಿದೆ, ಏನೂ ತೊಂದರೆ ಇಲ್ಲದಂತೆ. ನಿಧಾನ, ಗಂಭೀರ ಹೆಜ್ಜೆ ಇಡುತ್ತಾ ಸೇತುವೆ ದಾಟಾಯ್ತು. ಭಯ ಹೋಯ್ತು. ಮುಂದೆ ಮೂರ್‍ನಾಲ್ಕು ಕಿ.ಮೀ. ನಡೆದರೆ ಕರ್ಜಗಿ ಗ್ರಾಮ. ದಾರಿಯುದ್ದಕ್ಕೂ ಕಾನನದ ಸೊಬಗು. ಅಡಿಕೆ, ತೆಂಗಿನ ತೋಟ, ಜುಳುಜುಳು ಹರಿವ ನೀರು. ಆ ಮಂಜುಳ ನಿನಾದ ಆತ್ಮೋನ್ನತಿಯ ಮಂತ್ರಘೋಷದಂತಿತ್ತು. ಆ ರಮಣೀಯ ನಿತ್ಯ ಹರಿದ್ವರ್ಣ ದೃಶ್ಯ ಕಣ್ಗೆ ಸಗ್ಗ ಸುಖ ನೀಡಿತ್ತು. ನಡೆದರೆ ಆಯಾಸವಿಲ್ಲದ ಆನಂದೋಲ್ಲಾಸ. ಬಂದೇ ಬಂತು ಕರ್ಜಗಿ ತಾಣ, ಅಲ್ಲೇ ಬಿಡಾರ. ಭಟ್ಟರ ಅಟ್ಟದ ಮನೆಯಲ್ಲಿ ಮೂರು ದಿನಗಳ ವಾಸ್ತವ್ಯ.

ಮುಂಜಾನೆ ಹೊರಟೆವು, ಪ್ರಕೃತಿ ವೀಕ್ಷಣೆಗೆ. ಅನತಿ ದೂರದಲ್ಲಿ ಕಂಡಿತು, ಸೊಬಗಿನ ಸಿರಿ. ಅಲ್ಲೊಂದು ಕೆರೆ. ಅಲ್ಲಿಂದ ಮನೆಗೆ ವರ್ಷವಿಡೀ ನೀರು ಪೂರೈಕೆಯಾಗುತ್ತದೆ. ಬದಿಯಲ್ಲೊಂದು ಸೊಗದ ತಾಣ. ಇಳಿಜಾರು ಹಸಿರು ಹುಲ್ಲಿನ ಚಾದರ. ಹುಲ್ಲಿನ ಮೇಲೆಲ್ಲಾ ರಮಣೀಯ ಮುತ್ತಿನ ಮಣಿಗಳು. ಗಾಡಿ ತಂದು ತುಂಬಿ ನೂರಾರು ರಾಜಕುವರಿಯರಿಗೆ ಕೊಡುವಷ್ಟು. ಪ್ರಕೃತಿ ದೇವಿಗೆ ಉರುಳು ಸೇವೆ ಸಲ್ಲಿಸುವ ಮನದಾಸೆ. ನಾಜೂಕಿನ, ಬಿಂಕದ, ಬಿಗುಮಾನ ಅಡ್ಡಿ, ತೊಟ್ಟ ವಸ್ತ್ರಗಳ ಗೊಡವೆ.

ಹೊರಟೆವು, ಪಕ್ಕದ ಬೆಟ್ಟ ಹತ್ತಲು. ಎಲ್ಲರ ಕೈಲೂ ಛತ್ರಿ. ಅದರಿಂದ ಲಯದ ನಡಿಗೆ. ಬೆಟ್ಟ ಹತ್ತಿ ಎರಡು ಮೂರು ಕಡೆ ಜಾರಿ ಬಿದ್ದದ್ದು ಆಯಿತು. ಅಪಾಯ ರಹಿತ. ಬೆಟ್ಟದಲ್ಲಿ ದಾರಿ ತಪ್ಪಿ, ಎರಡು ಕಾಲೂ ಕಳೆದುಕೊಂಡೆವು, ನಡಿಗೆಯಲ್ಲಿ. ಅದೊಂದು ಮಾಯಾ ಕೆಸರು ಗದ್ದೆಯಾಗಿತ್ತು. ಕೆಲವಾರು ಗಂಟೆಗಳು, ಒಂದೂವರೆ-ಎರಡು ಪೂಟು ಕಾಲು ಆಳಕ್ಕಿಳಿದು, ಕಾಲುಗಳೇ ಇಲ್ಲದಂತಾಗಿತ್ತು. ಅಂತೂ ಯಾವುದೋ ದಡ ಸೇರಿ, ಬಿಕ್ಕೆ ಹಣ್ಣು-ಒಂದೋ, ಎರಡೋ-ತಿಂದೆವು. ಅದು ಬಿಕ್ಕೆಹಣ್ಣಿನ ಕಾಲವಲ್ಲವಂತೆ. ಬೆಟ್ಟದ ಮೇಲಿನ ಮೋಡಗಳು ನಮ್ಮ ಕೈಯಲ್ಲೇ ಅನ್ನಿಸುವಷ್ಟು ಶೀತಲ ಅನುಭವ. ಅದರೊಟ್ಟಿಗೇ ಬೆವರ ಸಾಲು ಮುತ್ತು. ಉಸಿರಿನ ವೇಗ ತುಸು ಏರುಪೇರಾಗುತ್ತಿತ್ತು.

ಬೆಟ್ಟದಿಂದ ಕಾಣುವ ನಿಸರ್ಗ ಸೌಂದರ್ಯ ವರ್ಣನಾತೀತ. ಮಳೆಯಲೂ ಅಡ್ಡಾಡಿದೆವು, ಸಾಕಷ್ಟು ಕಿರುಚಿದೆವು, ಕೊರಳ ಹಿಗ್ಗಿಸಿದೆವು. ಯಾವ ದೇವರೂ ಪ್ರತ್ಯಕ್ಷವಾಗಲಿಲ್ಲವಾದರೂ ಮನದ ತುಂಬಾ ಉಲ್ಲಾಸ, ಅತೀತ ಅಲೌಕಿಕ ಆನಂದ. ಹಾರಿ ಕೈ ತಪ್ಪಿಸಿ ಓಡುವ ಛತ್ರಿ, ಗಟ್ಟಿ ಹಿಡಿದೆವು. ಕುಣಿದೆವು, ನಲಿದೆವು. ಬೆಟ್ಟ ಇಳಿದು ಬರುವಷ್ಟರಲ್ಲಿ ಊಟದ ಸಮಯ ಮೀರಿತ್ತು. ಉಂಡು ವಿಶ್ರಮಿಸೆ ಗಡದ್ದು ನಿದ್ದೆ. ಅದರಲ್ಲಿ ಸಪೂರ ಕನಸು; ಹಿಮಮಣಿಗಳ ಮೇಲೆ ಹೊರಳಾಡಿದ ಕನಸು.

ಭಟ್ಟರ ಮನೆಯ ಪಕ್ಕದ ಮನೆಯಲ್ಲಿ ಕೃಷ್ಣನ ಪೂಜೆ. ಎಲ್ಲಾ ತೋಟದ ಮನೆಗಳಿಂದ ಬಂದರು ನಾರೀಮಣಿಯರು. ಹೂ, ಹಣ್ಣು ತಂದರು. ಸಂಜೆಯವರೆಗೂ ಹಾಡೇಹಾಡು; ಕೃಷ್ಣನ ಹಾಡು. ಪಿಳ್ಳಂಗೋವಿಯ ಕೃಷ್ಣ ನುಡಿಸಿದ ಮುರಲೀಗಾನ. ಬೆಟ್ಟಕ್ಕೆ ಮೇಯಲು ಹೋದ ಪುಟ್ಟ ಪುಟ್ಟ ಗೋವುಗಳು, ನಡೆದವು ಕೊಟ್ಟಿಗೆಯ ಕಡೆಗೆ.



... ದಶಕದ ಹಿಂದೆ ಅಘನಾಶಿನಿ ದಡದಲ್ಲಿ ಓಡಾಡಿದ ನೆನಪು ಇಂದು, ಗೋಕುಲಾಷ್ಟಮಿ ದಿನ, ಹೀಗೆ ಏಕೆ ನೆನಪಾಗುತ್ತಿದೆಯೋ?

ಸರ್ಜಾಪುರ

ವೆಂಕಟಾಚಲ



ಅಪಾರ

# ಮೇಷ್ಟ್ರ ಸೈಕಲ್ಲಿನ ಬೇಬಿ ಸೀಟು



ಶನಿವಾರದ ಮಾರ್ನಿಂಗ್‌ಸ್ಕೂಲಿನ ಎರಡನೇ ಪೀರಿಯಡ್‌ನಲ್ಲಿ, ಎಯ್ತ್ 'ಬಿ' ವಿದ್ಯಾರ್ಥಿಗಳಿಗೆ 'ಸರಳರೂಪಕ್ಕೆ ತನ್ನಿ' ಎಂಬ ಲೆಕ್ಕದ ಎರಡನೇ ಸ್ಟೆಪ್ಪನ್ನು ಬೋರ್ಡಿನ ಮೇಲೆ ಮಾಡಿ ಬಾಗಿಲ ಕಡೆಗೆ ತಿರುಗಿದ ಗೋಪಾಲಯ್ಯ ಮೇಷ್ಟ್ರು, ಅಲ್ಲಿ ಎಷ್ಟೋ ಹೊತ್ತಿನಿಂದ ಎಂಬಂತೆ ನಿಂತಿದ್ದ ತಮ್ಮ ಧರ್ಮಪತ್ನಿಯನ್ನು ಕಂಡು ತುಸು ಅಚ್ಚರಿಗೊಂಡರು. ಮರುಕ್ಷಣವೇ, ತಮ್ಮ ಇಪ್ಪತ್ತೆಂಟು ವರ್ಷಗಳ ಸರ್ವೀಸಿನಲ್ಲಿ ಶಾರದಮ್ಮ, ಎಂದೂ, ಯಾವ ಕಾರಣಕ್ಕೂ, ತಮ್ಮನ್ನು ಹುಡುಕಿಕೊಂಡು ಶಾಲೆಯ ತನಕ ಬಂದಿರಲಿಲ್ಲವೆಂಬುದು ನೆನಪಾಗಿ, ಸಣ್ಣ ಆತಂಕದಿಂದಲೇ, ಲೆಕ್ಕವನ್ನು ಅಲ್ಲಿಗೇ ಕೈಬಿಟ್ಟು, 'ಗಲಾಟೆ ಮಾಡದೆ ಪ್ರಯತ್ನಿಸುತ್ತಿರಿ' ಎಂದು ತಮ್ಮ ವಿದ್ಯಾರ್ಥಿಗಳಿಗೆ ಹೇಳಿ ಹೊರಬಂದರು.



ಸೃಜನ್



ಮೇಷ್ಟ್ರು ಹೊರಗೆ ಬಂದ ತಕ್ಷಣ, ಗಾಬರಿಗೊಂಡಿದ್ದ ಶಾರದಮ್ಮ, ಮಗಳು ಪೃಥ್ವಿಕಾ ಬೆಳಗ್ಗಿನಿಂದ ಮನೆಯಲ್ಲಿಲ್ಲದ್ದನ್ನೂ, ಎರಡು ದಿನ ದಿಂದ ಅವಳು ಒಂಥರಾ ಇದ್ದುದನ್ನೂ, ತಮಗೆ ತಿಳಿಸದೆ ಎಂದೂ ಹೀಗೆ ಹೊರಗೆ ಹೋದವಳಲ್ಲ ವೆಂಬುದನ್ನೂ, ಕಡೆಗೆ ತಮಗೇಕೋ ಸಿಕ್ಕಾಬಟ್ಟೆ ಭಯವಾಗುತ್ತಿದೆಯೆಂಬುದನ್ನೂ ಒಂದೇ ಉಸಿರಿ ನಲ್ಲಿ ಹೇಳಿಮುಗಿಸಿದರು. 'ಗಾಬರಿ ಪಡಬೇಡ, ಪುಟ್ಟಿಯೇನು ಪುಟ್ಟಮಗುವೇ? ಕಾಲೇಜು ಓದೋ ಹುಡುಗಿ' ಎಂಬ ಸಮಾಧಾನದ ಮಾತಾಡಿದರೂ, ಮೇಷ್ಟ್ರಿಗೂ ಎಂಥದೋ ಆತಂಕ ನಿಧಾನವಾಗಿ ತುಂಬಿಕೊಳ್ಳುತ್ತಿದ್ದುದು, ಅವರು ತಕ್ಷಣ ಹೆಡ್ ಮಾಸ್ಟರ ಕೋಣೆಗೆ ಹೋಗಿ, ಅರ್ಧ ದಿನದ ಸಿ ಎಲ್ ಹಾಕಿ ಬಂದದ್ದರಿಂದಲೇ ತಿಳಿಯುವಂತಿತ್ತು. ಮನೆಗೆ ಹೋಗುವ ದಾರಿಯಲ್ಲಿ ಶಾರದಮ್ಮ, ಮಗಳು ಇಲ್ಲದಿರುವುದನ್ನು ತಾನು ಮೊದಲಿಗೆ ಹೇಗೆ ಕಂಡುಕೊಂಡೆ ಎಂಬುವುದನ್ನ ಪದೇ ಪದೇ ಅಳುವ ದನಿಯಲ್ಲಿ ವಿವರಿಸುವಾಗ, ಮೇಷ್ಟ್ರು ತಾಳ್ಮೆ ಕಳೆದುಕೊಂಡು, 'ಅಂದರೆ ನಿನ್ನ ಮಾತುಗಳ ಅರ್ಥವೇನು? ನಮ್ಮ ಪುಟ್ಟಿ ಯಾವನ ಜೊತೆಗೋ ಓಡಿಹೋಗಿದ್ದಾಳೆ ಅಂತಲಾ?' ಎಂದು ಸಿಡಿಮಿಡಿಗೊಂಡರು. ಮೇಷ್ಟ್ರು ರೇಗಿ ದ್ದಕ್ಕೋ, ತಮ್ಮ ಮನದಾಳದಲ್ಲಿನ ಅನುಮಾನ ವನ್ನು ಆಡಿ ತೋರಿಸಿದ್ದಕ್ಕೋ, ಅಂತೂ ಮನೆ ತಲುಪುವತನಕ ಶಾರದಮ್ಮ ಮತ್ತೆ ಮಾತಾಡಲಿಲ್ಲ.

ಮನೆಗೆ ಬಂದ ಮೇಷ್ಟ್ರು, ಮಗಳ ಕೋಣೆಯಲ್ಲಿ, ಏನು ಎಂಬುದು ಗೊತ್ತಿಲ್ಲ ದೆಯೂ ಏತಕ್ಕಾಗಿಯೊ ಹುಡುಕಾಡಿದರು. ಗೋಡೆಗೆ ನೇತು ಹಾಕಿದ ಪೃಥ್ವಿಕಾಳ ಬಟ್ಟೆ ಗಳನ್ನೂ, ಮುಕ್ತಾಯದ ಹಂತದಲ್ಲಿದ್ದ ಅವಳ ಹೊಸ ಪೇಂಟಿಂಗನ್ನೂ, ಗೋಡೆಗೆ ಹಚ್ಚಿದ ಅವಳ ಇಷ್ಟದ ಸ್ಟೆಫಿಗ್ರಾಫ್‌ಳ ಪೋಸ್ಟರನ್ನೂ ನೋಡುತ್ತ, ಮೇಷ್ಟ್ರಿಗೆ, ಮಗಳು ಒಳಗೆಲ್ಲೋ ಸ್ನಾನ ಮಾಡುತ್ತಿರಬಹುದು ಅಷ್ಟೇ ಎಂದೆನಿಸಿಬಿಟ್ಟಿತು. ಆದರೆ ಸಂಜೆಯಾದರೂ ಪೃಥ್ವಿಕಳ ಸುಳಿವೇ ಇಲ್ಲದಿರಲು, ಮನೆಯ ಉಷ್ಣತೆ ನಿಧಾನ ವಾಗಿಯೇ ಏರತೊಡಗಿತು. ಮನೆಯ ಹೊರಗೆ, ಒಳಗೆ, ಮತ್ತೆ ಗೇಟಿನವರೆಗೆ ಹೋಗಿ, ಬಗ್ಗಿ, ಬೀದಿಯ ಅಂಚಿನವರೆಗೂ ದೃಷ್ಟಿ ಹಾಯಿಸಿ ಮಾಡುತ್ತಿದ್ದ ಮೇಷ್ಟ್ರಿಗೆ, ಇನ್ನೇನು ಅಳಲು ಸಿದ್ಧ ಳಾಗಿ ನಿಂತಿರುವ ತಮ್ಮ ಹೆಂಡತಿಯತ್ತ ನೋಡುವ ಧೈರ್ಯವಾಗಲಿಲ್ಲ. ಸ್ವಲ್ಪ ಹೊತ್ತಿನ ಬಳಿಕ ಒಳಗೆ ಹೋಗಿ, ಪ್ಯಾಂಟು ಧರಿಸಿ, ಚಪ್ಪಲಿ ಮೆಟ್ಟಿ ಕೊಂಡು, ಪತ್ನಿಗೆ, 'ನೋಡು, ಪುಟ್ಟಿ ಅಂಥವ ಳಲ್ಲ, ನೀನು ಧೈರ್ಯವಾಗಿರು, ನಾನು ಅವಳ ಗೆಳತಿಯರ ಮನೆಗಳಲ್ಲಿ ವಿಚಾರಿಸುತ್ತೀನಿ' ಎಂದು ಹೇಳಿ ಮನೆಯಿಂದ ಹೊರಬಿದ್ದರು. ಟಿವಿಯಲ್ಲಿ ಮೆಗಾಸೀರಿಯಲ್ ನೋಡುತ್ತಾ ಕುಳಿತಿದ್ದ ದಪ್ಪ ನೆಯ ಹೆಂಗಸರ, 'ಬೆಳಿಗ್ಗೆಯಿಂದಲೂ ಕಾಣ್ತಾ ಇಲ್ವಾ?', 'ರಾತ್ರಿ ಇದ್ದಳೋ?', 'ನಿಮಗೆ ಹೇಳದೇ ಹೋದಳಾ?' ಎಂಬಂಥ ರಾಗದ ಪ್ರಶ್ನೆಗಳನ್ನ ಎದುರಿಸಲಾರದೆ ಕಂಗಾಲಾಗಿ, ಬೇಗನೆ ತಿರುಗಿ ಮನೆಗೆ ಬಂದ ಮೇಷ್ಟ್ರು, ತೀರ ನಿಶ್ಶಕ್ತರಾಗಿದ್ದರು.

ಮಬ್ಬುಗತ್ತಲಿನಲ್ಲಿ, ಮನೆಯ ಬಾಗಿಲಿನಲ್ಲಿ ಎದುರುಬದುರಿಗೆ ಮೌನವಾಗಿ ಕುಳಿತ ದಂಪತಿ ಗಳಿಗೆ, ತಾವು ಕಾಯುತ್ತಾ ಕುಳಿತಿರುವುದು ಮಗಳಿ ಗಾಗಿಯೋ ಅಥವಾ ಮಗಳ ಕುರಿತ ಸುದ್ದಿ ಗಾಗಿಯೋ ಎಂಬಂಥ ವಿಚಿತ್ರ ಅನುಮಾನ ವಾಯಿತು. ಅಂತೂ, ಯಾವ ಕ್ಷಣವನ್ನು ಎದುರಿ ಸಲು ದಂಪತಿಗಳು ದೇವರಲ್ಲಿ ಧೈರ್ಯ ಬೇಡುತ್ತಾ ಕುಳಿತಿದ್ದರೋ, ಆ ಕ್ಷಣ ಬಂದೇ ಬಿಟ್ಟಿತ್ತು, ರಾತ್ರಿ ಎಂಟು ಗಂಟೆಯ ಸಮಯದಲ್ಲಿ, ಪೃಥ್ವಿಕಾಳ ಗೆಳತಿ ಎಂದು ಹೇಳಿಕೊಂಡು ಬಂದ ಆ ಹಸಿರು ಲಂಗದ ಹುಡುಗಿಯ ರೂಪದಲ್ಲಿ. ಅವಳು ಹೇಳಿದ್ದರ ಸಾರಾಂಶವಿಷ್ಟೇ: ಹಿಂದೀ 'ಮಧ್ಯಮಾ' ಪರೀಕ್ಷೆಯ ತಯಾರಿಗೆ ಪದ್ಮನಾಭ ಎಂಬುವನ ಹತ್ತಿರ ಟ್ಯೂಷನ್‌ಗೆಂದು ಹೋಗು ತ್ತಿದ್ದ ಪೃಥ್ವಿಕಾ, ಕಳೆದೆರಡು ತಿಂಗಳಿನಿಂದ

ಅವನನ್ನೇ ಪ್ರೀತಿಸತೊಡಗಿದ್ದಳು ಮತ್ತು ಮನೆಯಲ್ಲಿ ಹೇಳುವ ಧೈರ್ಯವಾಗದೆ, ಈ ದಿನ ಬೆಳಗ್ಗೆ, ಅವನೊಡನೆ ಎಲ್ಲಿಗೋ ಓಡಿಹೋಗಿದ್ದಳು.

ಹಸಿರು ಲಂಗದ ಹುಡುಗಿ ಯಾವಾಗ ಹೋದಳೋ ತಿಳಿಯಲಿಲ್ಲ. ಮಾಸ್ತರು ಆಕಾಶ ವನ್ನೇ ದಿಟ್ಟಿಸುತ್ತಾ ಕೂತುಬಿಟ್ಟರು, ಏನೊಂದೂ ಮಾತಾಡದೆ. ಒಸ್ನೆಲೆಗೆ ಶಾರದಮ್ಮನ ಮುಸಿ ಮುಸಿ ಅಳು ಇತ್ತು. ಹಾಗೇ ಅದೆಷ್ಟು ಹೊತ್ತು ಕುಳಿತಿದ್ದರೋ, ಮೇಷ್ಟ್ರು, ಒಮ್ಮೆಲೆ ಪತ್ನಿಯೆಡೆಗೆ ತಿರುಗಿ ಗಡುಸಾದ ಧ್ವನಿಯಲ್ಲಿ, 'ಹೀಗೇ ಅಳ್ತಾ ಕೂತಿರ್ತಿಯಾ ಇಲ್ಲಾ ಎದ್ದು ಅಡಿಗೆ ಮಾಡ್ತಿಯಾ' ಎಂದು ರೇಗಿದರು. ಆಕೆ ಕುಳಿತಲ್ಲಿಂದ ಏಳದೆ ಅಳುವುದನ್ನು ಮುಂದುವರೆಸಲು, ಮೇಷ್ಟ್ರು ವಿಚಿತ್ರ ದನಿಯಲ್ಲಿ ಚೀರಿದರು, "ಯಾವ ಕತ್ತೆಮುಂಡೆ ಎಲ್ಲಿ ಹಾಳಾದರೆ ನಂಗೇನು? ನೀನೇನು ಎದ್ದು ಅಡಿಗೆ ಮಾಡ್ತಿಯೋ ಇಲ್ಲ ಗ್ರಹಚಾರ ಬಿಡಿಸ್ಬೇಕೋ?" ಶಾರದಮ್ಮ ಕಣ್ಣೊರೆಸಿಕೊಳ್ಳುತ್ತಾ ಎದ್ದುನಡೆದ ಎಷ್ಟೋ ಹೊತ್ತಿನ ನಂತರವೂ ಮೇಷ್ಟ್ರು ಕಂಪಿಸುತ್ತಲೇ ಇದ್ದರು.



ಪೃಥ್ವಿಕಾ-ಪುಟ್ಟಿ-ಗೋಪಾಲಯ್ಯ ಮೇಷ್ಟ್ರ ಮುದ್ದಿನ ಒಬ್ಬಳೇ ಮಗಳು. ಅವಳೂ ಅಮ್ಮನಿಗಿಂತ ಅಪ್ಪನನ್ನೇ ಹಚ್ಚಿಕೊಂಡು ಬೆಳೆದ ಹುಡುಗಿ. ಅವಳು ಚಿಕ್ಕವಳಿದ್ದಾಗ ಮೇಷ್ಟ್ರು, ತಮ್ಮ ಮಿತ್ರ, ವಿಜಯಾ ಬ್ಯಾಂಕ್ ಉದ್ಯೋಗಿ ಸುಬ್ರಮಣ್ಯಂ ಅವರು ಎಲ್ಲಿಂದಲೋ ತರಿಸುತ್ತಿದ್ದ ಸೋವಿಯಟ್ ರಷ್ಯಾದ ನುಣುಪು ಹಾಳೆಗಳ ಬಣ್ಣದ ಚಿತ್ರಗಳ ಪುಸ್ತಕಗಳನ್ನು ಮಗಳಿಗೋಸ್ಕರ ಬೇಡಿ ತರುತ್ತಿದ್ದರು. ಅದರಲ್ಲಿನ ಚಿತ್ರಗಳನ್ನು ನೋಡುವುದು, ನುಣುಪು ಹಾಳೆಗಳನ್ನು ತನ್ನ ನುಣುಪು ಕೆನ್ನೆಗಳಿಗೆ ಒತ್ತಿಕೊಳ್ಳುವುದು ಎಂದರೆ ಪುಟ್ಟ ಪೃಥ್ವಿಕಾಗೆ ಎಲ್ಲಿಲ್ಲದ ಖುಷಿ. ಮಗಳಿಗೆ ಚಿತ್ರಕಲೆಯಲ್ಲಿನ ಆಸಕ್ತಿಯನ್ನು ಕಂಡ ಮಾಸ್ತರು, ಅವಳು ನಾಲ್ಕನೇ ಕ್ಲಾಸಿನಲ್ಲಿರುವಾಗ ಒಂದು ದಿನ, ಬಣ್ಣದ ಕ್ರೆಯಾನ್ಸ್ ತಂದುಕೊಟ್ಟಿದ್ದರು. ಪೃಥ್ವಿಕಾ ಅವನ್ನು ತೆಗೆದುಕೊಂಡು, ಮೇಷ್ಟ್ರ 'ನೋಟ್ಸ್ ಆಫ್ ಲೆಸನ್' ಪುಸ್ತಕದಲ್ಲಿ ದೊಡ್ಡ ಹಸಿರು ಗಿಳಿಯ ಚಿತ್ರ ಮೂಡಿಸಿದ್ದಳು. ಅವತ್ತೇ ಇರಬೇಕು, ಮೇಷ್ಟ್ರು ಮೊದಲ ಬಾರಿ ಮಗಳಿಗೆ ಹೊಡೆದದ್ದು. ಅದೇ ಕಡೆಯ ಸಲವೂ ಅನಿಸುತ್ತೆ. ಪೃಥ್ವಿಕಾ ಬರೆಯುತ್ತಿದ್ದ ಈಶ್ವರನ ಚಿತ್ರಗಳಲ್ಲಿ, ಶಿವ ಪ್ರಶಾಂತವಾಗಿ ನಗುತ್ತಾ, ತನ್ನೆರಡೂ ಕಣ್ಣುಗಳನ್ನು ಅರ್ಧಂಬರ್ಧ ಮುಚ್ಚಿಕೊಂಡಿದ್ದರೂ, ಅದೇಕೊ ಹಣೆಗಣ್ಣು ಮಾತ್ರ ಅಗಲವಾಗಿ ತೆರೆದಿರುತ್ತಿದ್ದ. ಮೇಷ್ಟ್ರು ಅದನ್ನ ಹೇಳಿ, ಯಾವಾಗಲೂ ಮಗಳನ್ನು ಛೇಡಿಸುತ್ತಿದ್ದರು. ಅವಳು ಆಗ ಕೋಪದಿಂದ ಮುಖ ಊದಿಸಿಕೊಂಡರೆ ಮೇಷ್ಟ್ರು, 'ಪುಟ್ಟಿ, ನೀನು ಮಾತ್ರ ಕೋಪ ಮಾಡಿಕೊಂಡು ಉರಿಗಣ್ಣು ಬಿಡಬೇಡ ತಾಯಿ, ಶಿವ ಬಿಟ್ಟರೂ ಪರವಾಗಿಲ್ಲ' ಎನ್ನುತ್ತಾ ಮತ್ತೆ ನಗಿಸುತ್ತಿದ್ದರು.

ಒಮ್ಮೆ, ಅವಳು ಏಳನೇ ಕ್ಲಾಸಿನಲ್ಲಿದ್ದಾಗ ಇರಬೇಕು, ಅವಳಿಗೆ ಅದೇನೋ ಈಜು ಕಲಿಯುವ ಉಮೇದಿ ಬಂದುಬಿಟ್ಟಾಗ, ಶಾರದಮ್ಮ 'ಬೇಡವೇ ಬೇಡ' ಎಂದುಬಿಟ್ಟರು. ಮೇಷ್ಟ್ರು ಮಾತ್ರ, 'ಕಲಿಯಲಿ ಬಿಡೇ, ಯಾವತ್ತೋ ಒಂದಿನ ಉಪಯೋಗವಾಗುತ್ತೆ' ಎಂದು, ಮುದ್ದಿನ ಮಗಳನ್ನು ತಾವೇ ಊರ ಹೊರಗಿದ್ದ ಚಾನಲ್‌ಗೆ ಕರ್ಕೊಂಡುಹೋಗಿ, ಮುಂಜಾನೆಯ ತಣ್ಣೀರಿನಲ್ಲಿ ಈಜು ಕಲಿಸಿದ್ದರು. ನೀರು ಸೋಕಿದ ಕ್ಷಣ ಚಳಿಗೋ, ಆನಂದಕ್ಕೋ, ಭಯಕ್ಕೋ ಅವಳು ಹಾಕಿದ ಕೇಕೆ, ಅದರ ರಾಗಸಮೇತವಾಗಿ ಮೇಷ್ಟ್ರ ಕಿವಿಯಲ್ಲಿಯೇ ಇದೆ.

ಇಂದಿಗೂ. ಮೇಷ್ಟ್ರು ಮೊನ್ನೆ ಹೋದವರ್ಷ ಎಸ್ಸೆಲ್ಸಿ ಮೌಲ್ಯಮಾಪನಕ್ಕೆಂದು ಬೆಂಗಳೂರಿಗೆ ಹೋಗಿದ್ದಾಗ, ಅಮ್ಮ ಬರೆದ ಇನ್‌ಲ್ಯಾಂಡ್ ಪತ್ರದಲ್ಲೇ ಪೃಥ್ವಿಕಾ, 'ನನಗೆ ಒಂದು ಜೀನ್ಸ್ ಪ್ಯಾಂಟ್ ಬೇಕೇಬೇಕು, ನೀಲಿ ಬಣ್ಣದ್ದು' ಎಂದು ಸೇರಿಸಿದ್ದಳು. ಅದೇ ಪತ್ರದ ಬುಡದಲ್ಲಿ. ಅಂಟುಹಾಕುವ ಮುನ್ನ ಶಾರದಮ್ಮ, 'ಜೀನ್ಸ್ ಪ್ಯಾಂಟ್ ಖಡಾಖಂಡಿತವಾಗಿಯೂ ಬೇಡ, ಬೇಕಾದರೆ ಒಂದು ಸಲ್ವಾರ್ ಕಮೀಜ್ ತರುವುದು' ಎಂದು ಬರೆದಿದ್ದರು, ಮಗಳಿಗೆ ತೋರಿಸದಂತೆ. ಆದರೆ ಮೇಷ್ಟ್ರು ಬೆಂಗಳೂರಿಂದ ಬರುವಾಗ, ಒಂದು ನೀಲಿಬಣ್ಣದ ಜೀನ್ಸ್ ಪ್ಯಾಂಟು ತಂದು, 'ಒಂದೇ ಒಂದು ಇರಲಿ ಬಿಡೇ, ಆದ್ರೆ ಸ್ಕೂಲಿಗೆ ಹಾಕಬಾರದು ಪುಟ್ಚೀ' ಎಂದಿದ್ದರು. ಅದಕ್ಕೇ ಪೃಥ್ವಿಕಾಗೆ ಅಪ್ಪ ಎಂದರೆ ಪ್ರಾಣ.

ಪೃಥ್ವಿಕಾಗೆ ಸ್ಟೆಫಿ ಎಂದರೂ ಅಷ್ಟೇ ಪ್ರಾಣ. ಅವತ್ತೊಂದು ದಿನ, ಇಪ್ಪತ್ತೈದು ರೂಪಾಯಿ ಕೊಟ್ಟು, ಸ್ಟೆಫಿಯ ದೊಡ್ಡ ಪೋಸ್ಟರೊಂದನ್ನು ತಂದು ತನ್ನ ಕೋಣೆಯ ಗೋಡೆಗೆ ಅಂಟಿಸಿದಳು. ಮತ್ತೆ ಹದಿನೈದು ದಿನದ ನಂತರ, ಗೆಳತಿಯೊಬ್ಬಳಿಂದ ತಗೊಂಡು ಬಂದ ಬಿಳಿ ಸ್ಕರ್ಟ್ ತೊಟ್ಟುಕೊಂಡು, ಕೈಯಲ್ಲಿ ಟೆನಿಸ್ ಬ್ಯಾಟ್ ಹಿಡಿದುಕೊಂಡು, ಹಣೆಗೊಂದು ಪುಸ್ತಕಕ್ಕೆ ಹಾಕುವಂಥ ರಬರ್‌ಬ್ಯಾಂಡ್ ಹಾಕಿಕೊಂಡು, ಸ್ಟುಡಿಯೋಗೆ ಹೋಗಿ, ಥೇಟ್ ಸ್ಟೆಫಿಯ ಭಂಗಿಯಲ್ಲೇ ಫೋಟೋ ತೆಗಿಸಿಕೊಂಡಳು. 'ಸೈಡ್ ಆ್ಯಂಗಲ್‌ನಿಂದ ಆ ಫೋಟೋದಲ್ಲಿ ನೀನು ಸ್ವಲ್ಪ ಸ್ಟೆಫಿಯ ಥರಾನೇ ಕಾಣ್ತೀ ಪುಟ್ಚಿ' ಎಂದು ಮೇಷ್ಟ್ರು ಮಗಳನ್ನು ಉಬ್ಬಿಸುವರು. ತೀರಾ ಮೊನ್ನೆ, ಸ್ಟೆಫಿ ರಿಟೈರಾದಾಗಲಂತೂ ಪೃಥ್ವಿಕಾ ಅತ್ತೇಬಿಟ್ಟಿದ್ದಳು. ಸ್ಟೆಫಿಯ ಬಾಯ್ ಫ್ರೆಂಡ್ ಎಂಬ ಕಾರಣಕ್ಕಾಗಿಯೇ ಅವಳು ಅಗಾಸ್ಸಿಯನ್ನೂ ಇಷ್ಟಪಡುತ್ತಿದ್ದಳು.

ಪೃಥ್ವಿಕಾಗೆ ಮೊದಲಿನಿಂದಲೂ 'ಡೈರಿಮಿಲ್ಕ್' ಚಾಕಲೇಟ್ ಎಂದರೆ ಬಹಳ ಇಷ್ಟ ಎಂದು ಮೇಷ್ಟ್ರು ಆಗಾಗ ಅವನ್ನು ತರುತ್ತಿದ್ದರು. ಪೃಥ್ವಿಕಾ ಅವನ್ನು ತಿಂದಾದ ಮೇಲೆ, ನೇರಳೇ ಬಣ್ಣದ ಕವರುಗಳನ್ನ ಜೋಪಾನವಾಗಿ ಪುಸ್ತಕದ ಹಾಳೆಗಳ ನಡುವೆ ಶೇಖರಿಸುತ್ತಿದ್ದಳು. ಮೇಷ್ಟ್ರು, ಪೃಥ್ವಿಕಾ ಚಿಕ್ಕವಳಾಗಿದ್ದಾಗ ಅವಳಿಗೆಂದು ತಮ್ಮ ಸೈಕಲ್ಲಿಗೆ ಒಂದು ಪುಟ್ಟ ಸೀಟನ್ನು ಹೆಚ್ಚುವರಿಯಾಗಿ ಹಾಕಿಸಿದ್ದರು. ಈಗ, ಪೃಥ್ವಿಕಾ ದೊಡ್ಡವಳಾಗಿ, ಅದರ ಮೇಲೆ ಕುಳಿತುಕೊಳ್ಳುವುದನ್ನ ಬಿಟ್ಟು ಎಷ್ಟೋ ದಿನಗಳಾಗಿದ್ದರೂ, ತನಗೇ ಒಂದು ಸೈಕಲ್ ಬೇಕು- lady bird ಎನ್ನುತ್ತಿರುವಾಗಲೂ, ಮೇಷ್ಟ್ರರಿಗೆ ಆ ಪುಟ್ಟ ಸೀಟನ್ನು ತೆಗೆಸಲು ಮನಸ್ಸಾಗದೆ ಹಾಗೇ ಬಿಟ್ಟಿದ್ದರು. ಯಾವಾಗಲಾದರೂ ಮನೆಗೆ ಬಂದ ಅತಿಥಿಗಳು ಆ ಪುಟ್ಟ ಸೀಟನ್ನು ನೋಡಿ, 'ಅರೇ, ನಿಮ್ಮ ಮನೆಯಲ್ಲಿ ಪುಟ್ಟ ಮಗುವೇ ಇಲ್ಲವಲ್ಲ' ಎಂದು ಉದ್ಗಾರ ತೆಗೆಯುತ್ತಿದ್ದರು.

ಎಸ್ಸೆಸೆಲ್ಸಿ ಪರೀಕ್ಷೆ ಹತ್ತಿರವಾದಂತೆ, ಮೇಷ್ಟ್ರು, ಮಗಳಿಗೆ ಚೆನ್ನಾಗಿ ಓದು ಅಂತ ಒತ್ತಾಯ ಮಾಡುತ್ತಿದ್ದರು. ಒಮ್ಮೊಮ್ಮೆ, 'ಗಣಿತ ಮೇಷ್ಟ್ರ ಮಗಳು, ಮ್ಯಾಥ್ಸ್‌ನಲ್ಲಿ ನೈಂಟಿ ಮೇಲೆ ತೆಗಿಬೇಕು ಗೊತ್ತಾಯ್ತಾ?' ಎಂದು ಆದೇಶ ಹೊರಡಿಸುತ್ತಿದ್ದರು. ಮರುಗಳಿಗೆ ನಾನೇಕೆ ಮಗುವಿನ ಮೇಲೆ ಅನಗತ್ಯ ಒತ್ತಡ ಹೇರುತ್ತಿರುವೆ ಎಂದೆನಿಸಿ, 'ಪುಟ್ಚಿ, ಗಣಿತ ಅಂತೇನಿಲ್ಲ ಎಲ್ಲಾನೂ ಒಂದೇ ಥರ ಓದು, ಟೆನ್ಷನ್ ಮಾಡಿಕೊಳ್ಳೋದು ಬೇಡ' ಎನ್ನುತ್ತಿದ್ದರು. ಪೃಥ್ವಿಕಾ ಫಸ್ಟ್‌ಕ್ಲಾಸಿನಲ್ಲಿ ಪಾಸಾದಳು. ಗಣಿತದಲ್ಲಿ ಎಂಬತ್ತೈದು ಅಂಕ ಬಂತು. 'ಚಿಂತೆಯಿಲ್ಲ, ಚೆನ್ನಾಗಿ ಮಾಡಿದ್ದೀ' ಎಂದು ಮೇಷ್ಟ್ರು ಮಗಳ ಬೆನ್ನು ತಟ್ಟಿದರು. ಮತ್ತು ಅವಳಿಗೆ ಮೊದಲೇ ಪ್ರಾಮಿಸ್ ಮಾಡಿದ್ದಂತೆ, ಕೋಟೆ ತೋರಿಸಲು ಚಿತ್ರದುರ್ಗಕ್ಕೆ ಕರೆದೊಯ್ದರು.

ಕೋಟೆಯ ಒಳಗೆ, 'ತಣ್ಣೀರ ದೋಣಿ'ಯ ಹತ್ತಿರ ಕೂತು, ತಾವು ತಂದಿದ್ದ ಉಪ್ಪಿಟ್ಟನ್ನು ತಿಂದಾದ ಮೇಲೆ, ತಮಗೆ ಸೊಂಟನೋವೆಂದು

ಶಾರದಮ್ಮ 'ತುಪ್ಪದ ಕೊಳ'ಕ್ಕೆ ಏರಲು ಒಪ್ಪಲಿಲ್ಲ. ಮಗಳ ಉತ್ಸಾಹಕ್ಕೆ ಇಲ್ಲವೆನ್ನಲಾಗದೆ ಮೇಷ್ಟ್ರು, ಪ್ರಯಾಸಪಟ್ಟು 'ಕುದುರೆಹೆಜ್ಜೆ'ಗಳ ಮೇಲೆ ಕಾಲಿಡುತ್ತಾ ಏರುವಾಗ ಒಮ್ಮೆ ಕಾಲು ಜಾರಿದರು. ಹೇಗೋ ಸಾವರಿಸಿಕೊಂಡರಾದರೂ, ಅವರ ಎಡಗಾಲಿಂದ ಜಾರಿ ಉರುಳುತ್ತಾ ಹೋದ ಚಪ್ಪಲಿ ಕಂದಕದ ಆಳದಲ್ಲಿ ಮಾಯವಾಯಿತು. ಒಂದು ಕ್ಷಣ ಪೃಥ್ವಿಕಾ ನಡುಗಿದಳು. ಅಪ್ಪನತ್ತ ನೋಡುತ್ತ, ಕಣ್ಣು ತುಂಬ ನೀರು ತುಂಬಿಕೊಂಡು, 'ಸಾರಿ ಅಪ್ಪಾ' ಎಂದಳು. ಮೇಷ್ಟ್ರು ನಗುತ್ತಾ, 'ನೀನು ನಡಿ ಮರಿ, ಈಗೇನಾಯ್ತು? ಬಿದ್ದಿದ್ದು ಚಪ್ಪಲಿ, ನಿಮ್ಮಪ್ಪ ಅಲ್ಲ' ಎಂದು ನಗುತ್ತಾ, 'ಇನ್ನು ಇದನ್ನಿಟ್ಟುಕೊಂಡು ಏನ್ಮಾಡಲಿ?' ಎನ್ನುತ್ತಾ ಉಳಿದ ಇನ್ನೊಂದು ಚಪ್ಪಲಿಯನ್ನೂ ಕಂದಕಕ್ಕೆ ಜಾರಿಬಿಟ್ಟರು. ಬೆಟ್ಟದ ಹತ್ತಿರವೇ ಇರುವ 'ರೂಪವಾಣಿ' ಟಾಕೀಸಿನಲ್ಲಿ 'ಒಡಹುಟ್ಟಿದವರು' ಸಿನಿಮಾ ನೋಡುವಾಗಲೂ ಮೇಷ್ಟ್ರು ಬರಿಗಾಲಲ್ಲೇ ಇದ್ದರು. ಕೊನೆಯ ದೃಶ್ಯದಲ್ಲಿ, ರಾಜ್‌ಕುಮಾರ್ ಮನೆಬಿಟ್ಟು ಹೋಗುವಾಗಂತೂ, ಪುಟ್ಟಿ ಅಪ್ಪನ ತೋಳಿನಲ್ಲಿ ತಲೆಯಿಟ್ಟು ಅತ್ತಿದ್ದಳು. ಮೇಷ್ಟ್ರು ಸುಮ್ಮನೆ ಮಗಳ ತಲೆ ನೇವರಿಸಿದ್ದರು.

ಕಾಲೇಜಿಗೆ ಸೇರಿದ ಪೃಥ್ವಿಕಾಗೆ, ಮೊನ್ನೆ ಮೂರು ತಿಂಗಳ ಹಿಂದೆ, ಹಿಂದಿ 'ಮಧ್ಯಮಾ' ಪರೀಕ್ಷೆ ಪಾಸು ಮಾಡಿಕೊಳ್ಳುವ ಆಸೆ ಬಂದಾಗಲೂ ಮೇಷ್ಟ್ರು ಸಂತೋಷದಿಂದಲೇ ಒಪ್ಪಿದ್ದರು. ತಮ್ಮ ಸಹೋದ್ಯೋಗಿ, ಮಿತ್ರ, ಹಿಂದೀ ಶಿಕ್ಷಕ ರಂಗಯ್ಯನವರನ್ನೇ ಮನೆಪಾಠಕ್ಕೆ ಗೊತ್ತುಮಾಡಿದರಾಯ್ತು ಎಂದುಕೊಂಡರು. ರಂಗಯ್ಯ ಎಂದೊಡನೆ ಪೃಥ್ವಿಕಾ, ಅವರು ಪಾಠ ಮಾಡುವಾಗ ಪ್ರತೀ ಹೊಸ ಪದ ಬಂದಾಗಲೂ, ರಾಗವಾಗಿ, 'ಇಸ್ ಕಾ ಮತಲಬ್ ಕ್ಯಾಹೈ? ನೀವ್ ಹೇಳ್ತಿರಾ? ನೀವ್ ಹೇಳ್ತಿರಾ?' ಎನ್ನುತ್ತಾ ಎಲ್ಲಾ ಕಡೆಗೂ ಬೆರಳು ತೋರಿಸಿ, ಯಾರಿಗೂ ಹೇಳಲು ಬಿಡದೆ, ತಾವೇ ಹೇಳುತ್ತಿದ್ದುದನ್ನ ಮಿಮಿಕ್ ಮಾಡಿ ತೋರಿಸಿದ್ದಳು. ಇದಲ್ಲದೆ ಪೃಥ್ವಿಕಾಳ ಬಳಿ ರಂಗಯ್ಯನವರ ಬಗ್ಗೆ ಇನ್ನೊಂದು ಜೋಕ್ ಇದೆ. ಅದೇಂದರೆ ಎಲ್ಲಾದರೂ ತಮ್ಮ ವಿದ್ಯಾರ್ಥಿಗಳು ನಮಸ್ಕಾರ ಎಂದು ಕೈಯೆತ್ತಿದರೆ ಸಾಕು, ರಂಗಯ್ಯನವರು ಅವರಿಗಿಂತ ವಿನಯದಿಂದ ಎರಡೂ ಕೈಯೆತ್ತಿ ನಮಸ್ಕರಿಸುತ್ತಿದ್ದರು. ಒಮ್ಮೆ ತರಲೆ ಹುಡುಗನೊಬ್ಬ ರಂಗಯ್ಯನವರಿಗೆ ನಮಸ್ಕಾರ ಮಾಡುವವನಂತೆ ಕೈಯೆತ್ತಿ ಸುಮ್ಮನೆ ಕೂದಲು ಸವರಿಕೊಂಡ. ಆದರೆ ಅಷ್ಟೊತ್ತಿಗಾಗಲೇ ರಂಗಯ್ಯ ಮೇಷ್ಟ್ರು, ಎರಡೂ ಕೈಯೆತ್ತಿ, ವಿನೀತರಾಗಿ ನಮಸ್ಕರಿಸಿಯಾಗಿತ್ತು. ಪೃಥ್ವಿಕಾ ಇದನ್ನು ಹೇಳುವಾಗ ಮೇಷ್ಟ್ರು ದೊಡ್ಡದಾಗಿ ಶಬ್ದಮಾಡಿ ನಗುತ್ತಿದ್ದರು. ಆದರೆ ಪೃಥ್ವಿಕಾ, ತಾನು ಲೆಕ್ಕ ಹೇಳಿಕೊಡೋ ಶೈಲಿಯನ್ನು ಕೂಡ ಅವಳಮ್ಮನ ಮುಂದೆ ಅಭಿನಯಿಸಿ ತೋರಿಸುತ್ತಾಳೆ ಎಂಬುದು ಮೇಷ್ಟ್ರಿಗೆ ಗೊತ್ತಿರಲಿಲ್ಲ. ಮೇಷ್ಟರ ಗ್ರಹಚಾರವೋ ಏನೋ, ರಂಗಯ್ಯನವರು ತಮ್ಮ ತೋಟದ ಕೆಲಸವನ್ನು ಮುಂದಿಟ್ಟು ಪೃಥ್ವಿಕಾಗೆ ಮಧ್ಯಮಾ ಟ್ಯೂಷನ್ ಹೇಳಲು ಆಗುವುದಿಲ್ಲವೆಂದುಬಿಟ್ಟರು. ಮೇಷ್ಟ್ರಿಗೆ ಚಿಂತೆಯಾಯಿತು. ಒಂದು ವಾರದ ನಂತರ ಪೃಥ್ವಿಕಾಳೇ ಅದನ್ನು ಪರಿಹರಿಸಿದಳು. 'ದುರ್ಗಮ್ಮನ ಗುಡಿ ರೋಡಿನಲ್ಲಿ ಯಾರೋ ಪದ್ಮನಾಭ್ ಅಂತ ಮಧ್ಯಮಾಕ್ಕೆ ಟ್ಯೂಷನ್ ಮಾಡ್ತಾರಂತೆ, ಹೋಗಲಾ?' ಎಂದ ಮಗಳಿಗೆ ಮೇಷ್ಟ್ರು ಬೇಡವೆನ್ನಲಿಲ್ಲ.

ಯಾವ ಸರಕಾರಿ ಕೆಲಸವೂ ದೊರೆಯದೆ, ಸುತ್ತಮುತ್ತಲಿನ ಕೆಲವೇ ವಿದ್ಯಾರ್ಥಿಗಳಿಗೆ ಪ್ರಥಮಾ, ಮಧ್ಯಮಾ, ರಾಷ್ಟ್ರಭಾಷಾ ಅಂತ ಹಿಂದಿ ಟ್ಯೂಷನ್ ಮಾಡಿಕೊಂಡಿದ್ದ ಇಪ್ಪತ್ಮೂರರ





ಹರೆಯದ ಪದ್ಮನಾಭ, ಪೃಥ್ವಿಕಾಳಂಥ ಮುದ್ದಾದ ಹುಡುಗಿಯತ್ತ ಆಕರ್ಷಿತನಾದದ್ದಕ್ಕೆ ಯಾರೂ ಅಚ್ಚರಿ ಪಡಬೇಕಾಗಿರಲಿಲ್ಲವಾದರೂ, ಪೃಥ್ವಿಕಾ ಅವನತ್ತ ಆಕರ್ಷಿತಳಾದುದಕ್ಕೆ ಮಾತ್ರ ಕಾರಣ ಅವಳಿಗೇ ಗೊತ್ತು. ಅಂತೂ, ಮೂರೇ ತಿಂಗಳಲ್ಲಿ ಪ್ರೀತಿ ಮರವಾಗಿ, ಇಬ್ಬರಿಗೂ ಒಬ್ಬರನ್ನೊಬ್ಬರು ಬಿಟ್ಟು ಬದುಕುವುದು ಅಸಾಧ್ಯವೆಂದಾಗಿ, ಹಾಗೇ ಮನೆಯಲ್ಲಿ ವಿಷಯ ತಿಳಿಸುವುದೂ ಅಸಾಧ್ಯ ವೆಂದಾದಾಗ, 'ಮಧ್ಯಮಾ'ವನ್ನು ಮಧ್ಯದಲ್ಲೇ ಬಿಟ್ಟು ಓಡಿಹೋದರು.



ತಮ್ಮ ಪುಟ್ಟ ಮಗಳು ಪುಚ್ಚಿ-ಮೊನ್ನೆ ಮೊನ್ನೆ ಬಣ್ಣದ ಕೊಡೆ ಕೊಡಿಸಲಿಲ್ಲವೆಂದು ಊಟಬಿಟ್ಟ ವಳು, ವರ್ಷದ ಕೆಳಗೆ ತನ್ನ ಸ್ನೇಹಿತೆಯರಿಗೆಲ್ಲ ಅಣ್ಣ-ತಮ್ಮಂದಿರಿದ್ದಾರೆ ತನಗಿಲ್ಲ ಎಂದು ಅಪ್ಪ-ಅಮ್ಮನ ಮೇಲೆ ಗಂಭೀರ ಜಗಳ ತೆಗೆದು ತಬ್ಬಿಬ್ಬಾಗಿಸಿದವಳು, ತಿಂಗಳ ಕೆಳಗೆ ತಮಗೆ ಅಸ್ತಮಾ ಹೆಚ್ಚಾಗಿ ಏದುಸಿರುಬಿಡುತ್ತಿದ್ದ ರಾತ್ರಿ, ನಿಂತಲ್ಲೇ ನಡುಗುತ್ತಾ ಅಳಲು ಆರಂಭಿಸಿದವಳು - ಹೀಗೆ ಯಾರೊಟ್ಟಿಗೋ ಓಡಿಹೋಗುವಷ್ಟು ದೊಡ್ಡವಳಾಗಿಬಿಟ್ಟಿರುವಳೆಂಬುದನ್ನು ಅರಗಿಸಿಕೊಳ್ಳಲು ಅಸಮರ್ಥರಾದ ಮೇಷ್ಟ್ರು, ಬಲವಾದ ಆಘಾತಕ್ಕೊಳಗಾದರು. ಸುಮ್ಮನೆ ಆಕಾಶ ನೋಡುತ್ತಾ ಕೂತುಬಿಡುವರು. ಪತ್ನಿ ಮಾತಾಡಿಸಿದರೆ ಬುಸುಗುಟ್ಟುವರು. ಮೊನ್ನೆ ಅನ್ನಕ್ಕೆ ಉಪ್ಪು ಸಾಲದೆಂದು ತಟ್ಟೆಯನ್ನು ಎತ್ತಿ ಎಸೆದು ಕೂಗಾಡಿಬಿಟ್ಟರು.

ಶಾರದಮ್ಮನಿಗೆ ಮೇಷ್ಟರ ಪರಿಸ್ಥಿತಿ ಅರ್ಥವಾಗುತ್ತಿತ್ತು. ಹಾಗೆಂದೇ ಶೂನ್ಯಮನಸ್ಕ ರಾಗಿ ಕುಳಿತ ಮೇಷ್ಟರ ಪಕ್ಕ ಹೋಗಿ ಕೂತು, 'ಮನಸ್ಸಿಗೆ ಹಚ್ಚಿಕೋಬೇಡ್ರಿ, ಅವಳು ಬಂದೇ ಬರ್ತಾಳೆ' ಎಂದು ಸಮಾಧಾನ ಮಾಡಹೋಗಿ, ಫಟ್ಟೆಂದು ಕಪಾಳಕ್ಕೆ ಏಟು ತಿಂದರು. 'ಬರ್ತಾಳಾ? ಅವಳಿಗೆ ಅಷ್ಟು ಧೈರ್ಯವಿದ್ದರೆ ಬರ್ಲಿ, ಕಾಲು ಮುರಿದು ಹಾಕಲಿಲ್ಲವೆಂದರೆ ನಾನು ಗೋಪಾಲಯ್ಯನೇ ಅಲ್ಲ, ಕಳ್ಳಮುಂಡೆಗೆ ಅಷ್ಟು



ಧೈರ್ಯ ಎಲ್ಲಿ ಬರ್ಬೇಕು' ಎಂದವರು, ಧಡಧಡನೆ ಹಿತ್ತಲಿಗೆ ಹೋಗಿ, ಅಲ್ಲಿದ್ದ ಅರ್ಧಂಬರ್ಧ ಹರಿದ ಹಳೆಯ ಚಪ್ಪಲಿಗಳನ್ನು ತಂದು ವರಾಂಡದಲ್ಲಿ ಬಿಟ್ಟು, 'ನೋಡೇ, ಅವಳೇನಾದರೂ ಅಪ್ಪಿ ತಪ್ಪಿ ಈ ಬಾಗಿಲಿಗೆ ಬಂದ್ರೆ ಇವು ಪೂರ್ತಿ ಹರೀತಾವೆ' ಎಂದು ಏಕಾರವಾಗಿ ಕೂಗಿದರು. ಅವರ ರೌದ್ರಾವತಾರ ನೋಡಿದ ಶಾರದಮ್ಮ ಕಂಗೆಟ್ಟರು. ಯಾವುದೋ ದೆವ್ವ ಮೆಟ್ಟಿಕೊಂಡವರಂತೆ ಮೇಷ್ಟ್ರು, ಮಗಳ ಕೋಣೆಗೆ ನುಗ್ಗಿ, ಬಟ್ಟೆ, ಪೇಂಟಿಂಗುಗಳನ್ನು ಕಿತ್ತೆಸೆದರು. ಗೋಡೆಯ ಮೇಲಿದ್ದ ಸ್ಟೆಫಿಯ ಪೋಸ್ಟರು ನೋಡಿದವರೇ ಮತ್ತಷ್ಟು ಕೆರಳಿ, ಸ್ಟೂಲ್ ಹಾಕಿಕೊಂಡು ಅದನ್ನ ಪರ್ ಎಂದು ಎರಡು ತುಂಡಾಗಿ ಸಿಗಿದು ಹಾಕಿದರು.

ಮುಂದಿನ ದಿನಗಳಲ್ಲಿ ಮೇಷ್ಟ್ರನ್ನ ಕೇವಲ ಎರಡೇ ಸ್ಥಿತಿಗಳಲ್ಲಿ ನೋಡಬಹುದಾಗಿತ್ತು. ಅವೆಂದರೆ, ಶೂನ್ಯಮನಸ್ಕರಾಗಿ ಆಕಾಶವನ್ನೇ ದಿಟ್ಟಿಸುತ್ತಾ ಕೂತ ಮೇಷ್ಟ್ರು, ಇಲ್ಲವೇ ಸಿಕ್ಕಿದವರ ಮೇಲೆ ಆವೇಶದಿಂದ ಹರಿಹಾಯುವ ಮೇಷ್ಟ್ರು. ಶಾಲೆಯಲ್ಲಾದರೂ ಅಷ್ಟೇ, ಸಹೋದ್ಯೋಗಿಗಳೊಡನೆಯೂ ಮುಖಕೊಟ್ಟು ಮಾತಾಡರು. ಮಗಳ ವಿಷಯ ಎತ್ತಿದರೋ ಗ್ರಹಚಾರ ಬಿಡಿಸುವರು. ಹೆಡ್‌ಮಾಸ್ತರೇ ಎದುರಿಗೆ ಹೋದರೂ, ನಮಸ್ಕಾರ ಹೇಳುವಷ್ಟು ಅರಿವೂ ಅವರಲ್ಲಿ ಉಳಿದಿರಲಿಲ್ಲ. ಈಗ ಪರಿಚಯದವರೂ ಅವರಿಗೆ ಸಮಾಧಾನ ಹೇಳುವ ಆಸೆಯನ್ನು ಬಿಟ್ಟುಕೊಟ್ಟು ದೂರದಿಂದಲೇ ಕರುಣೆಯಿಂದ ನೋಡತೊಡಗಿದರು. ಮಟಮಟ ಮಧ್ಯಾಹ್ನ ತೇರುಮಲ್ಲೇಶನ ದೇವಸ್ಥಾನದ ಹೊರಗಿನ ಕಟ್ಟೆಯ ಮೇಲೆ ಕುಳಿತು, ಸಂಜೆಯಾಗುವವರೆಗೂ ಗೋಪುರವನ್ನೇ ನೋಡುತ್ತ ಕುಳಿತುಬಿಡುವರು. ಕ್ಲಾಸಿನಲ್ಲಿ, ಏರಿಳಿತವಿಲ್ಲದ ಒಂದೇ ದನಿಯಲ್ಲಿ, ಮಕ್ಕಳ ಕಡೆಗೆ ತಿರುಗಿಯೂ ನೋಡದೆ, ಬೋರ್ಡಿನ ಮೇಲೆ ಲೆಕ್ಕ ಮಾಡಿಕೊಂಡು ಹೋಗುತ್ತಿದ್ದರು. ಅವರ ಮುಖ ಮತ್ತು ದ್ವನಿಗಳಲ್ಲಿ ಮಡುಗಟ್ಟಿದ್ದ ಕಠೋರತೆಯಿಂದಾಗಿ, ಮಕ್ಕಳಿಗೆ ಡೌಟುಗಳನ್ನ ಕೇಳುವ ಧೈರ್ಯವಾಗುತ್ತಿರಲಿಲ್ಲ. ಪ್ರತೀ ಸ್ಟೆಪ್ಪನ್ನು ಎರಡೆರಡು ಸಲ ವಿವರಿಸಿ, 'ಎಲ್ರಿಗೂ ಅರ್ಥ ಆಯ್ತಾ? ಒಂದಲ್ಲಾ ಅಂದ್ರೆ ಹತ್ತು ಸಾರಿ ಕೇಳಿ,. ನಾನಿರೋದೇ ನಿಮಗೆ ತಿಳಿಸೋಕೆ' ಎಂದು ಪ್ರೀತಿಯಿಂದ ಕೇಳುತ್ತಿದ್ದ ಗೋಪಾಲಯ್ಯ ಮೇಷ್ಟ್ರು ಎಲ್ಲಿ ಎಂದು ಮಕ್ಕಳು ಹುಡುಕಿ ಹುಡುಕಿ ಸುಸ್ತಾದರು. ಮೊನ್ನೆ ಎಯ್ತ್ 'ಎ' ಸೆಕ್ಷನ್ನಿನಲ್ಲಿ ಭಿನ್ನರಾಶಿ ಪಾಠ ಮಾಡುತ್ತಿರುವಾಗ, ಕಿಟಕಿಯಿಂದ ಆಚೆ ನೋಡುತ್ತಿದ್ದ ದೀಪಳನ್ನು ನೋಡಿ ಮೇಷ್ಟ್ರು ಉರಿದುಹೋದರು. ಸೀದಾ ಹೋದವರೆ ಬೆನ್ನಿನ ಮೇಲೆ ನಾಕು ಬಾರಿಸಿಯೇಬಿಟ್ಟರು. ಎಂದೂ ಕಂಡಿರದ ಮೇಷ್ಟ್ರ ಈ ಅವತಾರವನ್ನು ನೋಡಿ ಹುಡುಗರು ಕಂಗೆಟ್ಟುಹೋದರು.

ಮೊನ್ನೆ ಭಾನುವಾರ, ತಮ್ಮ ಪರಿಚಯದ ವೆಂಕಟೇಶನ ಪ್ರಿಂಟಿಂಗ್‌ಪ್ರೆಸ್ಸಿಗೆ ಹೋದ ಮೇಷ್ಟ್ರು, 'ಐನೂರು ಕಾರ್ಡು ಮಾಡಿಸಬೇಕು, ವಿಷಯ ಬರ್ಕೋ' ಎಂದು ಕೂತೇಬಿಟ್ಟರು. ಎಲ್ಲವೂ ಗೊತ್ತಿದ್ದ ವೆಂಕಟೇಶ, ಮೇಷ್ಟ್ರ ಕಂಪಿಸುತ್ತಿದ್ದ ಮೂಗನ್ನೇ ನೋಡಿ, ಅನುಮಾನಗೊಂಡು, 'ಏನ್ ವಿಷ್ಯಾ ಮೇಷ್ಟ್ರೇ?' ಎಂದು ತೊದಲಿದ. 'ನನ್ನ ಮಗಳ ಶ್ರಾದ್ಧ. ಮುಂದಿನ ಭಾನುವಾರ, ಬರಕೋ, ಹೆಸರು... ಪುಚ್ಚಿ' ಎಂದು ಹೇಳುತ್ತಾ, ಹೆಚ್ಚುತ್ತಿದ್ದ ಉದ್ವೇಗವನ್ನು ನಿಯಂತ್ರಿಸಲಾರದೆ ಎದ್ದು ನಿಂತವರು, ಮತ್ತೆ ತಲೆತಿರುಗಿದಂತಾಗಿ ಕುಸಿದು ಕುಳಿತರು. ಸ್ವಲ್ಪ ಹೊತ್ತು ಇಬ್ಬರೂ ಮಾತಾಡಲಿಲ್ಲ. ಇನ್ನೂ ಸ್ವಲ್ಪ ಹೊತ್ತಿನ ಮೌನದ ಬಳಿಕ ವೆಂಕಟೇಶನೇ, ಮೇಷ್ಟ್ರನ್ನ ಮನೆವರೆಗೂ ಕರೆದುಕೊಂಡು ಹೋಗಿ ಬಿಟ್ಟು ಬಂದ. ಈಗ ಶಾರದಮ್ಮನಿಗೂ ಮೇಷ್ಟ್ರನ್ನ ಮಾತಾಡಿಸಿದರೆ ಎಲ್ಲಿ ಹಾರಿಬೀಳುವರೋ ಎಂಬ ಆತಂಕವಾಗಿ ಸುಮ್ಮನಿರುತ್ತಿದ್ದರು. ಹೀಗಾಗಿ ಆ

ಮನೆಯಲ್ಲಿ ಎಂಥದೋ ಕೆಟ್ಟ ನಿಶ್ಶಬ್ದವೊಂದು ಸೇರಿಕೊಂಡು, ಮೇಷ್ಟು ಶ್ರಾದ್ಧ ಮಾಡದೇ ಹೋದರೂ ಸೂತಕದ ವಾಸನೆ ತುಂಬಿ ಕೊಂಡಂತಿತ್ತು.

ಮೊನ್ನೆ ಹೀಗಾಯಿತು. ಎಯ್ತ್ 'ಎ' ಸೆಕ್ಷನ್ನಿನ ಮುಂದೆ ಏನೋ ಜೋರು ಕೂಗಾಟವನ್ನು ಕೇಳಿ ಹೆಡ್‌ಮಾಸ್ತರು ಓಡಿಬಂದರು. ನೋಡಿದರೆ, ದೀಪಾಳ ತಂದೆ ಗೋಪಾಲಯ್ಯ ಮೇಷ್ಟರ ಮೇಲೆ ತಮ್ಮ ಮಗಳನ್ನ ಹೊಡೆದದ್ದಕ್ಕಾಗಿ ಗಲಾಟೆ ಮಾಡುತ್ತಿದ್ದರು. ಮೇಷ್ಟು ಏನೂ ಹೇಳಲು ತಿಳಿಯದೆ ತಲೆತಗ್ಗಿಸಿ ನಿಂತಿದ್ದರು. ಹೆಡ್‌ಮೇಷ್ಟು ಮಧ್ಯ ಪ್ರವೇಶಿಸಿ, 'ನೋಡಿ, ನನ್ನ ಮಾತು ಕೇಳಿ, ಗೋಪಾಲಯ್ಯನವರು ಬಹಳ ಒಳ್ಳೆಯವರು, ನೀವು ನನ್ನ ಛೇಂಬರಿಗೆ ಬನ್ನಿ, ಎಲ್ಲಾ ಹೇಳ್ತೀನಿ' ಎಂದರು. ಅಲ್ಲಿಯವರೆಗೂ ತಲೆತಗ್ಗಿಸಿ ನಿಂತಿದ್ದ ಮೇಷ್ಟು, ಒಮ್ಮೆಗೆ ಕೆರಳಿ, ಹೆಡ್‌ಮಾಸ್ತರಿಗೆ, 'ಏನ್ರೀ ನೀವು ಅವರನ್ನ ಛೇಂಬರಿಗೆ ಕರಕೊಂಡು ಹೋಗಿ ಹೇಳೋದು? ಇವನ ಮಗಳು ಯಾವನ್ನೋ ಕಟ್‌ಕಂಡು ಓಡಿಹೋದಳು. ಅದಕ್ಕೆ ಇವಯ್ಯನಿಗೆ ತಲೆ ಕೆಟ್ಟಿದೆ ಅಂತಲಾ?' ಎಂದು ರೇಗಿದರು. ಹೆಡ್‌ಮೇಷ್ಟು ಕಕ್ಕಾ ಬಿಕ್ಕಿಯಾಗಿ, 'ಹಾಗಲ್ಲ ಇವರೇ...' ಎಂದು ತೊದಲಿದರು. ಅಲ್ಲಿಯೇ ಇದ್ದ ಹಿಂದಿ ಮೇಷ್ಟು ರಂಗಯ್ಯನವರು, ಹೆಡ್‌ಮೇಷ್ಟ ನೆರವಿಗೆ ಬರುತ್ತಾ, 'ಅಪಾರ್ಥ ಯಾಕೆ ಮಾಡ್ಕೊಂತಿಯೋ ಗೋಪಾಲಯ್ಯ...' ಎಂದೇನೋ ಹೇಳಲು ಶುರು ಮಾಡುವಾಗ ಮೇಷ್ಟು, 'ನೀನು ಸುಮ್ಮನಿರಯ್ಯ ಸಾಕು. ಇದೆಲ್ಲ ಶುರುವಾದದ್ದು ನಿನ್ನಿಂದಲೇ, ಬಂದುಬಿಟ್ಟ ಇಲ್ಲಿ' ಎಂದು ಚೀರಿದರು. ಮುಂದೆ ಮಾತಾಡಲು ಯಾರಿಗೂ ಧೈರ್ಯವಾಗದೆ ಒಬ್ಬೊಬ್ಬರಾಗಿ ಜಾಗ ಖಾಲಿ ಮಾಡಿದರು. ದೀಪಾಳ ತಂದೆ ಏನು ಮಾಡು ವುದು ಎಂದು ತಿಳಿಯದೆ ಪೆದ್ದು ಪೆದ್ದಾಗಿ ಮೇಷ್ಟರನ್ನೇ ನೋಡುತ್ತ ನಿಂತುಬಿಟ್ಟರು.



ಪೃಥ್ವಿಕಾ ಓಡಿಹೋಗಿ ಮೂರು ತಿಂಗಳಾಗಿದೆ. ಮೇಷ್ಟ ವರ್ತನೆಯಲ್ಲಿ ಕಿಂಚಿತ್ ಬದಲಾವಣೆಯೂ ಇಲ್ಲ. ಅವರನ್ನು ಮಾತಾಡಿಸುವ ಧೈರ್ಯವಾಗದ ಶಾರದಮ್ಮ, ಮಗಳ ನೆನಪಿನಲ್ಲಿ ಒಬ್ಬಳೇ ಅಳುವರು. ಮಗಳು ಮೂರು ವರ್ಷದವಳಾಗಿದ್ದ ಸಮಯದಲ್ಲಿ ಜಾಂಡೀಸ್ ಬಂದು, ದಾವಣಗೆರೆಯ ಚಿಲ್ಡ್ರನ್ ಸ್ಪೆಷಲಿಸ್ಟ್ ನಿರ್ಮಲಾ, ಪೃಥ್ವಿಕಾ ಬದುಕುವುದೇ ಇಲ್ಲ ಎಂದಿದ್ದನ್ನು ನೆನಪಿಸಿಕೊಳ್ಳುವರು. ಆಮೇಲೆ ತೇರುಮಲ್ಲೇಶನ ದಯವೋ ಎಂಬಂತೆ ಪೃಥ್ವಿಕಾ ಚೇತರಿಸಿಕೊಂಡಿದ್ದಳು. ಶಾರದಮ್ಮನಿಗೆ ಒಮ್ಮೊಮ್ಮೆ ಮಗಳಿಗಿಂತ ಮೇಷ್ಟ ಚಿಂತೆಯೇ ದೊಡ್ಡದಾಗಿ ತೋರುವುದು.

ಅವತ್ತು ಭಾನುವಾರ, ಮಧ್ಯಾಹ್ನ ಮೂರುಗಂಟೆಯ ಸಮಯ. ಬೆಳಗಿನಿಂದ ಉರಿದ ಸೂರ್ಯನನ್ನು ಈಗಷ್ಟೇ ಹೆಚ್ಚುತ್ತಿದ್ದ ಮೋಡಗಳು ಮರೆಮಾಡಲು ಯತ್ನಿಸುತ್ತಿದ್ದವು. ಕಿಟಕಿಯ ಬಳಿ ಆರಾಮ ಖುರ್ಚಿಯ ಮೇಲೆ ಕುಳಿತ ಮೇಷ್ಟು ಆಗಸವನ್ನೇ ಗಮನಿಸುತ್ತಿದ್ದರು. ಗೇಟು 'ಕಿರ್' ಎಂದಿತು. ಮೇಷ್ಟು ಅತ್ತ ನೋಡಿದರೆ, ನಾಕು ವರ್ಷದ ಪುಟ್ಟ ಹುಡುಗಿಯೊಂದು, ಗುಲಾಬಿ ಬಣ್ಣದ ಫ್ರಾಕಿನಲ್ಲಿ ಬೊಂಬೆಯಂತೆ ಗೇಟು ತೆಗೆದುಕೊಂಡು, ಇದು ತನ್ನದೇ ಮನೆ ಎಂಬಂತೆ ಪುಟಪುಟನೆ ನಡೆಯುತ್ತಾ ಒಳಬಂದಿತು. ಅಚ್ಚರಿಗೊಂಡ ಮೇಷ್ಟು ನೋಡುತ್ತಿರುವಂತೆಯೇ ಅದು ಸೋಫಾದ ಮೇಲೆ ಚಕ್ಕಲಮಕ್ಕಲ ಕುಳಿತು ಸುತ್ತಲೂ ನೋಡುತ್ತಾ ಕಣ್ಣರಳಿಸಿತು. ಮೇಷ್ಟ್ರಿಗೆ ಆ ಗೊಂಬೆಯಂಥಾ ಮಗುವನ್ನು ಎಲ್ಲೋ ನೋಡಿರುವೆ ಎಂದೆನಿಸಿತಾದರೂ, ಎಲ್ಲಿ ಎಂದು



ನೆನಪಾಗಲಿಲ್ಲ. ಮುದ್ದಾಗಿದ್ದ ಆ ಮಗುವಿನ ಕೆನ್ನೆಗಳ ಮೇಲೆ ಚಪಾತಿಯ ಹಿಟ್ಟಿನಂತಹ ದೇನೋ ಮೆತ್ತಿಕೊಂಡು, ಇನ್ನೂ ಮುದ್ದು ಮುದ್ದಾಗಿ ಕಾಣುತ್ತಿತ್ತು. ಮೇಷ್ಟ್ರು ತಮ್ಮನ್ನೇ ಪಿಳಿಪಿಳಿ ಕಣ್ಣು ಬಿಟ್ಟುಕೊಂಡು ನೋಡುತ್ತಿದ್ದ ಮಗುವಿನತ್ತ ನಗೆ ಬೀರಿದರು. ಅದೂ ನಕ್ಕಿತು. 'ಇದು ಹೇಗೆ ಒಳಬಂದಿತಲ್ಲಾ' ಎಂದು ಮೇಷ್ಟರು ಯೋಚಿಸುತ್ತಿರುವಾಗಲೇ, ಮಗು ಇದ್ದಕ್ಕಿದ್ದಂತೆ ಎದ್ದು, ಗೋಡೆಯ ಮೇಲಿನ ಕ್ಯಾಲೆಂಡರಿನಲ್ಲಿದ್ದ ಪಾಪುವಿನ ಚಿತ್ರವನ್ನು ತೋರಿಸುತ್ತಾ, ಮೇಷ್ಟರನ್ನ, 'ಎತ್ತಿಕೋ, ಎತ್ತಿಕೋ' ಎಂದಿತು. ಮೇಷ್ಟ್ರು ಎತ್ತಿಕೊಂಡಾಗ, ಆ ಪಾಪುವಿನ ಚಿತ್ರವನ್ನು ಮುಟ್ಟಿ, ನೇವರಿಸಿ, ಮುತ್ತಿಕ್ಕಿ, 'ಪಾಪೂ, ಪಾಪೂ' ಎಂದು ಉತ್ಸಾಹದಿಂದ ಕೂಗಿತು.

ಒಳಗಿನಿಂದ ಬಂದ ಶಾರದಮ್ಮ ಮಗುವನ್ನು ಎತ್ತಿಕೊಂಡಿರುವ ಮೇಷ್ಟ್ರನ್ನ ನೋಡಿ ಅಚ್ಚರಿಗೊಂಡರು. ಮೇಷ್ಟರ ಸೊಂಟದಿಂದ ಇಳಿದ ಮಗು ಪೃಥ್ವಿಕಾಳ ಕೋಣೆಗೆ ನುಗ್ಗಿ, ಒಂದು ಪೆನ್ಸಿಲ್ ಮತ್ತು ಒಂದು ರಬ್ಬರ್ ತೆಗೆದುಕೊಂಡು ಹೊರಬಂದದ್ದೇ, ಟೇಬಲ್ ಮೇಲಿದ್ದ ಪುಸ್ತಕವನ್ನು ತೊಗೊಂಡು ಗೋಲಗೋಲ ಗೀಚತೊಡಗಿದಳು. ಅದು ತಮ್ಮ ನೋಟ್ಸ್ ಆಫ್ ಲೆಸನ್ ಪುಸ್ತಕ ಎಂಬುದನ್ನು ಗಮನಿಸಿಯೂ ಮೇಷ್ಟ್ರು ಅವಳನ್ನು ತಡೆಯಲಿಲ್ಲ. ಚಿತ್ರ ಬರೆದಾದ ಮೇಲೆ, ರಬ್ಬರಿನಿಂದ ಅದನ್ನು ಅಳಿಸಿ, 'ಹೋಯ್ತು' ಎಂದು ಅಚ್ಚರಿಯಿಂದ ಕಣ್ಣರಳಿಸುತ್ತಾ, ಮೇಷ್ಟರ ಕಡೆಗೆ ತಿರುಗಿದ ಮಗು, ಅವರ ಜೇಬಿಗೆ ಕೈಹಾಕಿ, ಪೆನ್ನನ್ನು ತಗೊಂಡು, ಮತ್ತೆ ಅದೇ ಪುಸ್ತಕದಲ್ಲಿ ಏನೋ ಗೀಚಲಾರಂಭಿಸಿದಳು. ಮೇಷ್ಟ್ರು ಸುಮ್ಮನೆ ನಗುತ್ತಾ ನೋಡಿದರು. ಪೆನ್ನಿನಲ್ಲಿ ಬರೆದ ಚಿತ್ರವನ್ನು ರಬ್ಬರಿನಿಂದ ಅಳಿಸಲು ಪ್ರಯತ್ನಿಸಿ, 'ಹೋಗಲ್ಲ' ಎಂದು ತಲೆಯೆತ್ತಿದಳು. ಅಷ್ಟರಲ್ಲಿ ಶಾರದಮ್ಮ ಅವಳಿಗಾಗಿ ಒಂದು ಲೋಟದಲ್ಲಿ ಹಾಲು ತೊಗೊಂಡು ಬಂದರು. ಲೋಟವನ್ನು ಬಾಯಲ್ಲಿ ಕಚ್ಚಿ, ಕಣ್ಣರಳಿಸಿಕೊಂಡು ಮೇಷ್ಟ್ರನ್ನೂ

ಶಾರದಮ್ಮನನ್ನೂ ನೋಡುತ್ತಾ ಬಹಳ ಹೊತ್ತಿನವರೆಗೂ ಹಾಲು ಕುಡಿದಳು ಅವಳು. ಸ್ವಲ್ಪಹೊತ್ತಿಗೇ ಸೋಫಾದ ಮೇಲೇ ನಿದ್ದೆಹೋದಳು. ಅವಳ ತುಟಿಯ ಸುತ್ತಾ ಮೂಡಿದ್ದ ಹಾಲಿನ ನೊರೆಯ ಗುರುತು ಒರೆಸಲೆಂದು ಪಂಚೆಯ ಅಂಚನ್ನು ಕೈಗೆ ತೆಗೆದುಕೊಂಡ ಮೇಷ್ಟ್ರು, ಮತ್ತೆ ಯಾಕೋ ಸುಮ್ಮನಾದರು. ಶಾರದಮ್ಮ ಒಳಗೆಲ್ಲೋ ಅಡಿಗೆ ಮನೆಯಲ್ಲಿರುವಾಗ, ನಿಧಾನವಾಗಿ ಬಾಗಿ, ಮಲಗಿದ ಮಗುವಿನ ಕೆನ್ನೆಗೆ ಮೃದುವಾಗಿ ಮುತ್ತಿಟ್ಟರು.

ಹೊರಗೆ ಮೋಡಗಳು ದಟ್ಟವಾಗಿ, ಯಾವ ಕ್ಷಣದಲ್ಲೂ ಮೊದಲ ಹನಿ ಬೀಳುವಂತಾಗಿತ್ತು. ಎದ್ದು ಬಟ್ಟೆ ಧರಿಸಿದ ಮೇಷ್ಟ್ರು, ಸೈಕಲ್ ಹೊರತೆಗೆಯುತ್ತಾ, ಶಾರದಮ್ಮನಿಗೆ, 'ನಾನವಳನ್ನ ಅವಳ ಮನೆಗೆ ಬಿಟ್ಟುಬರುತ್ತೇನೆ. ಹಿಂದಿನ ಬೀದಿಯಲ್ಲೆಲ್ಲೋ ನೋಡಿದ ನೆನಪು. ಮಳೆ ಜೋರ ಬರುವಂತಿದೆ, ಅವರಪ್ಪ-ಅಮ್ಮ ಗಾಬರಿಯಾದಾರು' ಎಂದರು. ಪೃಥ್ವಿಕಾಳ ಪುಟ್ಟ ಸೀಟನ ಮೇಲೆ ಕೂತ ಬೊಂಬೆಯಂಥಾ ಮಗು ಮೇಷ್ಟ್ರ ಜೊತೆ ಬೀದಿಯಂಚಿನಲ್ಲಿ ಮಾಯವಾಗುವುದನ್ನು ನೋಡಿದ ಶಾರದಮ್ಮ, ಎಂಥದೋ ಉತ್ಸಾಹದಲ್ಲಿ ಒಳ ನಡೆದರು. ಮನೆ ತಲುಪಿಸುವ ಮುನ್ನ ಮೂಲೆ ಅಂಗಡಿಯಲ್ಲಿ ಮೇಷ್ಟ್ರು ಕೊಡಿಸಿದ ಡೈರಿ ಮಿಲ್ಕ್ ಚಾಕಲೇಟನ್ನು ತನ್ನ ಪುಟ್ಟ ಕೈಗಳಲ್ಲಿ ಹಿಡಿದುಕೊಂಡ ಮುದ್ದು ಮಗು, ಮತ್ತೊಮ್ಮೆ ಸಂತಸದಿಂದ ಕಣ್ಣರಳಿಸಿ, ಮೇಷ್ಟರ ಕೆನ್ನೆಗೊಂದು ಮುತ್ತಿಟ್ಟಿತು.

ಸಣ್ಣ ಸಣ್ಣ ಹನಿಗಳಲ್ಲಿ ನೆನೆದುಕೊಂಡೇ ವಾಪಾಸು ಬಂದ ಮೇಷ್ಟ್ರು, ತಮ್ಮ ಆವೇಶವನ್ನು ಯಾರೋ ಕಸಿದುಕೊಂಡಂತೆ ಓಡಾಡಿದರು. ಕಾಫಿ ಲೋಟ ಹಿಡಿದು ಪತಿಗಾಗಿ ಮನೆಯೆಲ್ಲಾ ಹುಡುಕಿ, ಕೊನೆಗೆ ಮಗಳ ಕೋಣೆಗೆ ಬಂದ ಶಾರದಮ್ಮ, ಅಲ್ಲಿ ಮೇಷ್ಟರು ತಾವೇ ಹರಿದುಹಾಕಿದ್ದ ಸ್ಟೆಫಿಗ್ರಾಫಳ ಚಿತ್ರದ ಎರಡು ತುಂಡುಗಳನ್ನು ಅಂಟಿಸುವ ಕಾರ್ಯದಲ್ಲಿ ಮೈಮರೆತಿರುವುದನ್ನು ಕಂಡರು. ಅವರಿಗೆ ಏನನ್ನಿಸಿತೋ, ಸದ್ದು ಮಾಡದೆ ವಾಪಾಸು ಬಂದು ಹಜಾರದ ಸೋಫಾದ ಮೇಲೆ ಕೂತರು. ಹೊರಗೆ ಮಳೆ ಜೋರಾಗಿತ್ತು. ಸ್ವಲ್ಪಹೊತ್ತಿನ ಬಳಿಕ ಮಗಳ ಕೋಣೆಯಿಂದ ಅವಸರವಸರವಾಗಿ ಹೊರಬಂದ ಮೇಷ್ಟ್ರು, ತಲೆನೋವಿಗೆಂದು ಮಗಳಿಗೆ ತಾವು ಕೊಡಿಸಿದ್ದ ಕನ್ನಡಕವನ್ನು ಕೈಲಿ ಹಿಡಿದುಕೊಂಡು, 'ಪುಟ್ಟಿ ಇದನ್ನ ಮರೆತು ಹೋಗಿದ್ದಾಳೆ' ಎಂದರು. ಸಂಜೆ ಮಾಯೆಯಂತೆ ಬಂದು ಹೋದ ಪುಟ್ಟ ಮಗು ಬಿಟ್ಟುಹೋದ ತಂಗಾಳಿ, ಆ ಮನೆಯಲ್ಲೆಲ್ಲಾ ಹರಡಿಕೊಂಡಿತ್ತು.





ಪೃಥ್ವಿಕಾಳ ಪುಟ್ಟ ಸೀಟಿನ ಮೇಲೆ ಕೂತ
ಬೊಂಬೆಯಂತಾ ಮಗು ಮೇಷ್ಟ್ರ ಜೊತೆ
ಬೀದಿಯಂಚಿನಲ್ಲಿ ಮಾಯವಾಗುವುದನ್ನ ನೋಡಿದ
ಶಾರದಮ್ಮ ಎಂಥದೋ ಉತ್ಸಾಹದಲ್ಲಿ ಒಳನಡೆದರು

# ಕಾಗದದ ದೋಣಿ



## ಜಾರಿ ಹೋಗದ ನೆನಪುಗಳು

ಪ್ರೀತಿಯ ಪುಟ್ಟಾಮಿ...

ಇತ್ತೀಚೆಗೆ ಸಂದರ್ಭವೊಂದು ಒದಗಿ ನಾನು ಪ್ರೈಮರಿ ಶಾಲೆ ಕಲಿತ ಊರನ್ನು ನೋಡುವ ಭಾಗ್ಯ ದೊರೆಯಿತು. ಅಲ್ಲಿ ಕಾಡಿದ ತೊಳಲಾಟದಿಂದ ನಿನಗೆ ಪತ್ರ ಬರೆಯಬೇಕೆನಿಸಿತು. ಶಾಲೆಯ ಮೈದಾನಕ್ಕೆ ಅಂಟಿಕೊಂಡಂತಿದ್ದ ನಿನ್ನ ಮನೆ ಇದ್ದ ಜಾಗದಲ್ಲಿ, ಈಗ ಭವ್ಯ ಬಂಗಲೆಯೊಂದು ಎದ್ದಿದೆ. ಆ ಕಳ್ಳಿ ಬೇಲಿ ಈಗಿಲ್ಲ. ನಾವಾಡುತ್ತಿದ್ದ ಜಾರಬಂಡೆ ಯಾವುದೋ ಕಾಲದ ಅವಶೇಷದಂತಿದೆ. ಶಾಲೆಯ ಹಳೆ ಕಟ್ಟಡ ತರಾವರಿ ತೇಪೆ ಹಾಕಿಸಿಕೊಂಡು ವೃದ್ಧ ಜೀವಿಯಂತಿದೆ. ಮೈದಾನದ ಪೂರ್ವ ದಿಕ್ಕಿನಲ್ಲಿದ್ದ ಐದಾರು ಮರಗಳು ಈಗಿಲ್ಲ. ಆಗ ನೀನು, ಶಂಕರ, ಅನ್ವರ, ಮಧು, ಪಿಂಟೊ, ಮಾದ ಹಾಗೂ ಪ್ರಹ್ಲಾದನ ಜೊತೆ ನಾನಾಡುತ್ತಿದ್ದ ಲಗೋರಿ ಆಟ... ಜೂಟಾಟ ನೆನಪಿಗೆ ಬಂತು. ಮಧು ಮತ್ತು ಪಿಂಟೊ ಗೋಲಿ ಆಟದಲ್ಲಿ ನಿಸ್ಸೀಮರಾಗಿದ್ದು ನಿನಗೆ ನೆನಪಿದೆಯಾ!

ನಿನ್ನ ಜೇಬಿನಲ್ಲಿ ಯಾವಾಗಲೂ, ಬೆಂಕಿಪಟ್ಟಣದ ತುಂಬಾ ಬಣ್ಣ ಬಣ್ಣದ ಬಳಪದ ಚೂರುಗಳಿರುತ್ತಿದ್ದವು. ಒಂದು ದಿನ ನೀನು ಬೆಂಕಿಪಟ್ಟಣಗಳಲ್ಲಿ ಜೀರುಂಡೆ, ಹಾರುವ ಕುದುರೆಗಳನ್ನು ತಂದಿದ್ದೆ. ಆಗ ಮೇಷ್ಟ್ರು ಅದನ್ನು ನೋಡಿ, ಪ್ರಾಣಿ ಹಿಂಸೆ ಮಾಡಬಾರದು ಎಂದು ನಿನಗೆ ಗದರಿಸಿದ್ದಕ್ಕೆ, ಅವುಗಳನ್ನು ಬಿಟ್ಟುಬಿಟ್ಟೆ. ಆದರೆ ಮಾರನೆ ದಿನ ಮತ್ತೆ, ಹೊಳೆವ ಹಸಿರು ಬಣ್ಣದ ಸಣ್ಣ ಜೀರುಂಡೆಯನ್ನು ಬೆಂಕಿಪಟ್ಟಣದಲ್ಲಿ ಕೂಡಿಹಾಕಿ, ಚಡ್ಡಿ



ಜೇಬಿನಲ್ಲಿ ಇಟ್ಟುಕೊಂಡಿದ್ದೆ. ಅದು ಬೆಂಕಿಪಟ್ಟಣದಿಂದ ಹೊರ ಬಂದು, ನಿನ್ನ ಚಡ್ಡಿ ಜೇಬಿನ ಸಣ್ಣ ತೂತಿನಿಂದ ತೊಡೆ ಸಂದಿಯಲ್ಲಿ ಹರಿದಾಡಿದಾಗ 'ಹೋ' ಎಂದು ಕೂಗಿ ಎದ್ದುನಿಂತೆ. ಆಗ ಪಾಠ ಮಾಡುತ್ತಿದ್ದ ಮಾಸ್ತರರು ನಿನ್ನ ಅವಸ್ಥೆ ನೋಡಿ ನಕ್ಕಿದ್ದರು. ನಾವೆಲ್ಲ ನಕ್ಕಿದ್ದೆವು. ನಿನಗೆ ಅವಮಾನವಾದಂತಾಗಿತ್ತು.

ನಾವು ಶಾಲೆಯ ಆ ದೊಡ್ಡ ದೊಡ್ಡ ಮರದ ಗಂಟುಗಳಲ್ಲಿ ಕಟ್ಟುತ್ತಿದ್ದ ಅಂಟನ್ನು ತೆಗೆದುಕೊಂಡು ಗಾಳಿಪಟ ಮಾಡುತ್ತಿದ್ದೆವು. ನೀಲಗಿರಿ ಮರದಿಂದ ಉದುರುತ್ತಿದ್ದ ಆ ಹೂವನ್ನು ಬುಗುರಿಯಂತೆ ಆಡಿಸಿ, ಯಾರದು ಎಷ್ಟು ಹೊತ್ತು ತಿರುಗುತ್ತೆ ಎಂದು ಪಂದ್ಯವಾಡುತ್ತಿದ್ದೆವು. ನಾನು, ನೀನು ಹಾಗೂ ಪ್ರಹ್ಲಾದ ಜಾರ ಬಂಡೇನ ಯಾರಿಗೂ ಬಿಡದಂತೆ, ಒಬ್ಬರಾದ ನಂತರ ಮತ್ತೊಬ್ಬರು ಜಾರುತ್ತಲೇ ಇದ್ದುದ ಕಂಡು, ಶಂಕ್ರ ಸಿಟ್ಟಿನಿಂದ ಜಾರಬಂಡೆ ಮೇಲೆ ಉಚ್ಚೆ ಹೊಯ್ದುಬಿಟ್ಟಿದ್ದ. ನಿಮ್ಮ ಮನೆಯಲ್ಲಿದ್ದ ಅಜ್ಜ, ಹಿತ್ತಲ ಬಾಗಿಲಲ್ಲಿ ನಮ್ಮೀ ಗಲಾಟೆಗಳನ್ನು ನೋಡಿ ಗದರಿಸುತ್ತಿದ್ದರು. ಆದರೆ ನಿನ್ನ ಅಮ್ಮನಿಗೆ, ಅಜ್ಜ ಹಿತ್ತಲ ಬಾಗಿಲಲ್ಲಿ ನಿಂತುಕೊಂಡಿದ್ದರೆ ಸಿಟ್ಟು ಬರುತ್ತಿತ್ತು. ಅವರು, 'ಒಳಗೆ ಹೋಗು... ಒಳಗೆ ಹೋಗು' ಎಂದು ಅಜ್ಜಿಗೆ ಹೇಳುತ್ತಿದ್ದರು.

ಒಂದು ಸಾರಿ ಮಧು ಆಲೆಮನೆಯಿಂದ ಕಬ್ಬಿನ ಜಲ್ಲೆಗೆ ಬೆಲ್ಲ ಸುತ್ತಿಕೊಂಡು ತಂದಿದ್ದ. ನೀನು ಮನೆಯಿಂದ ಕಡ್ಲೆಕಾಯಿ ಬೀಜವನ್ನು ಪುಸ್ತಕದ ಚೀಲದಲ್ಲಿ ತುಂಬಿಕೊಂಡು ತಂದಿದ್ದೆ. ಆಗ ನಾವು ಬೆಲ್ಲದ ಜೊತೆ ಕಡ್ಲೆಕಾಯಿ ಬೀಜವನ್ನು ಮರದ ಬುಡದಲ್ಲಿ ಕೂತು, ಯಾರಿಗೂ ಕಾಣದಂತೆ ತಿಂದಿದ್ದೇ ತಿಂದಿದ್ದು. ಹೀಗೆ ನೀವು ಆಗಾಗ ಏನಾದರೊಂದು ತಿಂಡಿ ತರುತ್ತಿದ್ದರಿಂದ ನಾನು ಮನೆಯಿಂದ ಅಮ್ಮನಿಗೆ ಗೊತ್ತಾಗದಂತೆ ಅದೊಂದು ದಿನ ಹುಣಸೆಹಣ್ಣು ತಂದಿದ್ದೆ. ಅದಕ್ಕೆ ನೀನು ತಂದ ಮೆಣಸಿನಕಾಯಿ, ಉಪ್ಪು ಬೆರಸಿ ನಾಲಿಗೆಯಲ್ಲಿಟ್ಟು ಚಪ್ಪರಿಸಿದ್ದೆವು.

ಅದೊಂದು ರಾತ್ರಿ, ನಿನ್ನ ಅಜ್ಜ ಜಾರಬಂಡೆ ಜಾರಲು ಹೋಗಿ ಕಾಲು ಮುರಿದುಕೊಂಡರು. ನಾವುಗಳು, ವಯಸ್ಸಾದ ಆ ಅಜ್ಜ ಜಾರಬಂಡೆ ಜಾರಿದ್ದನ್ನು ನೆನಸಿಕೊಂಡು ನಕ್ಕಿದ್ದೆವು. ಆಗ ನೀನು, ಮೂತಿ ದಪ್ಪ ಮಾಡಿಕೊಂಡು, 'ನಾನೇನು ಮಾಡ್ಲಿ... ದಿನಾ ಅಜ್ಜ ತಾನು ಒಂದು ದಿನ ಜಾರಬಂಡೆ ಆಟ ಆಡ್ಬೇಕು ಅಂತಿತ್ತು, ಅದಕ್ಕೆ ನಾನೇ ಅಜ್ಜನ ಜಾರಬಂಡೆ ಮೇಲೆ ಕೈ ಹಿಡಿದುಕೊಂಡು ಹತ್ತಿಸಿದ್ದೆ' ಎಂದಿದ್ದೆ. ಇದಾದ ಕೆಲವು ದಿನಗಳಲ್ಲೇ, ಆ ಕಾಲು ನೋವಿನಿಂದಲೇ ನಿನ್ನ ಅಜ್ಜ ತೀರಿಕೊಂಡರು. ಅದೊಂದು ದಿನ ಯಾರೋ ಜಾರಬಂಡೆಯ ಜಾರುವ ಜಾಗವನ್ನು ಹಾಳು ಮಾಡಿ ದೊರಗು ಮಾಡಿದ್ದ ಕಂಡು, ನಾವು ಮೇಲೆ ಹೇಗೆ ಜಾರುವುದೆಂದು ಒಂದೆರಡು ದಿನ ಅನುಮಾನಿಸಿದೆವು. ನಂತರ ನಿಧಾನವಾಗಿ ಅದರ ಮೇಲೆಯೆ ಜಾರತೊಡಗಿದೆವು. ಇದರಿಂದ ನಮ್ಮ ಚೆಡ್ಡಿಯ ಹಿಂಭಾಗ ಹರಿದು, ಪೋಸ್ಟ್ ಬಾಕ್ಸ್‌ನ ಬಾಯಿಯಾಯಿತು. ಅವತ್ತೊಂದು ದಿನ ನೀನು ಗುಟ್ಟಾಗಿ, ನನ್ನ ಕಿವಿಯಲ್ಲಿ, ನಿನ್ನ ಅಪ್ಪನೇ ತನ್ನ ಪಾತ್ರೆ ರಿಪೇರಿ ಮಾಡುವ ಅಂಗಡಿಯಲ್ಲಿದ್ದ ಸುತ್ತಿಗೆಯಲ್ಲಿ ಕುಟ್ಟಿ ಕುಟ್ಟಿ, ಆ ಜಾರಬಂಡೆಯನ್ನು ಹಾಳು ಮಾಡಿದ್ದರೆಂದು ಹೇಳಿದ್ದೆ. ಇದಕ್ಕೆ ಏನೆಲ್ಲಾ ಅರ್ಥಗಳಿರಬಹುದೆಂದು ಈಗ ಗೊತ್ತಾಗುತ್ತಿದೆ.

ಪ್ರತಿ ಬೇಸಿಗೆ ರಜಾದಲ್ಲೂ, ನಮ್ಮ ಜೊತೆ ಶಾಲೆಗೆ ಬರುತ್ತಿದ್ದ ಬಹಳ ಹುಡುಗರು, ಅಜ್ಜ ಮನೆಗೋ... ಮಾವನ ಮನೆಗೋ ಎಂದು ಬೇರೆ ಊರಿಗೆ ಹೋಗಿ ಬಿಡುತ್ತಿದ್ದರು. ಆಗ ನನಗೆ ಆಟವಾಡಲು ಸಿಗುತ್ತಿದ್ದುದು ನೀನೊಬ್ಬನೆ! ಶಾಲೆ ಪ್ರಾರಂಭವಾದಾಗಲೂ, ನಮ್ಮ ಜೊತೆಯ ಹುಡುಗರು, ತಾವು ರಜಾದಲ್ಲಿ ಊರಿಗೆ ಹೋಗಿದ್ದು, ಅಲ್ಲಿ ಏನೆಲ್ಲ ನೋಡಿದ್ದನ್ನ ಜಂಬ ಕೊಚ್ಚಿಕೊಂಡು ಹೇಳುತ್ತಿದ್ದರು. 'ನಿನ್ನ ಊರು ಯಾವುದೊ?' ಎಂದು ಸ್ನೇಹಿತರು ಕೇಳಿದಾಗಲೆಲ್ಲ ಗಲಿಬಿಲಿಯಾಗುತ್ತಿತ್ತು. ಅಜ್ಜ-ಅಜ್ಜ ಇರುವ ಊರು ನಮ್ಮದೆಂದು ಹೇಳುವುದಕ್ಕೆ ಅಂತಹ ಊರು ಇರಲಿಲ್ಲ. ಇನ್ನು ಮಾವ-ಚಿಕ್ಕಪ್ಪ... ಹೀಗೆ ಇವರೆಲ್ಲ ಇರುವ ಊರು ನಮ್ಮದೆಂದು ಹೇಳುವುದೆ! ಹಾಗಾದರೆ ನಾನೇಕೆ ರಜಾದಿನಗಳಲ್ಲಿ ಅಲ್ಲಿಗೆ ಹೋಗಿ ಇರುತ್ತಿರಲಿಲ್ಲ ! ನೀನಂತೂ ಎಲ್ಲಿಗೂ ಹೋಗದೆ ನನ್ನೊಟ್ಟಿಗೆ ಆಡಲು ಸಿಗುತ್ತಿದ್ದರಿಂದ ಇದನ್ನೆಲ್ಲಾ ನಿನ್ನಲ್ಲಿ ಹೇಳಬೇಕಾಗಿರಲಿಲ್ಲ.

ಆದರೆ ನಾಲ್ಕನೆ ತರಗತಿ ಪಾಸಾದ ಮೇಲೆ ಮಿಡ್ಲಿಸ್ಕೂಲ್‌ಗೆ ತಾಲೋಕ್ ಆಫೀಸಿನ ಬೀದಿಯಲ್ಲಿರುವ ಶಾಲೆಗೆ ಸೇರದೆ ನೀನು, ಅದ್ಯಾವುದೊ ಮಾವನ ಮನೆ ಇದೆ ಅಂತ ಬೆಂಗಳೂರಿಗೆ ಹೋಗಿಬಿಟ್ಟೆ. ಶಂಕ್ರು ಹಾಗೂ ಪ್ರಹ್ಲಾದ ಸಂತೆಪೇಟೆ ಪಕ್ಕದಲ್ಲಿದ್ದ ಕಾನ್ವೆಂಟ್ ಶಾಲೆಗೆ ಸೇರಿಬಿಟ್ಟರು.

ಇದಾದ ನಂತರ ನಾನು ನಿನ್ನನ್ನು ಕಾಣಲೇ ಇಲ್ಲ. ನಾನು ಪಿ.ಯು.ಸಿ. ಆದನಂತರ ಬೇರೆ ಊರಿನಲ್ಲಿ ಇರಬೇಕಾಯ್ತು. ನಂತರ ನಮ್ಮ ಮನೆಯವರು ಈ ಊರನ್ನು ಬಿಟ್ಟುಬಿಟ್ಟರು. ಈಗ ಇಪ್ಪತ್ತು ವರ್ಷಗಳಿಂದಲೂ ಬೆಂಗಳೂರಿನಲ್ಲೇ ಇದ್ದೀವಿ.

ನೀನು ಈಗ ಹೇಗಿದ್ದೀಯಾ? ಎಲ್ಲಿದ್ದೀಯಾ?

ನಿನಗೆ ಗೊತ್ತಾ, ಪಿಂಟೊ ಹೈಸ್ಕೂಲ್‌ಗೆ ಬಾರದೆ ಅವರಪ್ಪನಂತೆ ಲಾರಿಯ ಕೆಲಸಕ್ಕೆ ಸೇರಿದ. ಇನ್ನು ಕೆಲವರು, ಬುಧವಾರದ ಸಂತೆದಿನ ಶಾಲೆಗೆ ಚಕ್ಕರ್ ಹೊಡೆದು ಅವರ ಅಪ್ಪಂದಿರು ಸಂತೆ ಮೈದಾನದಲ್ಲಿ ಇಡುವ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದು, ಕ್ರಮೇಣ ಶಾಲೆಯನ್ನು ಬಿಟ್ಟುಬಿಟ್ಟರು.

ಗೆಳೆಯಾ, ನೀನು ನನಗೆ ಆ ಪ್ರೈಮರಿ ಶಾಲೆಯಲ್ಲಿ ಕಂಡಿದ್ದಕ್ಕಿಂತ ದೊಡ್ಡವನಾಗಿ ಬೆಳೆದೇ ಇಲ್ಲ. ಅದಕ್ಕೇ ನೆನಪುಗಳು ಆ ಜಾರಬಂಡೆ ಮೇಲೆ ಆಟ ಆಡುತ್ತಲೇ ಇವೆ!

ಬೆಂಗಳೂರು **ಕೆ. ರಮೇಶ**



# ಮಾತೃಭಾಷೆಯ ಅದೃಶ್ಯ ಬಂಧುವಿಗೆ...

ಪ್ರೀತಿಯ ಕನ್ನಡ ಬಂಧು,

ಹೀಗೆ ನಿಮ್ಮನ್ನು ಸಂಬೋಧಿಸುತ್ತಿರುವುದರ ಕಾರಣ, ನಿಮ್ಮನ್ನು ನಾನು ಮುಖತಃ ಕಂಡಿಲ್ಲ, ನನ್ನನ್ನೂ ನೀವು ಕಂಡೇ ಇಲ್ಲ. ಇಷ್ಟಕ್ಕೂ ನೀವು ಯಾರೆಂಬುದೇ ನನಗಾಗಲೀ, ನನ್ನ ಮಕ್ಕಳಿಗಾಗಲೀ ಗೊತ್ತಿಲ್ಲ. ಆದರೆ ನಾವೆಲ್ಲ ಎಂದೆಂದಿಗೂ ಮರೆಯಲಾರದಂಥ ಉಪಕಾರವನ್ನು ನೀವು ನಮಗೆ ಮಾಡಿದ್ದೀರಿ.

ನನ್ನ ಗಂಡುಮಕ್ಕಳಿಬ್ಬರಿಗೂ ಒಂದೇ ಮನೆಯ ಅಕ್ಕತಂಗಿಯರನ್ನು ತಂದುಕೊಳ್ಳುವುದೆಂದು, ಇಬ್ಬರ ಮದುವೆಯ ದಿನವೂ ಗೊತ್ತಾಗಿ ಎಲ್ಲ ಆ ಸಿದ್ಧತೆ, ಸಂಭ್ರಮದಲ್ಲಿದ್ದೆವು. ಹಿರಿಯ ಮಗ ಶಶಿಕಾಂತ್ ಬಳ್ಳಾರಿಯಲ್ಲಿ ಇಂಜಿನಿಯರಿಂಗ್ ಉದ್ಯೋಗದಲ್ಲಿದ್ದ. ಚಿಕ್ಕವನು ಶ್ಯಾಮಸುಂದರ, ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ವೈದ್ಯಕೀಯ ವ್ಯಾಸಂಗ ಮುಗಿಸಿ, ಉನ್ನತ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ತೆರಳುವ ಸಿದ್ಧತೆಯಲ್ಲಿದ್ದ. ವಿದೇಶೀ ಶಿಕ್ಷಣಕ್ಕೆ ಅರ್ಹತೆ ಸಂಪಾದಿಸಲು ಆತ ಪರೀಕ್ಷೆಯೊಂದರಲ್ಲಿ

ತೇರ್ಗಡೆಯಾಗಬೇಕಿತ್ತು. ಅಹ್ಮದಾಬಾದ್‌ನಲ್ಲಿ ಈ ಪರೀಕ್ಷೆ ನಡೆಯಲಿದ್ದುದ್ದರಿಂದ ಅಲ್ಲಿಗೆ ಪಯಣಿಸಲು ಶ್ಯಾಮ್ ಎಲ್ಲಾ ಸಿದ್ಧತೆ ಮಾಡಿಕೊಂಡ.

ನಮ್ಮ ಬೀಗರಾಗಲಿರುವವರ ನೆಂಟರೊಬ್ಬರು ಅಹ್ಮದಾಬಾದಿನಲ್ಲಿದ್ದುದ್ದರಿಂದ ಶ್ಯಾಮ್ ಅವರಲ್ಲೇ ಇಳಿದುಕೊಳ್ಳುವುದೆಂದು ನಿಶ್ಚಯಿಸಿ, ಆ ನೆಂಟರಿಗೆ ಇದನ್ನು ತಿಳಿಸಿಯೂ ಆಗಿತ್ತು. ತಲುಪಿದೊಡನೆ ಫೋನ್ ಮಾಡೆಂದು ತಿಳಿಸಿ, ಬೆಂಗಳೂರಿನ ರೈಲು ನಿಲ್ದಾಣದಲ್ಲಿ ಶ್ಯಾಮನನ್ನು ಬೀಳ್ಕೊಟ್ಟು ಬಂದೆವು.

ಒಂದೂವರೆ ದಿವಸದ ನಂತರ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಫೋನಿನಲ್ಲಿ ಬಂದದ್ದು ಎದೆ ಒಡೆಯುವ ವಾರ್ತೆ. ಮಗಳು ಆಫೀಸಿನಿಂದಲೆ ಫೋನ್ ಮಾಡಿ, ಬಿಕ್ಕಿ ಬಿಕ್ಕಿ ಅಳುತ್ತ ''ಅಮ್ಮಾ... ಪಚ್ಚು... (ಅವನನ್ನು ಪ್ರೀತಿಯಿಂದ ಮನೆಯಲ್ಲಿ 'ಪಚ್ಚೂ...' ಎಂದೇ ಕರೆಯುತ್ತಿದ್ದೆವು.) ದಾದರಿನಲ್ಲಿ ಪ್ರಜ್ಞೆ ತಪ್ಪಿ ಬಿದ್ದಿದಾನಂತೆ. ಅವನ ಸೂಟ್‌ಕೇಸ್‌ನಲ್ಲಿ ಎಲ್ಲ ದೋಚಿಕೊಂಡಿದ್ದಾರಂತೆ...'' ಎಂದದ್ದನ್ನು ಕೇಳಿ ಕಣ್ಣು ಕತ್ತಲಿಟ್ಟು ಕುಸಿದೆ.

ಮುಂಬಯಿಯ ಪೊಲೀಸರು, ಅಲ್ಲಿಯ ನಮ್ಮ ನೆಂಟರಿಷ್ಟರು ಬೇರೆ ಬೇರೆ ಮೂಲಗಳಿಂದ ತುಂಬ ಪ್ರಯತ್ನಿಸಿದರೂ ನನ್ನ ಮಗು ಪತ್ತೆಯಾಗಲಿಲ್ಲ. ದಾದರ್ ಸುತ್ತಮುತ್ತಲ ಆಸ್ಪತ್ರೆಗಳನ್ನೆಲ್ಲ ಅವರುಗಳು ಬಿಡದೆ ಜಾಲಾಡಿದ್ದಾರೆ. ದಾದರ್ ರೈಲ್ವೆ ಸ್ಟೇಷನ್ನಿನಲ್ಲಿ, ದೂರದರ್ಶನದ ಮೂಲಕ ಜಾಹೀರು ಕೂಡ ಮಾಡಿದರಂತೆ. ಎಲ್ಲಿಯೂ not to be found ಎಂಬ ಸುದ್ದಿಯೇ ಸಿಕ್ಕುತ್ತಿದೆ.

ಆದರೆ ನನ್ನ ಸುದೈವ, ಮಧ್ಯರಾತ್ರಿ ಎರಡು ಗಂಟೆ ಹೊತ್ತಿಗೆ ಬಂದ ಒಂದು ಫೋನ್‌ಕಾಲ್ ಜೀವಚ್ಛವವಾಗಿದ್ದ ನನ್ನನ್ನು ಬದುಕಿಸಿತು. ನಮ್ಮ ಬೀಗರಿಗೆ ಮರಳಿ ಅಹ್ಮದಾಬಾದ್‌ನಿಂದ ಅವರ ನೆಂಟರು ಫೋನ್ ಮಾಡಿದ್ದರು. ''ಶ್ಯಾಮ್‌ಸುಂದರ್ ಈಗ ತಾನೇ ನಮ್ಮಲ್ಲಿಗೆ ಬಂದು ತಲುಪಿದ್ದಾರೆ. ಪೂರ್ತಿ ಪ್ರಜ್ಞೆ ಬಂದಿಲ್ಲ. but he is safe. ಯಾರೋ ಕರೆದುಕೊಂಡು ಬಂದು ಬಿಟ್ಟು ಹೋಗಿದ್ದಾರೆ....''

ಆ 'ಯಾರೋ' ನೀವಲ್ಲವೇ ಕನ್ನಡ ಬಂಧು? ನಡೆದದ್ದೆಲ್ಲ ಮುಂದೆ ನಮಗೆ ನಿಧಾನವಾಗಿ ತಿಳಿದುಬಂದಿತು. ಎಂಥೆಂಥ ಮೋಸ ಮಾಡುವ ಜನರಿರುತ್ತಾರೆ...! ಆದರೆ, ಮಾನವೀಯತೆಗೆ, ಮಾತೃಭಾಷೆಗೆ ಸ್ಪಂದಿಸುವ ನಿಮ್ಮಂಥ ಸಹೃಯದರೂ ಇರುತ್ತಾರಲ್ಲವೆ?

ಇಲ್ಲಿಂದ ಹೊರಟ ಶ್ಯಾಮ್ ಮುಂಬಯಿ ತಲುಪಿದ್ದು ನಟ್ಟ ನಡುರಾತ್ರಿಯಲ್ಲಿ. ಅಲ್ಲಿಯ ಸೆಂಟ್ರಲ್ ರೈಲ್ವೇ ಸ್ಟೇಷನ್‌ನಲ್ಲಿ, ಬೆಳಗಿನ ಝಾವ ಬರಲಿರುವ ಅಹ್ಮದಾಬಾದ್‌ಗೆ ಹೋಗುವ ಟ್ರೈನಿಗಾಗಿ ಶ್ಯಾಮ್ ಕಾಯುತ್ತ ಕುಳಿತಿದ್ದಾಗ, ನೀಟಾಗಿ ಸೂಟು ಬೂಟು, ಟೈ ಧರಿಸಿದ್ದ ಬಕ್ಕುತಲೆಯ ಮಧ್ಯ ವಯಸ್ಸಿನ ವ್ಯಕ್ತಿಯೊಂದು ಇವನನ್ನು ಸ್ನೇಹ, ಗೌರವದಿಂದ



ಮಾತನಾಡಿಸುತ್ತ, ನಡುವೆ ಸಿಗರೇಟು ಹಚ್ಚಿಕೊಂಡು, ಹೊಗೆಯನ್ನು ಇವನ ಮುಖದ ಮೇಲೇ ನೇರವಾಗಿ, ಸುರುಳಿಯಾಗಿ ಬಿಟ್ಟ ನೆನಪೊಂದೆ ಇವನಿಗೆ.

ಆ ಅಪರಿಚಿತನ ಸಿಗರೇಟ್ ಹೊಗೆಯಿಂದ ಪ್ರಜ್ಞೆ ತಪ್ಪಿ ಉರುಳಿಕೊಂಡಿದ್ದು ಸೆಂಟ್ರಲ್ ಬಾಂಬೆಯಲ್ಲಿ. ಮರುದಿನ ಮಧ್ಯಾಹ್ನದವರೆಗೂ ಹಾಗೆಯೇ ಮೂಲೆಯ ಬೆಂಚಿನ ಬಳಿ ಪ್ರಜ್ಞಾಹೀನನಾಗಿ ಹೇಗೆ ಮಲಗಿದ್ದನೋ... ಹೇಗೆ ಆ ಕಟು ಗಳಿಗೆ ಕಳೆಯಿತೋ ಗೊತ್ತಿಲ್ಲ.

ಆ ಸಂಜೆ, ರಾತ್ರಿ ಕಳೆದು ಮಧ್ಯರಾತ್ರಿಯ ಒಂದೂವರೆ ಗಂಟೆಯ ಹೊತ್ತಿಗೆ ಆ ನೆಂಟರ ಮನೆಗೆ ಈ ನನ್ನ ಮಗುವನ್ನು ಕರೆದುಕೊಂಡು ಹೋಗಿ ತಲುಪಿಸಿದಿರಿ ನೀವು. ಎಷ್ಟು ಕೇಳಿದರೂ ನಿಮ್ಮ ಬಗ್ಗೆ ಯಾವ ಹೆಚ್ಚಿನ ವಿವರಗಳನ್ನೂ ಕೊಡಲು ಇಷ್ಟಪಡಲಿಲ್ಲವಂತೆ. ನೀವು ತಂದೆ, ಮಗ ಇಬ್ಬರಿದ್ದಿರಂತೆ. ಬಹಳ ಕಷ್ಟಪಟ್ಟು, ಅರೆಪ್ರಜ್ಞಾವಸ್ಥೆಯ ನನ್ನ ಮಗನನ್ನು ಅಹ್ಮದಾಬಾದಿನ ರೈಲು ಹತ್ತಿಸಿಕೊಂಡು, ಆ ನೆಂಟರ ಮನೆ ವಿಳಾಸ ಹುಡುಕಿ ಕರೆತಂದು ಬಿಟ್ಟು, ಕೂಡಲೇ ಇಬ್ಬರೂ ಹೊರಟೇಬಿಟ್ಟರಂತೆ. ನೀವು ಅವರ ಬಳಿ ಅಂದು ತಿಳಿಸಿದ್ದಿಷ್ಟು:

''ಉತ್ತರ ಭಾರತದ ಕಡೆಯಿಂದ ಮೈಸೂರಿನ ಬಳಿಯ ಹಳ್ಳಿ ಒಂದರ ಕಡೆಗೆ ನಾನು ಮತ್ತು ನನ್ನ ಮಗ ಪ್ರಯಾಣ ಮಾಡಲು ಮಧ್ಯಾಹ್ನದ ಹೊತ್ತು ಸೆಂಟ್ರಲ್ ಬಾಂಬೆ ಸ್ಟೇಷನ್ನಿನಲ್ಲಿ ರೈಲಿಗಾಗಿ ಕಾಯುತ್ತ ನಡೆದಾಡುತ್ತಿರುವಾಗ, ಮೂಲೆಯಲ್ಲಿ ಬಿದ್ದಿದ್ದ ಈ ಹುಡುಗನನ್ನು, ಅರೆಬರೆ ತೆರೆದು ಬಿದ್ದಿದ್ದ ಸೂಟ್‌ಕೇಸನ್ನು ನೋಡಿದೆವು. unnatural ಆಗಿ ಕಂಡಿತು. ಯಾಕೋ ಹುಡುಗ ಮಲಗಿದ್ದ ಭಂಗಿ ನನಗೆ ಕಾಡಿತು. ಅನುದ್ದಿಶ್ಯವಾಗಿ ಹತ್ತಿರ ಹೋಗಿ ನೋಡುತ್ತ, ನಾನು, ನನ್ನ ಮಗ ನಿಂತಿದ್ದಾಗ, ಪಕ್ಕನೆ ಮಗ್ಗುಲು ಹೊರಳಿದ ಹುಡುಗ, ಎರಡೂ ಕೈ ಚಾಚಿ, ''ನಂದೆಲ್ಲ ಹೋಯಿತು... ಹೋಯಿತು... ಎಲ್ಲ ಕಳೆದುಕೊಂಡೆ. ಮಾರ್ಕ್ಸ್‌ಕಾರ್ಡೂ ಇಲ್ಲ...'' ಎಂದು ಕನ್ನಡದಲ್ಲಿ ಸ್ಪಷ್ಟವಾಗಿ ತೊದಲಿ ಕನವರಿಸಿಕೊಂಡ. ಆ ಕನ್ನಡದ ಕನವರಿಕೆಗೆ ನನ್ನ ಕರುಳು ಹಿಂಡಿಹೋಯಿತು. ಅವನ ಷರ್ಟಿನ ಜೇಬಿನಲ್ಲಿ ಕೈಯಿಟ್ಟಾಗ ಅಲ್ಲಿದ್ದ ಕಾಗದ ಪತ್ರಗಳಿಂದ ಅವನು ಒಬ್ಬ ಡಾಕ್ಟರ್ ಅಂತ ಗೊತ್ತಾಯ್ತು. ನಿಮ್ಮ ವಿಳಾಸವೂ ಅದರಲ್ಲಿತ್ತು. ನಾನು ತಕ್ಷಣ ನಿರ್ಧಾರ ಮಾಡಿ, ಅಲ್ಲಿದ್ದ ಸುತ್ತಲಿನವರಿಗೆ, 'ಈತ ನಮ್ಮ ಹುಡುಗ... ಕರೆದುಕೊಂಡು ಹೋಗ್ತೀನಿ' ಅಂತ ಮಾತ್ರ ಹೇಳಿದೆ. ನನ್ನ ಮಗನ ಬಳಿ ಅಹ್ಮದಾಬಾದ್ ರೈಲಿಗೆ ಮೂರು ಟಿಕೆಟ್ ತರಲು ಹೇಳಿದೆ. ಏನೋ ಕೆಟ್ಟ, ಮಾರಕ ಔಷಧಿ ಕುಡಿಸಿಬಿಟ್ಟಿದ್ದಾರೆ ಅಂತ ಕಾಣುತ್ತೆ. ನೀವು ಕೂಡಲೇ ಡಾಕ್ಟರನ್ನು ಕರೆಸಿ ತೋರಿಸಿಬಿಡಿ...''

ಯಾರೂ ನಂಬಲಾಗದಂಥ ರೀತಿಯಲ್ಲಿ ನೀವು ನಿಮ್ಮ ಕೆಲಸ ಬದಿಗಿರಿಸಿ, ನಿಮ್ಮ ಪ್ರಯಾಣದ ದಿಕ್ಕನ್ನು ಬದಲಿಸಿ ಈ ಹುಡುಗನನ್ನು ಕರೆದೊಯ್ದು ಗಮ್ಯಸ್ಥಾನ ಸೇರಿಸಿದಿರಿ. ಇವತ್ತಿಗೆ ಇದೇ ಹುಡುಗ ತನ್ನ ಗುರಿ ಸಾಧಿಸಿ, ಇಂಗ್ಲಂಡಿನಲ್ಲಿ ನೆಲೆಸಿ, ಉನ್ನತ ವ್ಯಾಸಂಗ ಮುಂದುವರೆಸಿದ್ದಾನೆ. ಅವನ ಹೆಂಡತಿ ಮತ್ತು ಮುದ್ದಾದ ಮಗು ಕೂಡ ಅವನ ಜೊತೆಗೇ ಇದ್ದಾರೆ. ನೀವು ಮರಳಿ ಹಚ್ಚಿದ ದೀಪವಲ್ಲವೇ ಅವನ ಬದುಕು?



ಕನ್ನಡಕ್ಕೆ, ಕನ್ನಡತನಕ್ಕೆ ಇನ್ನಾವ ಮುಡಿಪು ಬೇಕು? ನೀವೆಲ್ಲಿದ್ದೀರೋ ಗೊತ್ತಿಲ್ಲ. ಈ ಮೂಲಕ ಹಡೆದೊಡಲಿನ ಹಸಿ ಹಸಿರು ಕೃತಜ್ಞತೆಗಳನ್ನು ನಿಮಗೆ ತಲೆಬಾಗಿ ಕಳಿಸುತ್ತಿದ್ದೇನೆ. ದಯವಿಟ್ಟು ಸ್ವೀಕರಿಸಿ.

ಬೆಂಗಳೂರು

ಅನುಸೂಯಾ ದೇವಿ





# ಸಾಲ್‌ಮಿಂಚು

ಬೆಂಗಳೂರಿನಿಂದ ತಂದ ಗೊಂಬೆಯನ್ನು ನನ್ನ ಮಗಳಿಗೆ ಕೊಟ್ಟೆ. ಗೊಂಬೆ ಸಂತೋಷದಿಂದ ನಕ್ಕಿತು.

**ಸರಜೂ ಕಾಟ್ಕರ್**

ಆಕಾಶವೆಷ್ಟು ಚಿಕ್ಕದಾಯ್ತು ನನ್ನ ಕನಸಿಗೆ, ನಗ್ನವಾಯಿತು ಸಮುದ್ರ ನನ್ನ ಮನಸ್ಸಿಗೆ.

**ಎಂ.ಸಿ. ಶೋಭಾ**

ಈ ದಟ್ಟ ಕಾಡಲ್ಲಿ ಕತ್ತಲೆ ಹೆದರಿ ಉಸಿರು ಬಿಗಿ ಹಿಡಿದು ಕುಳಿತಿದೆ ಅವಿತು. **ಕೆ.ಎಸ್. ಪುಟ್ಟೇಗೌಡ**

ಮದ್ಯಾಹ್ನದ ಉರಿಬಿಸಿಲು, ಕರ್ಫ್ಯೂ ಬಿದ್ದ ಊರೊಳಗೆ ಒಂಟಿ ಮಗುವಿನ ಹಾಲುಗಲ್ಲಕ್ಕೊಂದಿಷ್ಟು ರಕ್ತದ ದೃಷ್ಟಿಬೊಟ್ಟು. **ಕು.ಸ. ಮಧುಸೂದನ**

ಕವಿತೆಗಳ ಹೆಕ್ಕುವಾಗ ದೀಪ ಹಿಡಿಯುತ್ತಾರೆ. ಹೆಸರಿಲ್ಲದವರು. **ದೇವಯಾನಿ**

ಬೆಳ್ಳನೆ ಬೆಳದಿಂಗಳು ಕಲ್ಲು ಬಂಡೆಯ ಮೇಲೆ ಬಿದ್ದು ತೊಟ್ಟು ಬಿಡದೆ ಸೋರಿಹೋಗಿದೆ.

**ಚನ್ನು ಎಸ್. ಹಡಪದ**

ಅಂಗೈಯಲ್ಲಿ ಒಂದು ಪಾತರಗಿತ್ತಿ ಸಹಜವಾಗಿ ಬಂದು ಕೂತಿತು. ಮುಷ್ಟಿ ಮುಚ್ಚಬೇಕೆಂದರೆ ನನ್ನ ನೋಡಿ ಹಗುರಾಗಿ ನಕ್ಕಿತು. **ಸರಜೂ ಕಾಟ್ಕರ್**

ಹೊಲಮನಿ ಹ್ವಾದ ಮ್ಯಾಲ ಹಾರ್ವೆಯು ಎಲ್ಲೈತಿ, ಗುಡ್ಡದ ತುದಿಯಾಗ ಕುಂತೇವ, ನಸದೇವ ಕುಂತ ಕುಲಗೆಟ್ಟಾರು ಮನೆಮಕ್ಕಳ. **ಬಿ.ಎಚ್. ಬಾಲರೆಡ್ಡಿ.**

ತುಸು ಕಾವು ಕೊಡು ಸಾಕು, ನನ್ನ ಕಣ್ಣ ಗೂಡ 'ಹೊಂಗನಸ ಮೊಟ್ಟೆ'ಗಳು ಮರಿಯಾಗುವವು.

**ಎ.ಎ. ಕೊಟ್ಟಗೆ ಉಮೇಶ್**

ಚೆತ್ತಲೆ ನಡುಗುತ್ತಿದ್ದಾಗ ಮೊಗ ನೋಡಿದ ವಸಂತ ಚಿಗುರ ಹೊದ್ದಿಸಿ ಬೆಚ್ಚಗಾಗಿಸಿದ. **ಗೀತಾ ಡಿ.ಸಿ.**



## ವನಿತಾ ಕೇರುಗೋಡು

# ಮುಳುಗಡೆ

ನಿಂತ ನೀರಿನಲ್ಲಿ ಮಿಂಚಿ ಮಾಯವಾಗುತ್ತಿರುವ ಮೀನುಗಳನ್ನೇ ನೋಡುತ್ತ ಮಂಡಕ್ಕಿ ಬೀರುತ್ತಿದ್ದಾನೆ, ದಿಬ್ಬದ ಮೇಲಿರುವ ಎಪ್ಪತ್ತರ ಮಬ್ಬುಗವಿದ ಅಜ್ಜಪ್ಪ. ಕೆಲವೊಂದು ಮೀನುಗಳು ಮುಳುಗುತ್ತಿರುವ ಮಂಡಕ್ಕಿಯನ್ನು ಹಿಂಬಾಲಿಸುತ್ತಿದ್ದರೆ, ಮತ್ತೆ ಕೆಲವು ತೇಲುತ್ತಿರುವ ಮಂಡಕ್ಕಿಗಾಗಿ ಮೇಲೇರಿ ಬರುತ್ತಿದ್ದವು. ಮೀನು ಮಂಡಕ್ಕಿಯಲ್ಲಿಯೇ ಮುಳುಗಿದ್ದ ಮುದುಕನಿಗೆ ಗುಳ್ಳೆಂಬ ಶಬ್ದ ಕೇಳಿದಾಗ, ದೃಷ್ಟಿ ಅತ್ತ ಹರಿಸುತ್ತಾನೆ. ನೀರಿನಲ್ಲಿ ಮುಳುಗೇಳುತ್ತಿರುವ ಕಾಯನ್ನು ಕಂಡಾಗ, ತನ್ನ ಕರುಳೇ ಹೊರಳಿದಂತಾಗಿ, ಅತ್ತ ಕಡೆ ಬೆನ್ನು ಹಾಕಿ, ದಿಗಂತದತ್ತ ದೃಷ್ಟಿ ಬಾಚುತ್ತಾನೆ, ಮುದುಕ. ಮೋಡದ ಸಂದಿಯಿಂದ ಮರೆಯಾಗುತ್ತಿರುವ ಸೂರ್ಯನೂ ತನ್ನನ್ನು ನೋಡಿ ನಗುತ್ತಿರುವಂತೆ, ತನ್ನನ್ನೇ ನುಂಗಲು ಬಂದವನಂತೆ ಕಾಣುತ್ತಾನೆ. ಎತ್ತಲೂ ನೋಡಲಾಗದೆ, ಕತ್ತನ್ನೇ ಎತ್ತಲಾಗದೆ, ಕೈಗಳನ್ನೇ ಬಳೆಯನ್ನಾಗಿಸಿಕೊಂಡು, ಮೊಣಕಾಲುಗಳ ಸಂದಿಯಲ್ಲಿ ಮುಖ ಹುದುಗಿಸಿ ಮುಸಿ ಮುಸಿ ಅಳುತ್ತಾನೆ ಮುದುಕ... ಹೌದು ಯಾರಿವನು, ಇವನೇಕೆ ಹೀಗೆ?... ನಿಮಗೆ ಉತ್ತರ ಬೇಕೇ ಬೇಕೆ? ಹಾಗಿದ್ದರೆ ಬನ್ನಿ, ಮುದುಕನ ಮನಸ್ಸನ್ನೇ ಹಿಂಬಾಲಿಸಿ ಹಿಂದೆ ಹೋಗೋಣ.



...ಇದೀಗ ಕಾಯೊಂದನ್ನು ಅನಾಥವಾಗಿಸಿ, ತಾನೂ ನಡುನೀರಿನಲ್ಲಿ ಅರ್ಧ ಮುಳುಗಿರುವ ಈ ತೆಂಗಿನ ಮರ, ತನ್ನದೇ ಮನೆಯ ಮುಂಭಾಗದಲ್ಲಿದ್ದುದನ್ನು ನೆನೆದು ಮರುಗುತ್ತಾನೆ ಮುದುಕ. ಹೆಸರಿಗೆ ತಕ್ಕಂತೆ, ಈ ಕಲ್ಪವೃಕ್ಷದಲ್ಲಿ ಸದಾ ತುಂಬಿ ತೂಗುವ ಕಾಯಿಗಳು. ದಿನಕ್ಕೊಂದೆರಡಾದರೂ ಉದುರಿಬೀಳಲೇಬೇಕು. ಹೀಗೆ ಒಮ್ಮೆ ಬಿದ್ದ ಕಾಯೊಂದನ್ನೆತ್ತಿ ಚೀಲದೊಳಗೆ ತುರುಕಿಕೊಂಡ ಕೆಲಸದಾಕೆಯ ಮಗಳು ಪಾರುವನ್ನು ಕಂಡವನೇ, ಜೋರಾಗಿ ಕೂಗಿ ಮನೆಯವರನ್ನೆಲ್ಲಾ ಕರೆದು, ನುಚ್ಚಿನ ಚೀಲದೊಳಗೆ ಬೆಚ್ಚಗೆ ಕುಳಿತಿದ್ದ ಸಿಪ್ಪೆಕಾಯಿಯನ್ನು ಹೊರತೆಗೆಸಿದ್ದ, ಹಿಂದೊಮ್ಮೆ ಕೆಣಕಿ, ಜಡೆ ಎಳೆದಿದ್ದಾಗ ಸಿಡಿದುಬಿದ್ದಿದ್ದ ಪಾರುವಿನ ಮೇಲೆ ಸೇಡು ತೀರಿಸಿಕೊಂಡಿದ್ದ. ಯಾಕೋ ಪಾರುವಿನ ನೆನಪು ಆತನ ಹಣ್ಣು ಮೀಸೆಯಡಿಯಲ್ಲಿ ಸಣ್ಣ ನಗೆಯೊಂದನ್ನು ಮೂಡಿಸುತ್ತದೆ. ಕ್ರಮೇಣ ಅದು ವಿಷಾದದ ನಗೆಯಾಗಿ ಮಾರ್ಪಟ್ಟು, ಹಳೆಯ ನೆನಪಿನ್ನೊಂದನ್ನು ಎಳೆಎಳೆಯಾಗಿ ಬಿಡಿಸಿಡುತ್ತದೆ.

...ಅಂದು ಭೂಮಣಿ ಹಬ್ಬದೂಟ ಉಂಡು, ತೋಟಾಕೋವಿ ಹೆಗಲಿಗೇರಿಸಿ, ಬುತ್ತಿಯೊಂದಿಗೆ ಹೋದ ಹಿರಿಯ ಮಗ, ಎರಡು ಹಂದಿ ಹೊಡೆದು, ಗತ್ತಿನಿಂದ ಮನೆಗೆ ಬಂದಿದ್ದಕ್ಕಾಗಿ ಬಹಳ ಹರ್ಷಗೊಂಡ ಗೌಡರು, ತುಂಡು-ಕಡುಬಿನೂಟ ಉಂಡು ಹೋಗಲು ಊರವರನ್ನೆಲ್ಲಾ ಕರೆದಿದ್ದರು. ಊಟದ ಮಧ್ಯೆ, ಹಿರಿಯ ಮಗ, ಊರಿನವರೊಂದಿಗೆ ಮಾತನಾಡುತ್ತ, ಅದೇನೋ ಮುಳುಗಡೆ ಅನ್ನುತ್ತಿದ್ದುದು, ಮನೆ, ಗದ್ದೆ, ತೋಟ, ತೆಂಗಿನಮರ, ಎಲ್ಲಕ್ಕೂ ಇಷ್ಟಿಷ್ಟು ರೇಟು ಅನ್ನುತ್ತಿದ್ದುದು ಕಿವಿಗೆ ಬಿದ್ದರೂ, ಹೆಂಡ ತಲೆಗೇರಿದೆ ಅಂದುಕೊಂಡು ಸುಮ್ಮನಿದ್ದರು. "ಬ್ಯಾಡ ಬ್ಯಾಡ ಅಂದ್ರೂ, ಅದೆಂಥದೋ ಬೇರು ಹಾಕ್ತೀಯ, ಈಗ್ನೋಡು ನಮ್ಮಣ್ಣಂಗೆ ಈಗ್ಲೆ ತಲೀಗ್ಹೇರ್ ಹೋಗದೆ" ಎಂದು ಹೆಂಡತಿಗೆ ಗದರಿದ್ದರು. ಮಾರನೆಯ ದಿನ ಹುರುತುಂಡಿನೊಂದಿಗೆ ಹೆಂಡ ಸೇವನೆ ಮಾಡಿ, ಹಲ್ಲಿಗೆ ಕಡ್ಡಿ ಹಾಕುತ್ತಾ ನಿಂತಿದ್ದಾಗ, ಮನೆಯಂಗಳದ ತೆಂಗಿನ ಮರದಡಿ, ಪಾರುವಿನ ಮಗ ಚೆನ್ನಯ್ಯ, ತಮ್ಮ ಮಗನೊಂದಿಗೆ ಮಾತಾಡುತ್ತಾ ನಿಂತಿದ್ದು ಕಾಣಿಸಿತು. ಅವನಿಗೆ ಅದೆಂಥದೋ ಸರಕಾರೀ ಕೆಲಸ ಸಿಕ್ಕಿದೆಯೆಂದು ಪಾರುವೇ ಹೇಳಿದ್ದಳು. ಈಗ ಸೂಟುಬೂಟಿನೊಂದಿಗೆ ನಿಂತಿದ್ದ ಅವನನ್ನು ಕಂಡು ಹರ್ಷಗೊಂಡರು. ಆತನ ಗೆಳೆಯನಾಗಿದ್ದರೂ, ಅವನಲ್ಲಿನ ಒಳ್ಳೆಯ ಗುಣಗಳನ್ನು ತನ್ನದಾಗಿಸಿಕೊಳ್ಳದ ಮಗನ ಬಗ್ಗೆ ಮನದಲ್ಲೇ ನೊಂದರು. ಆದರೂ ತೋರಗೊಡದೆ, "ಓ ಏನೋ ಚೆನ್ನ, ಪುಸ್ತ್ಕ, ಪೆನ್ನು ಕೈಯಲ್ಲೇ ಅದ್ಯಲ್ಲ, ಮನೀಗ್ಹೋಗಿಲ್ಲನು" ಎಂದರು. ವಿನೀತ ಭಾವದಿಂದ ನಮಸ್ಕರಿಸಿದ ಚೆನ್ನಯ್ಯ, "ಇಲ್ಲ ಗೌಡ್ರೆ, ನಿಮ್ಮ ಮಗ ಹೇಳ್ತಿದ್ರು, ಎಲ್ಲ ತೆಂಗಿನ ಮರಕ್ಕಿಂತ ಈ ಮರ್ದಲ್ಲೆ ಜಾಸ್ತಿ ಕಾಯಿ ಬಿಡೋದು, ಇದ್ಕೆ ಜಾಸ್ತಿ ರೇಟ್ ಹಾಕ್ಬೇಕು ಅಂತ, ಅದ್ಹೆಂಗಾಗ್ತದೆ...", ಚೆನ್ನಯ್ಯನ ಮಾತು ಮುಗಿಯುವ ಮೊದಲೇ, ಏನೊಂದೂ ತಿಳಿದಿರದ ಗೌಡರು ಗುಡುಗಿದರು, "ಅಂ,... ಏನಂದೆ?" ದೊಡ್ಡ ಗೌಡರಿಗೂ ಹಣ ಸಾಕಾಗಲಿಲ್ಲವೇನೋ ಅಂದುಕೊಂಡ ಚೆನ್ನಯ್ಯ, "ಅಲ್ಲ ಗೌಡ್ರೆ, ಇನ್ನೆಷ್ಟು ಕೊಡಲಿ

ಕ್ಕಾದೀತು, ಇನ್ನೇನು ಎಂಟ್ಹತ್ತು ವರ್ಷಗಳಲ್ಲಿ ಬಿದ್ಹೋಗತ್ತೆ ಈ ಮರ'' ಎಂದಾಗ ಗೌಡರ ಸಿಟ್ಟು ನೆತ್ತಿಗೇರಿತ್ತು. ''ಏನಂದೆ, ಏನ್ಸೋ ಅಂದೆ, ಇನ್ನು ಎಂಟ್ಹತ್ತು ವರ್ಷ ಏನು, ಈಗ್ಲೆ, ಈ ಕ್ಷಣದಲ್ಲೇ ಬಿದ್ಹೋದ್ರೂ, ಅದು ನನ್ನ ಮರ, ಅದ್ರ ಒಂದ್ ಗರೀನೂ ನಾನ್ ಯಾವೋನಿಗೂ ಕೊಡಲ್ಲ, ಓ...ಹೊ...ಹೊಹೊ, ಭಾರೀ ದೊಡ್ ಜನ ಇಂವ, ನನ್ನ ತೆಂಗಿನ ಮರಕ್ಕೆ ರೇಟ್ ಹೇಳಕ್ ಬಂದನೆ.'' ಇವರ ಮಾತು ಮುಗಿಯುವ ಮೊದಲೇ ಇವರ ಹಿರಿಯ ಮಗ, ''ಏಯ್ ನೀನ್ ಸುಮ್ನಿರು ಚಿನ್ನಯ್ಯ, ಅವ್ರಿಗೆ ಅರವತ್ತಕ್ಕೆ ಅರಲು ಮರಲು ಅಂತಾರಲ್ಲ ಹಂಗೆ, ಏನ್ ಮಾತಾಡ್ಬೇಕು ಅಂತ ಗೊತ್ತಾಗೋಲ್ಲ'' ಅಂದಿದ್ದ. ತಮ್ಮನ್ನು, ತಮ್ಮೆದುರಿಗೇ ಮಾತು ಬಾರದವನೆಂದು ಹಳಿದ ಮಗನ ವಾಚಾಳಿತನಕ್ಕೆ ಬೆಕ್ಕಸಬೆರಗಾದ ಗೌಡರಿಗೆ, ಚಿನ್ನಯ್ಯ 'ಮುಳುಗಡೆ'ಯ ವಿಷಯವನ್ನು ಚಾಚೂ ತಪ್ಪದೆ ವಿವರಿಸಿದಾಗ, ಬರಸಿಡಿಲಿನಂತೆ ಬಂದಪ್ಪಳಿಸಿದ ಕಹಿ ಸತ್ಯವನ್ನು ನುಂಗಲಾರದೆ, ಅಧಿಕಾರವರ್ಗದವರಿಗೆ ಉಗಿದು, ನಂಜುಕಾರಿಗೊಂಡರು.

ಹೆಂಡಕ್ಕೆ ಬೇರು ಹಾಕಿದ್ದೀಯಾ ಎಂದು ಗೌಡರು ಹೆಂಡತಿಗೆ ಗದರುತ್ತಿದ್ದರಷ್ಟೆ. ಆದರೆ ಮಗ ಹೆಂಡದಂಗಡಿಯ ದಾಸನಾಗಿದ್ದುದು ಗೌಡರ ಅರಿವಿಗೆ ಬಂದುದು, ಸಾಲಗಾರರ ದಂಡು ಮನೆಬಾಗಿಲಿಗೆ ಬಂದಾಗ ಮಾತ್ರ. ಪಡೆದ ಸಾಲ ಕೊಡಲು ಬರುತ್ತಿದ್ದ ಜನರೀಗ, ಕೊಟ್ಟ ಸಾಲ ಪಡೆಯಲು ಬರುತ್ತಿದ್ದುದು ಗೌಡರ ಪಾಲಿಗೆ ಭೀಕರ ದುರಂತ. ಅವರ ಸ್ವಾಭಿಮಾನಕ್ಕೆ ಬಿದ್ದ ಕೊಡಲಿಯೇಟು. ಯಾರಿಗೂ ತಗ್ಗದೆ, ಬಗ್ಗದೆ, ಯಾವ ಎಗ್ಗಿಲ್ಲದೆ ನಡೆದುಬಂದ ಗೌಡರ ಜೀವನ ಹೀಗೆ ಮುಗ್ಗರಿಸಬಹುದೆಂದು ಗೌಡರಿರಲಿ, ಯಾರೂ ಊಹಿಸಿರಲಿಲ್ಲ. ಬದುಕೇ ಬೇಡವೆನಿಸಿದ್ದ ಗೌಡರಿಗೆ, ತಮ್ಮ ಜೀವದಂತಿಟ್ಟುಕೊಂಡಿದ್ದ ಮನೆಯ ವಸ್ತುಗಳು ಏನೂ ಅಲ್ಲವಾದವುಗಳಾದವು. ಗತ್ಯಂತರವಿಲ್ಲದೆ ಅವು ಕಂಡ-ಕಂಡವರ ಮನೆಯ ಅಟ್ಟವೇರಿ ಕುಳಿತವು. ಮುಳುಗಡೆ ಹಣ ಸಕಾಲಕ್ಕೆ ಬರಬಹುದೆಂಬ ಗೌಡರ ಮಗನ ನಿರೀಕ್ಷೆ ಹುಸಿಯಾಗಿತ್ತು. ಸಾಲವೆಲ್ಲೂ ಗಿಟ್ಟದಾದಾಗ ಟಿಕ್-ಟ್ವೆಂಟಿಯ ಮೊರೆಹೋದ. ನಿರ್ಲಿಪ್ತರಾಗಿ ಅಂತ್ಯಕ್ರಿಯೆ ಮುಗಿಸಿದರು ಗೌಡರು. ಹನಿಗಣ್ಣೀರನ್ನೂ ಜಾರಿಸಲಿಲ್ಲ.

...ನಂತರದ ದಿನಗಳು ಗೌಡರ ಗಣನೆಗೆ ದೊರಕಲೇ ಇಲ್ಲ. ದಿನಕ್ಕೊಬ್ಬರ ಸಾಲ ತೀರಿಸುವುದರಲ್ಲಿಯೇ ಸಾಕುಸಾಕಾಗಿ ಹೋಗುತ್ತಿತ್ತು. ಬದುಕು ಬೇಡವೆನಿಸಿದ್ದರೂ ಬಿಡಿಸಿಕೊಳ್ಳಲಾರದ ಸ್ಥಿತಿ. ಊರಗೌಡನೆಂಬ ಹೆಗ್ಗಳಿಕೆ. ಕೈಲಾಗದೆ ಸತ್ತನೆಂದು ಹೇಳಿಸಿಕೊಳ್ಳಲು ಮನವೊಪ್ಪದು. ನಿಶ್ಚಯಗಳ ನಡುವೆಯೇ ದಿನಗಳುರುಳಿ ಹೋದವು. ಬದುಕಬೇಕು, ಹೇಗಾದರೂ ಸರಿಯೇ ಬದುಕಬೇಕೆಂದು ನಿರ್ಧರಿಸಿದರು. ದಿನಕ್ಕೊಬ್ಬರು ಬಂದು, ಊರುಬಿಡಲು ಅಪ್ಪಣೆ ಪಡೆವ ಶಾಸ್ತ್ರ ಮಾಡಿ ಹೋಗುತ್ತಿದ್ದರು. ಎಲ್ಲರಂತೆ ಪಾರುವೂ ಬಂದು ನಮಸ್ಕರಿಸಿದಳು. ಮಗನ ಜೊತೆ ಶಿವಮೊಗ್ಗೆಯಲ್ಲಿ ಇರುವುದಾಗಿ ಹೇಳಿದಳು. ಅವಳ ಮುಖದಲ್ಲಿ ಅದಾವ ಭಾವವಿತ್ತೋ, ಗೌಡರಿಗಂತೂ ಅವಳು ತಮ್ಮನ್ನು ಹೀಯಾಳಿಸುತ್ತಿರುವ ನಗೆ ನಗುತ್ತಿರುವಂತೆ ಕಂಡಳು. ನೆನಪ ಮರುಕಳಿಸಲೆಂಬಂತೆ ತೆಂಗಿನ ಮರದಿಂದ ಕಾಯೊಂದು ಉದುರಿಬಿದ್ದಾಗ, ಯಾಕೋ ಏನೋ, ಜೋರಾಗಿ ನಕ್ಕುಬಿಟ್ಟದ್ದಳು ಪಾರು. ತಮ್ಮ ಉಡಿಯಿಂದ ಜಾರಿ ಹೋಗುತ್ತಿರುವ ನೆಮ್ಮದಿಯ ನಗು, ಅವಳ ಒಡಲು ಸೇರುತ್ತಿದೆಯೇನೋ ಎಂದುಕೊಂಡರು. ಪಾರು ಬಂದ ದಾರಿಯಲ್ಲಿಯೇ ಸರಿದುಹೋದಳು. ಗೌಡರ ಪಾಲಿನ ಕರಾಳ ದಿನಗಳ ಕೈ ಬಲವಾಗತೊಡಗಿತು. ಮಕ್ಕಳಂತೆ ಸಾಕಿದ್ದ ಹಡ್ಡೆಯಲ್ಲಿನ ಜಾತಿಯ ಮರಗಳು ನೆಲಕ್ಕುರುಳುತ್ತಿದ್ದವು. ನಿಂತಂತೆ ಕಾಣುತ್ತಿದ್ದ

ನೀರು, ಹಂತಹಂತವಾಗಿ ನೆಲವನ್ನು ಕಬಳಿಸತೊಡಗಿತು. ನೀರ ನೋಡಲು ಜನ ಸಾಲುಸಾಲಾಗಿ ಬರುತ್ತಿದ್ದರು. ತಮ್ಮ ಕರುಳನ್ನೇ ಸಿಗಿಯುವಂತಿದ್ದ ದೃಶ್ಯವನ್ನು ಗೌಡರು ನೋಡ ಬಯಸಲಿಲ್ಲ. ಹಿರಿಯ ಸೊಸೆ ನ್ಯಾಯಾಲಯದಲ್ಲಿ ದಾವೆ ಹೂಡಿದ್ದರಿಂದ ಮುಳುಗಡೆ ಹಣ ಕೈ ಸೇರಲಿಲ್ಲ. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಹುಟ್ಟಿಸಿದ ಶಿವ ಹುಲ್ಲು ಮೇಯಿಸಲಾರ ಎಂಬಂತೆ, ಎರಡನೆಯ ಮಗನಿಗೆ ಅದೆಂಥದೋ 'ಎಂ.ಪಿ.ಸಿ.' ಕೆಲಸ ಎಂದು ಸಿಕ್ಕಿತು. ವಾಸಿಸಲು ಮನೆಯನ್ನೂ ಕೊಟ್ಟರು. ತಮ್ಮ ಬಚ್ಚಲು ಮನೆಗೂ ಸರಿಸಮವಲ್ಲದ ಮನೆಯಲ್ಲಿ ಗೌಡರು ದಿನ ದೂಡಬೇಕಾಗಿ ಬಂತು. ಮಕ್ಕಳೆಲ್ಲರೂ ಏನೂ ನಡೆದಿಲ್ಲವೇನೋ ಎಂಬಷ್ಟು ಸಲೀಸಾಗಿ ಹೊಸ ಜೀವನಕ್ಕೆ ಹೊಂದಿಕೊಂಡರು. ಆದರೆ ಗೌಡರಿಗದು ಇಂದಿಗೂ ಸಾಧ್ಯವಾಗೇ ಇಲ್ಲ. ಆ ಉಸಿರುಕಟ್ಟಿಸುವ ವಾತಾವರಣದಿಂದ ಕೊಂಚ ಮುಕ್ತವಾಗಿರಲು ಮೈಲು ದೂರ ದಾರಿ ಸವೆಸಿ, ಈ ದಿಬ್ಬಕ್ಕೆ ಬರುತ್ತಾರೆ. ತಾಸುಗಟ್ಟಲೆ ಕೂರುತ್ತಾರೆ. ನೀರ ನಡುವೆ ತಮ್ಮ ಮನೆಯ ಕುರುಹುಗಳನ್ನು ಹುಡುಕುತ್ತಾರೆ. ನೆನಪಿಗಾದರೂ ಉಳಿದಿರುವ ಈ ತೆಂಗಿನ ಮರಕ್ಕೆ ವಂದಿಸುತ್ತಾರೆ.

ಗೌಡರು ಕತ್ತೆತ್ತಿದಾಗ ಸುತ್ತಲೂ ಕತ್ತಲಾವರಿಸಿತ್ತು. ಗಡಬಡಿಸಿ ಎದ್ದರು. ಮನೆ ಸೇರಬೇಕಲ್ಲ. ಈಗೀಗ ಕಣ್ಣು ಬೇರೆ ಮಂಜಾಗಿದೆ. ಬಿರಬಿರನೆ ಹೆಜ್ಜೆ ಹಾಕಿದರು. ಮನೆಯೊಳಗೆ ದಾಟುವ ಮೊದಲೇ ಮಗನಿಂದ ಬಂತು ಪುಕಾರು. "ಅಪ್ಪ, ನೀನು ಇನ್ಮೇಲ ಹೀಂಗೆ ಕತ್ಲಲ್ಲಿ ಒಬ್ನೆ ಎಲ್ಲಿಗೂ ಹೋಗ್ಬೇಡ. ಎಲ್ಲಾದ್ರೂ ಬಿದ್ದು ಕೈಕಾಲು ಮುರ್ಕಂಡ್ರೆ, ನೋಡ್ಕೊಳ್ಳೋರ್‍ಯಾರು." ವಾಹ್ ಮಗನೆ, ಎಂದುಕೊಂಡರು ಮನದಲ್ಲೆ. ದುಡಿದು ಹಾಕುವ ಗತ್ತು. ಮಲಗಿಕೊಂಡರೆ ನೋಡಿಕೊಳ್ಳಲೂ ಜನರಿಲ್ಲದ ಸ್ಥಿತಿ ಅವರ ದಾಗಿತ್ತು. ಯಾರ ಮನೆಯಿಂದಲೋ ಹಾಡು ಕೇಳಿ ಬರುತ್ತಿತ್ತು. 'ಯಾಕೆ ಬಡದಾಡ್ತೀ ಜೀವ ಮಾಯಾ ಮೆಚ್ಚೀ... ಸಂಸಾರ ಮೆಚ್ಚೀ...' ಗೌಡರಿಗೇಕೋ ಊಟ ಮಾಡಬೇಕೆನಿಸಲಿಲ್ಲ. ಕರೆದು ಬಡಿಸುವುದೂ ಕಡಿಮೆಯೇ. ಎಷ್ಟಾದರೂ ದುಡಿಯಲಾರದ ದೇಹ. ಬಳಸಿ ಬಿಟ್ಟ ಯಂತ್ರ. ಹಾಸಿಗೆ ಬಿಡಿಸಿ ಮಗ್ಗುಲಾದರು. ಟಿವಿಯಲ್ಲಿ ಏನನ್ನೋ ನೋಡಿ ಮಕ್ಕಳು ಖುಷಿಯಿಂದ ಹೇಳಿಕೊಳ್ಳುತ್ತಿದ್ದರು. "ಓ ಅದು ಕಸ ಗುಡಿಸೋ ಮೆಶೀನ್ನು, ಅದ್ಕೂ ಕರೆಂಟು ಬೇಕು." "ಏನೀ ಮುಂಡೇಮಕ್ಳಿಗೆ ಮೈ ಮುರ್‍ದು ಕೆಲ್ಸ ಮಾಡಕ್ಕಾಗಲ್ಲ, ಯಾವ್ದಕ್ ನೋಡುದ್ರೂ ಮೆಶೀನ್ನು, ಕರೆಂಟು.



ನಾಳೆ ಉಣ್ಣಕ್ಕೂ, ಹೇಲಕ್ಕೂ ಮೆಶೀನ್ ಬತ್ತದೋ ಏನೋ... ನಮ್ಮನ್ನ ಬೀದಿ ಪಾಲ್ ಮಾಡಿ ಇವು ಮಜ ಮಾಡದು." ಮಲಗಿದಲ್ಲಿಂದಲೇ ಬಂದ ಗೌಡರ ಗೊಣಗಾಟಕ್ಕೆ ಮಕ್ಕಳು ನಕ್ಕರು. ಗೌಡರು ನಿಡುಸುಯ್ದರು. ಮನದ ಚಿಂತೆ ಬದಲಿಸಲೆತ್ನಿಸಿ, ಅದಾಗದೆ, ಮಗ್ಗಲು ಬದಲಾಯಿಸಿ, ನಿದ್ದೆಗಾಗಿ ತಡಕಾಡತೊಡಗಿದರು.

...ಬೆಳಗಿನ ಜಾವ ಕುಡಿಬಿಸಿಲಿಗೆ ಮೈಯಾನಿಸಿ ಕುಳಿತಿದ್ದ ಗೌಡರಿಗೆ ಯಾರೋ ಕೂಗಿ ಕರೆದಂತಾಯಿತು. ಕಿವಿ ನಿಮಿರಿಸಿ ಕೇಳಿದರು. ಯಾಕೆಂದರೆ ಇಂತಹ ಕೂಗನ್ನು



ಕೇಳದೆ ವರ್ಷಗಳೇ ಉರುಳಿದ್ದವು. ''ದೊಡ್ಡ ಗೌಡ್ರ'', ಕರೆಯುವಾತ ಹತ್ತಿರಕ್ಕೇ ಬಂದಿದ್ದ. ''ಅರೆ, ಸಿದ್ದ'', ಆನಂದಾತಿರೇಕದಿಂದ ಆತನ ಕೈಹಿಡಿದೇ ಮನೆಯೊಳಗೆ ಕರೆತಂದರು. ಸಿದ್ದನಿಗೆ ಇರಿಸು ಮುರಿಸು. ಕೊಸರಿ ಕೊಸರಿ ಕೈ ಬಿಡಿಸಿಕೊಂಡ. ಗೌಡರನ್ನು ಅಡಿಯಿಂದ ಮುಡಿಯವರೆಗೆ ನೋಡಿದ. ಗರಿಗರಿ ಇಸ್ತ್ರಿಯೊಂದಿಗೆ, ಮಿರಮಿರ ಮಿನುಗುತ್ತಿದ್ದ ಉಡುಗೆಯ ಜಾಗದಲ್ಲಿ ಮಾಸಲು ಬಣ್ಣದ ಬಟ್ಟೆಗಳಿವೆ. ಅವೂ ಮುದುರು, ಮುದುರು. ಮುಖಕ್ಷೌರ ಕಾಣದೆ ದಿನಗಳೆಷ್ಟೋ ಉರುಳಿವೆ. ಗಂಟೆಗಟ್ಟಲೆ ಕುಳಿತು ಮಾಟ ಮಾಡಿಸಿಕೊಂಡು ಬೀಗುತ್ತಿದ್ದ ಮೀಸೆಯೀಗ, ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿದೆ. ಸಿದ್ದನಿಗೇ ನನಿಸಿತೋ, ದೊಪ್ಪನೆ ಗೌಡರ ಕಾಲಿಗೆರಗಿ, ಗಳಗಳನೆ ಅತ್ತುಬಿಟ್ಟ. ಗೌಡರೇ ಅವನನ್ನು ಸಮಾಧಾನಪಡಿಸಿದರು. ಗಾಜಿನ ಲೋಟದಲ್ಲಿ ಗೌಡರ ಮಗಳು ಪಾನಕವನ್ನು ತಂದಿತ್ತಾಗ, ಅದು ಸಿದ್ದನ ಗಂಟಲಲ್ಲಿಳಿಯಲಿಲ್ಲ. ಅವನಿಗೆ ದೊನ್ನೆ ತುಂಬ ಕುಡಿಯುತ್ತಿದ್ದ ಮಜ್ಜಿಗೆಯ ಮುಂದೆ ಇದು ಏನೂ ಅಲ್ಲ. ಸಿದ್ದನ ಮನದಿಂಗಿತವನ್ನು ಅರಿತವರಂತೆ ಗೌಡರು, ''ಮಜ್ಗೆ ಕುಡೀತಿದ್ಯೋ ಏನೋ ಸಿದ್ದ, ಆದ್ರೆ ಮಜ್ಗೆ ಚೆನ್ನಾಗಿಲ್ಲ. ಅದೆಂಥದೋ ಕೊಟ್ಟೆಲ್ ಹಾಲು ಕೊಡ್ತಾರೆ, ಒಂಥರಾ ಸಿನುಗು ವಾಸಾಯ'' ಅಂದರು. ಗೌಡರೆಷ್ಟು ಹೇಳಿದರೂ ಕೇಳದೆ ನೆಲದ ಮೇಲೆಯೇ ಕುಳಿತು ಮಾತನಾಡತೊಡಗಿದ. ಗೌಡರು ಬಾಯೊಂದು ಸಾಕಾಗದೇನೋ ಎಂಬಷ್ಟು ಮಾತಾಡಿದರು. ಸಿದ್ದನ ಮಗನಿಗೂ ಅದೆಂಥದೋ ಕೆಲಸ ಸಿಕ್ಕಿ ಇದೇ ಊರಿಗೆ ಬಂದುದನ್ನು ಕೇಳಿ ಹರ್ಷಗೊಂಡರು. ಹೊಳೆಯಾಚೆ, ಈರೇಗೌಡರ ಮಗ ಬೆಂಗಳೂರಿಗೆ ಹೋಗಿ, ಕೆಲಸ ಮಾಡುತ್ತಲೇ ಓದಿ ಬಹಳ ದೊಡ್ಡ ಮನುಷ್ಯನಾದುದನ್ನು ಕೇಳಿ ಮೆಚ್ಚಿಕೊಂಡರು. ಅವನು ಮೊದಲು ಓದಿಗಾಗಿ ಹಣ ಪಡೆಯುತ್ತಿದ್ದುದು ಇವರ ಬಳಿಯೇ. ಗುಡ್ಡದ ಮನೆ ತಮ್ಮಯ್ಯನ ಮಗ, ಕುಡಿತ ಕಲಿತು, ಉಡಾಳನಾಗಿ, ಅಪ್ಪ-ಅಮ್ಮನನ್ನು ಅದಾವುದೋ ಆಶ್ರಮಕ್ಕೆ ಸೇರಿಸಿ, ತಾನೂ ಊರೂರು ಅಲೆಯುತ್ತಿರುವ ವಿಷಯವನ್ನು ಕೇಳಿ ನೊಂದುಕೊಂಡರು. ತಮ್ಮದೇ ಎಷ್ಟೋ ವಾಸಿ ಅಂದುಕೊಂಡರು. ಮಾತಿನ ಮಧ್ಯೆ ಹೊತ್ತು ನೆತ್ತಿಗೇರಿದುದು ಗೊತ್ತಾಗಲೇ ಇಲ್ಲ. ಹೊರಡಲನುವಾದ ತನಗೆ, ''ಇರ ಸಿದ್ದ, ಆದ ಅನ್ನ ಉಂಡ್ಕು ಹೋಬೋದು'' ಎಂದರು. ''ಬೇಡ ಗೌಡ್ರೆ'' ಎಂದ ಸಿದ್ದನನ್ನು ಮತ್ತೆ ಒತ್ತಾಯಿಸಲಿಲ್ಲ ಗೌಡರು. ಅಂಗಡಿಯ ಅಕ್ಕಿ, ಒಂದಗುಳೂ ಮಿಕ್ಕಲಾರದ ಅಳತೆಯ ಅಡುಗೆ. ಗೌಡರು ಸಿದ್ದನಿಗೆ ಹೊರಡಲು ಅನುಮತಿಯಿತ್ತರು. ಸಿದ್ದ ಸವಿನಯವಾಗಿ ಗೌಡರನ್ನೂ, ಅವರ ಕುಟುಂಬವನ್ನೂ ತನ್ನ ಮನೆಗೆ ಆಹ್ವಾನಿಸಿ ಅಲ್ಲಿಂದ ಹೊರಟ.

ಗೌಡರು ಸಿದ್ದನನ್ನು ಕಳುಹಿಸಿ ಒಳಬರುವಾಗ ಮಕ್ಕಳೆಲ್ಲಾ ಊಟಕ್ಕೆ ಕುಳಿತಾಗಿತ್ತು. ತಮ್ಮ ಪಾಲಿನ ಅನ್ನ ತಟ್ಟೆಯಲ್ಲಿ ಕುಳಿತು ಹಬೆ ಕಾರುತ್ತಿತ್ತು. ಗೌಡರಿಗೇಕೋ ಇಂದು ಆ ಹಬೆ ತಮ್ಮನ್ನೇ ಸುಡುತ್ತಿರುವ ಹೊಗೆಯಾಗಿ ಕಂಡಿತು. ತಟ್ಟೆ ಅತ್ತ ತಳ್ಳಿ ಎದ್ದವರೇ, ತಮ್ಮ ಜೋಡು ಮೆಟ್ಟಿ, ಆ ಸುಡುವ ಬಿಸಿಲಿನಲ್ಲಿ ಹೆಜ್ಜೆ ಹಾಕತೊಡಗಿದರು. ಸುಳಿದು ಬಿಟ್ಟ ಕೋಣನಂತೆ ಅದೇ ದಿಬ್ಬದ ಬಳಿ ಬಂದು ಕುಳಿತರು. ದಿಬ್ಬವನ್ನು ತಬ್ಬಿ ಹಿಡಿದವರೇ

ಬಿಕ್ಕಿ ಬಿಕ್ಕಿ ಅಳತೊಡಗಿದರು. ಅವರ ಅಳುವಿನ ಕಾರಣ ಅವರಿಗೇ ತಿಳಿದಿರಲಿಲ್ಲ. ಸಿದ್ದನಿಗೆ ಅನ್ನವನ್ನೂ, ಮಜ್ಜಿಗೆಯನ್ನೂ ನೀಡಲಾರದ ಸ್ಥಿತಿಗೆ ಅಳು ಬಂತೋ, ಮಡದಿ ಮಕ್ಕಳ ತಿರಸ್ಕಾರಭರಿತ ವರ್ತನೆಯನ್ನು ನೆನೆದು ಅಳು ಬಂತೋ, ಒಂದೊಮ್ಮೆ ತಾನು ಬಯಸಿದ್ದ ಪಾರು ತನ್ನೆದುರಿಗೇ ತನಗಿಂತ ಮೇಲೇರಿದುದನ್ನು ನೆನೆದು ಅಳು ಬಂತೋ ತಿಳಿಯದು. ಅಂತೂ ಅತ್ತರು. ದನಿಯೆತ್ತರಿಸಿ ಅತ್ತರು. ಒಣಹುಲ್ಲಿಗೆ ಮುಖ ಉಜ್ಜಿ ಅತ್ತರು. ರಚ್ಚೆ ಹಿಡಿದ ಮಗುವಿನಂತೆ ಅತ್ತರು. ಕಣ್ಣ ನೀರು ಬತ್ತುವ ತನಕ ಅತ್ತರು. ದಣಿದ ಮನ ನಿದ್ದೆಯ ಮಡಿಲಿಗೆ ಜಾರುವ ತನಕ ಅಳುತ್ತಲೇ ಇದ್ದರು.

ದನ ಕಾಯುವ ತಿಮ್ಮ ಎಂದಿನಂತೆ ಅಂದೂ ಅಲ್ಲಿಗೆ ಬಂದ. ತಿಮ್ಮ ಒಂದು ಹೊತ್ತು ಊಟವನ್ನಾದರೂ ಬಿಟ್ಟಾನು ಆದರೆ, ದಿನವೂ ಸಂಜೆ ಈ ದಿಬ್ಬದ ಅಜ್ಜನನ್ನು ಮಾತಾಡಿಸುವುದನ್ನು ಮಾತ್ರ ಮರೆಯುತ್ತಿರಲಿಲ್ಲ. ನೀರನ್ನೇ ನೋಡುತ್ತ ಕುಳಿತಿರುತ್ತಿದ್ದ ಅಜ್ಜ, ತಿಮ್ಮ ಬಂದೊಡನೆ ಹಿಡಿ ಮಂಡಕ್ಕಿ ಕಾಳು ಕೊಟ್ಟು ಮಾತಿಗೆ ತೊಡಗು ತ್ತಿದ್ದರು. ಆದರೆ ಇಂದು ಹತ್ತಿರ ಬಂದರೂ ಮಾತೆತ್ತದಿರುವ ಅಜ್ಜನನ್ನು ಕಂಡು ಅಚ್ಚರಿಗೊಂಡ ಹುಡುಗ. ತನ್ನ ಪ್ರೀತಿಯ ಗೊಂಬೆಯನ್ನು ತಬ್ಬಿ ಹಿಡಿದು ಮಲಗುವ ಸಾಹುಕಾರರ ಮನೆ ಬೇಬಿಯಂತೆ, ದಿಬ್ಬವನ್ನು ತಬ್ಬಿ ಹಿಡಿದು ಮಲಗಿರುವ ದಿಬ್ಬದ ಅಜ್ಜನನ್ನು ಕಂಡು ನಿಬ್ಬೆರಗಾದ. ಅಜ್ಜನನ್ನು ಹಿಡಿದು ಅಲ್ಲಾಡಿಸಿದರೂ ಕಣ್ತೆರೆಯದಿದ್ದಾಗ ಗಾಬರಿಯಾಯಿತು. ಒಂದೇ ಉಸುರಿಗೆ ಓಡಿಹೋಗಿ ಸಾಹುಕಾರರಿಗೆ ಸುದ್ದಿ ಮುಟ್ಟಿಸಿದ. ವಿಷಯ ತಿಳಿದ ಎಲ್ಲರೂ ಬಂದರು. ಮಕ್ಕಳೂ ಕೂಡ. ಇದೀಗ ಎಲ್ಲರ ಮುಂದೆ ಪ್ರಶ್ನೆಯೊಂದು ಎದ್ದಿತ್ತು. 'ಶವ ಸಂಸ್ಕಾರಕ್ಕೆ ಜಾಗವೆಲ್ಲಿ?' ಮಕ್ಕಳು ಸೂಚಿಸಿದ ಒಂದೆರಡು ಜಾಗವನ್ನು ಅಕ್ಕ-ಪಕ್ಕದವರು ತಮ್ಮದೆಂದರು. ಬೇಕೇಬೇಕೆಂದರೆ ಅದಕ್ಕೆ ಬೆಲೆ ಕಟ್ಟಬೇಕೆಂದರು. ನೂರಾರು ಎಕರೆ ಪ್ರದೇಶಕ್ಕೆ ಅನಭಿಷಿಕ್ತ ದೊರೆಯಾಗಿದ್ದ 'ಊರಗೌಡ'ರ ಶವ ಸಂಸ್ಕಾರಕ್ಕೇ ಸ್ಥಳವಿಲ್ಲದ ದುಸ್ಥಿತಿ. ಸಿದ್ದನಿಗಿನ್ನು ತಡೆಯಲಾಗಲಿಲ್ಲ. ಎದ್ದವನೇ ಹೋಗಿ, ಇನ್ನೂ ಬೋರಲಾಗಿಯೇ ಬಿದ್ದಿದ್ದ ಗೌಡರ ದೇಹವನ್ನು ಎತ್ತಿ ತನ್ನ ಮಡಿಲಿನಲ್ಲಿಟ್ಟುಕೊಂಡು, ''ಯಾರು ಏನೇ ಹೇಳಿದ್ರೂ ಗೌಡರ ಸಂಸ್ಕಾರ ಈ ದಿಬ್ಬದ ಮೇಲೇ ಆಗೋದು. ಈ ಜಾಗಕ್ಕೆ ಎಷ್ಟೇ ಹಣ ಆದ್ರೂ ನಾನ್ ಕೊಡ್ತೀನಿ.''... ಸಿದ್ದನಿಗೆ ಮುಂದೆ ಮಾತನಾಡಲಾಗಲಿಲ್ಲ. ಗೌಡರ ದೇಹವನ್ನು ತಬ್ಬಿ ಹಿಡಿದು ಗೋಳೋ ಎಂದು ಅಳಲಾರಂಭಿಸಿದ.





...ನಂತರದ ದಿನಗಳು ಗೌಡರ ಗಣನೆಗೆ ಬಾರಕಲೇ ಇಲ್ಲ. ದಿನಕ್ಕೊಬ್ಬರ ಸಾಲ ತೀರಿಸುವುದರಲ್ಲಿಯೇ ಹಾಕು-ಸಾಕಾಗಿ ಹೋಗುತ್ತಿತ್ತು. ಬದುಕು ಬೇಡವೆನಿಸಿದ್ದರೂ ಬಿಡಿಸಿಕೊಳ್ಳಲಾರದ ಸ್ಥಿತಿ.

– ಮಮತಾ ಕೇರುಗೋಡು.







ಪು.ತಿ. ನರಸಿಂಹಾಚಾರ್

# ಕಾಲದೊಡನೆ ಅಶ್ವತ್ಥನ ಸ್ಪರ್ಧೆ

ನಾವು ಐವರು, ಶಾಸ್ತ್ರಿಗಳ ಮನೆಯ ಮುಂದಿನ ಉದ್ಯಾನವನದಲ್ಲಿ ಎಳೆಹಗಲಿನ ಬಿಸಿಲಿನ ಹಿತಕ್ಕೆ ಬೆನ್ನೊಡ್ಡಿ ಕುಳಿತಿದ್ದೆವು. ಗರಿಕೆಯ ಮೇಲಿನ ಹಿಮಮಣಿ ಇನ್ನೂ ತನ್ನ ಹೊಳಪನ್ನು ನೀಗಿಕೊಂಡಿರಲಿಲ್ಲ. ಅಗಸೆ ಗಿಡದ ನೀಲಿ ಹೂ ಆಕಾಶದ ನೀಲಕ್ಕೆ ಬಣ್ಣ ಹಚ್ಚುತ್ತಿತ್ತು. ಶಾಲು ಹೊದೆದು ಕುಳಿತಿದ್ದ ಶಾಸ್ತ್ರಿಗಳು ಕಾಫಿಯನ್ನು ಪಿಂಗಾಣಿಯ ಬಟ್ಟಲಿನಿಂದ ನಿಧಾನವಾಗಿ ಚುಂಬಿಸುತ್ತಾ ಆಸ್ವಾದಿಸುತ್ತಿದ್ದರು. ಶಾಮನೂ, ರಾಧಾಕೃಷ್ಣನೂ ಕಾಫಿಯನ್ನು ಕುಡಿದು ತಳದಲ್ಲಿದ್ದ ಗಸ್ಟನ್ನು ನಿರ್ವೇದದಿಂದ ಅವಲೋಕಿಸುತ್ತಿದ್ದರು. ನಾನೂ, ರಾಘವನೂ ಆಗತಾನೆ ಕುಡಿದು ಬಟ್ಟಲನ್ನು ಕೆಳಗಿಟ್ಟಿದ್ದೆವು. ಪ್ರಾತಃಕಾಲ ಬಹಳ ತಂಪಾಗಿತ್ತು. ಅಗಸೆ ಮರದ ರೆಂಬೆಗಳ ಮೂಲಕ ಆಕಾಶವು ನಮ್ಮನ್ನು ಬೋನಿನ ಸಲಾಕೆಗಳ ನಡುವೆ ಕ್ಷುದ್ರ ಮೃಗಗಳನ್ನು ನೋಡುವಂತೆ ನೋಡು ತ್ತಿತ್ತು. ನಾವೂ ಪ್ರತಿಯಾಗಿ ಅದನ್ನು ಅಷ್ಟೇ ಕುತೂಹಲದಿಂದ ದೃಷ್ಟಿಸುತ್ತಿದ್ದೆವು. ರಾಘವ ನೆಂದ, "ಈ ದಿನ ಬಹು ಆನಂದವಾಗಿದೆ. ನಾವು ಇದೇ ರೀತಿ ಇಷ್ಟು ಶಾಂತಿ ತುಷ್ಟಿಗಳಿಂದ ಇರುಳಿನ ವರೆಗೂ ಇದ್ದುಬಿಟ್ಟರೆ ಎಷ್ಟು ಚೆನ್ನಾಗಿರುತ್ತದೆ" ಎಂದು.

ಶಾಸ್ತ್ರಿಗಳು ಇದನ್ನು ಕೇಳಿ ನಗುತ್ತಾ, "ಹಾಗಾದರೆ ಕಾಲ ಪುರುಷನಿಗೆ ಈ ದಿನ ರಜ



ರಾಮಕೃಷ್ಣ

ಕೊಡಿಸಿ ಬಿಡಿ-ಆತ ಈವೊಂದು ದಿನವಾದರೂ ನಿದ್ದೆ ಹೋಗಲಿ'' ಎಂದರು.

''ಯಾರನ್ನು ಕೇಳಿ ಯಾರಿಗೆ ರಜ ಕೊಡಿಸೋಣ? ಇದಕ್ಕೆ ಮದ್ದು ನಾವೇ ನಿದ್ದೆ ಹೋಗುವುದು'' ಎಂದ ರಾಧಾಕೃಷ್ಣ. ನಾವೆಲ್ಲ ಅಂದು ಸಂಪೂರ್ಣವಾಗಿ ಎಚ್ಚೆತ್ತು ಹಗುರವಾಗಿದ್ದೆವು. ನಿದ್ದೆಯ ಮಾತು ಕೂಡ ನಮಗೆ ಅನಾರೋಗ್ಯದಂತೆ ಅನಿಷ್ಟವಾಗಿತ್ತು. ಅಂದು ನಾವು ಶಾಂತರು-ಶ್ರಾಂತರಲ್ಲ. ''ನೀನು ಜಡ-ಸೋಮಾರಿ, ನಿನ್ನ ಹಾಸಿಗೆಯನ್ನು ಇನ್ನೂ ಎತ್ತಿಯೇ ಇಲ್ಲ. ಬೇಕಾದರೆ ಮನೆಗೆ ಹೋಗಿ ಬಿದ್ದುಕೋ-ನಾವು ಕೂತೇ ಕಾಲವನ್ನು ಜಯಿಸುತ್ತೇವೆ'' ಎಂದೆ ನಾನು. ''ಕಾಲ ಅಜೇಯ, ಅವನನ್ನು ಜಯಿಸುವ ಮಾತೆಂತು'' ಎಂದ ರಾಧಾಕೃಷ್ಣ. ''ಆತ್ಮ ಅನಂತ, ನಾವು ಆತ್ಮವಂತರು, ಇಷ್ಟು ಸಾಕು-ನಮ್ಮನ್ನು ನೋಡಿ ಓಟ ಕೀಳುವುದಕ್ಕೆ'' ಎಂದೆ ನಾನು. ''ಬರಿ ಮಾತು, ಶಬ್ದ, ಸದ್ದು-ಆತ್ಮವೆಂದರೇನೋ, ಕಾಲವೆಂದರೇನೋ, ಒಬ್ಬೊಬ್ಬರಿಗೆ ಒಂದೊಂದು ತಿಳಿವಳಿಕೆ ಈ ಶಬ್ದಗಳಿಂದ'' ಎಂದ ಶಾಮ. ''ನಿಜವಾಗಿ ಕಾಲ ಎಂದರೇನು?'' ಎಂದರು ಶಾಸ್ತ್ರಿಗಳು. ಹೀಗೆ ಆ ಪ್ರಾತಃಕಾಲ ನಾವು ಕಾಲದ ಚರ್ಚೆಯಿಂದ ಕಾಲಯಾಪನೆಗೆ ತೊಡಗಿದ್ದೆವು.

''ಶಿವನೆದೆಯ ಮೇಲೆ ಕಾಳಿ ಕುಣಿಯುತ್ತಾಳೆ. ಈ ತುಳಿತದಿಂದ ಕಾಲ ಹುಟ್ಟಿ ಹರಿಯುತ್ತದೆ.''



ರಾಘವ ಈ ರೀತಿ ಹೇಳಲು, ''ಶಿವ, ಕಾಳಿ ಇಬ್ಬರೂ ಇದ್ದರು ಎಂದಾಗಲೇ ಕಾಲವಿರಬೇಕಾಯಿತಲ್ಲ, ಕುಣಿತದಲ್ಲಿ ಕಾಲ ಹೇಗೆ ಹುಟ್ಟುತ್ತದೆ'' ಎಂದು ಶಾಮ ಟೀಕಿಸಿದ. ''ಹಾಗಲ್ಲ, ಹಾಗಲ್ಲ. ಆಕೆ ಕುಣಿಯುವಾಗ ಹುಟ್ಟುತ್ತದೆ, ನಿಂತಾಗ ಅಳಿಯುತ್ತದೆ. ಸುಮ್ಮನಿದ್ದಾಗ ಯಾವುದೂ ಇಲ್ಲ. ಕಾಲ ಎನ್ನುವುದು ಶಿವ-ಶಕ್ತಿ ಜನ್ಯ ಶಕ್ತಿ'' ಎಂದು ಮರು ನುಡಿದ ರಾಘವ. ''ಓಹೋ, ಇವ ವಿಘ್ನರಾಜನಿಗೆ ಅಣ್ಣನೋ, ತಮ್ಮನೋ'' ಎಂದು

ಕಿರುನಗೆ ಬೀರಿದರು ಶಾಸ್ತ್ರಿಗಳು. "ಆತ ಅಣ್ಣ-ತಮ್ಮನನ್ನು ಒಲಿಸಿಕೊಳ್ಳದಿದ್ದರೆ ಅಣ್ಣ ನಡೆಯುವಂತೆಯೂ ಇಲ್ಲ" ಎಂದ ಶಾಮ. "ವಿಷ್ಣುವಿನ ಪಾದದಿಂದ ಗಂಗೆ ಹರಿದಂತೆ, ಕಾಳಿಯ ಕುಣಿತದಿಂದ ಮೃದುವಾದ ಶಿವ ನೆದೆಯಿಂದ ಕಾಲ ಹುಟ್ಟಿದರೆ, ದೇಶವೋ?" ಎಂದ ರಾಧಾಕೃಷ್ಣ. "ಆ ಕಲ್ಪನೆಯೇ ತಪ್ಪು, ಇದು ಸರಿ-ಅರ್ಧನಾರೀಶ್ವರ ಮೊದಲು ಡಮರು ಬಾರಿಸಿದ. ಒಂದುಗೂಡಿ ಗಾಢವಾಗಿದ್ದ ದಿಕ್ಕು ಗಳೆಲ್ಲಾ ಆ ಶಬ್ದದ ನೂಕಿಗೆ ದೂರ ಸರಿದು, ತಂತಮ್ಮ ಜಾಗಗಳಲ್ಲಿ ನಿಂತವು. ಆ ಶಬ್ದದಿಂದಲೇ ಮೋದಗೊಂಡು ಆತ ಕಾಲಸೆತ್ತಿ ಕುಣಿದ. ಕಾಲಿನ ತಾಳವೇ ಕಾಲ ಎನ್ನಿಸಿಕೊಂಡಿತು. ಡಮರು ನಿಂತರೆ ದೇಶವಳಿಯುತ್ತದೆ. ಕುಣಿತ ನಿಂತರೆ ಕಾಲವಳಿಯುತ್ತದೆ. ಹೀಗೆ ಡಮರುವಿನ ನಾದವೂ, ಕಾಲಿನ ತಾನವೂ ಹೊಂದಿಕೊಂಡು ನಡೆಯಬೇಕು. ಒಂದಿಲ್ಲದೆ ಇನ್ನೊಂದಿಲ್ಲ. ದೇಶ, ಕಾಲ ಇವೆರಡೂ ಪರಸ್ಪರ ಹಣೆದುಕೊಂಡು ಗಂಟು ಗಂಟಾಗುವುದೇ ಸೃಷ್ಟಿ" ಎಂದ ಶಾಮ. "ದಿಟ, ದಿಟ, ಕಲ್ಪನೆ ಸುಂದರವಾಗಿದೆ. ಕೆಲವು ಗಂಟುಗಳು ಗೋಜಕೊಂಡಿವೆ, ಕೆಲವು ಸರಳ ವಾಗಿವೆ. ಗೋಜಕೊಂಡಿರುವುದು ಅಸುಂದರ-ಗಹನ; ಗೋಜಕೊಳ್ಳದಿರುವ ಗ್ರಂಥಿಯೇ ಸರಳ-ಸುಂದರ" ಎಂದರು ಶಾಸ್ತ್ರಿಗಳು.

ಶಾಸ್ತ್ರಿಗಳು ಒಂದು ತೆರದ ಮನುಷ್ಯ. ಯಾವಾಗಲೂ ತರ್ಕ ನಮ್ಮದು, ಸಿದ್ಧಾಂತ ಅವರದು. ಆದರೆ ಅವರಿಗೆ ಯಾವ ಸಿದ್ಧಾಂತ ದಲ್ಲೂ ನಂಬಿಕೆಯಿಲ್ಲ. ಲೋಕ ಉಂಟೇ, ಉಂಟು; ಇಲ್ಲವೇ, ಇಲ್ಲ. ಸರ್ಪವೋ, ರಜ್ಜುವೋ ಯಾವುದು ದಿಟ, ಎರಡೂ ದಿಟ. ಏಕೆಂದರೆ ಎರಡೂ ಅನಿತ್ಯ. ಎಲ್ಲ ಸತ್ಯವೂ ಕಾಲ ದೇಶಕ್ಕಂಟಿಕೊಂಡಿದೆ. ಕಾಲ-ದೇಶವೋ, ಅರ್ಧ ನಾರೀಶ್ವರನ ನೃತ್ಯದಿಂದಲೂ, ಡಮರುವಿನ ಶಬ್ದದಿಂದಲೂ, ಹೊರಡುತ್ತಾ, ಹರಡುತ್ತಾ

ನವೋದಯ ಪಂಥದ ಉತ್ಕೃಷ್ಟ ಕವಿ ಪು ತಿ ನ ಕತೆಗಳನ್ನೂ ಬರೆದಿದ್ದರು. ಭಾಷೆಯ ಲಾಲಿತ್ಯ, ಸುಕುಮಾರತೆ, ಶಿಷ್ಟ ಸಂವೇದನೆಯ ಜೊತೆಗೆ ಉಜ್ವಲ ಚಿಂತನಶೀಲತೆ ಬೆಸೆದ ಅಪರೂಪದ ಬರೆವಣಿಗೆ ಅವರದು. ಅವರ ಕಥನಕವನ, ಗೀತನಾಟಕ, ಭಾವಗೀತೆಗಳು ಇಂದಿಗೂ ರಸಗ್ರಾಹಿ ವಿಮರ್ಶಕರಿಗೆ ಬತ್ತಲಾರದ ಆನಂದದ ಚಿಲುಮೆ. ಅಪರೂಪದ ವಸ್ತುವೊಂದನ್ನು ಕೈಗೆತ್ತಿಕೊಂಡ ಅವರ ಈ ವಿಶಿಷ್ಟ ಕತೆ ಅನೇಕ ಬಗೆಯಲ್ಲಿ ನವನವೀನ. 'ಕಾಲ'ದ ಪರಿಕಲ್ಪನೆ ಈ ಶತಮಾನದ ಭೌತಶಾಸ್ತ್ರಜ್ಞರನ್ನೂ ಚೋದ್ಯಗೊಳಿಸಿದೆ; ಅವರ ಚಿಂತನೆಗೆ ಸಾಣೆ ಹಿಡಿದಿದೆ. ಇಂತಹ ಅಮೂರ್ತ ವಸ್ತುವನ್ನು ಕತೆಯ ಚೌಕಟ್ಟಿಗೆ ಒಗ್ಗಿಸಿ, ಅನುಭವೀಕರಿಸಿರುವುದು ಪುತಿನರ ವೈಶಿಷ್ಟ್ಯ, ನಾಗರಿಕತೆ, ಭಾಷೆಯೊಂದಿಗೇ ತಳುಕು ಹಾಕಿಕೊಂಡ 'ಕಾಲ' ಸಹ ಮನುಷ್ಯನನ್ನು ಯಾವಾಗಲೂ ಕೆಣಕುವ ಸಂಗತಿ. ಈ ಕತೆಯ ಪಾತ್ರವೊಂದು ಹೇಳುವಂತೆ: ಮನುಷ್ಯ ಸುಖವಾಗಿರಲು ಎರಡೇ ದಾರಿ-ಒಂದು ಕಾಲವನ್ನು ಗೆಲ್ಲಬೇಕು, ಯುರೋಪಿನವರ ಹಾಗೆ, ಇಲ್ಲವೇ ಅದನ್ನು ಅಲಕ್ಷ್ಯದಲ್ಲಿಡಬೇಕು ನಮ್ಮ ಪೂರ್ವಿಕರ ಹಾಗೆ!



ಹೆಣೆದುಕೊಳ್ಳುತ್ತಿದೆ, ಬಿಚ್ಚಿಕೊಳ್ಳುತ್ತಿದೆ. ಸೃಷ್ಟಿಯೆಲ್ಲಾ ಈ ಹಾಸುಹೊಕ್ಕಿನ ಗಂಟುಗಂಟೇ. ಆದರೆ ಈ ಕುಣತಕ್ಕೆ ಮೂಲ, ಅರ್ಧ ಗಂಡು-ಅರ್ಧ ಹೆಣ್ಣು. ಕಾಲು ತಪ್ಪಿ ಲಯ ಕೆಡುವುದು ಸಹಜ. ಆಗ ಸೃಷ್ಟಿ ಗೋಜಿಕೊಳ್ಳುತ್ತದೆ-ಎಂದು ನಗುವುದಕ್ಕೆ ಮೊದಲಿಟ್ಟರು ಶಾಸ್ತ್ರಿಗಳು. ನಗುವು ಪ್ರಾಣಾಂತಕ. ಅದರ ಮುಂದೆ ಎಂಥವರ ಬುದ್ಧಿಯೂ ಕುಂಠಿತವಾಗುತ್ತದೆ. ಅದರಷ್ಟು ಸಾಂಕ್ರಾಮಿಕ ಮತ್ತೊಂದಿಲ್ಲ. ನಾವೆಲ್ಲರೂ ನಗುವುದಕ್ಕೆ ಪ್ರಾರಂಭಿಸಿದೆವು.

ಅಷ್ಟು ಹೊತ್ತಿಗೆ, ನಮ್ಮ ಅಶ್ವತ್ಥ ನಮ್ಮನ್ನು ಹುಡುಕಿಕೊಂಡು ಶಾಸ್ತ್ರಿಗಳ ಮನೆಗೆ ಬರುತ್ತಿದ್ದ. ಅವನದು ಷಹರು-ನಮ್ಮದು ಬರಿ ಊರು. ನಮ್ಮೂರಿಗೂ, ಅವನ ಪಟ್ಟಣಕ್ಕೂ ರೈಲಿನಲ್ಲಿ ಒಂದೂವರೆ ಗಂಟೆಯ ಕಾಲದ ಪ್ರಯಾಣ. ಅವನು ಬರುವ ನಿರೀಕ್ಷಣೆಯೇನೋ ನನಗಿತ್ತು, ಆದರೆ ದಿನ ಗೊತ್ತಿರಲಿಲ್ಲ. ಇದ್ದಕ್ಕಿದ್ದ ಹಾಗೆಯೇ ಅಶ್ವತ್ಥ ನಮ್ಮೂರಿಗೆ ಬರುವುದು ಪದ್ಧತಿ. ಅವನಿಗೆ ಅಭ್ಯಾಗತನಾಗುವುದಕ್ಕಿಂತ ಅತಿಥಿಯಾಗುವುದಕ್ಕೇ ಆಸೆ; ಅತಿಥಿ ಸ್ವತಂತ್ರ-ಅಭ್ಯಾಗತ ಪರತಂತ್ರ. ಆತ ಎಲ್ಲಿಂದಲೋ ತನ್ನೂರಿಗೆ ಹಿಂತಿರುಗುವಾಗ ದಾರಿಯಲ್ಲಿ ಇಲ್ಲಿ ತಂಗಿರಬೇಕು ಎಂದುಕೊಂಡ. ಆ ವೇಳೆಗೆ ಅವನೂರಿನಿಂದ ಬರುವ ಗಾಡಿ ಯಾವುದೂ ಇಲ್ಲ. ಆ ಊರಿಗೆ ಹೋಗುವ ಗಾಡಿಯ ವೇಳೆ ಇದು; ಆತ ಆಗತಾನೆ ರೈಲಿಳಿದು, ಗಂಟನ್ನು ನಮ್ಮ ಮನೆಯಲ್ಲಿ ಹಾಕಿ, ನಾವಿಲ್ಲಿರುವುದನ್ನು ತಿಳಿದು ಇಲ್ಲಿಗೇ ನೆಟ್ಟಗೆ ಬರುತ್ತಿದ್ದ. ಅಶ್ವತ್ಥ ಆರೋಗ್ಯಭಾಗ್ಯಶಾಲಿ. ಆದರೆ ಅದರ ಅರಿವು ಅವನಿಗಿಲ್ಲ. ನೋಡಿದವರಿಗೆ ತಾನು ಸುಖವಾಗಿಯೂ, ಸಂತೋಷವಾಗಿಯೂ ಇರುತ್ತೇನೆ ಎಂಬ ಭಾವನೆ ಬಂದರೆ, ಎಲ್ಲಿ ತನ್ನ ಆರೋಗ್ಯಕ್ಕೂ, ಸೌಖ್ಯಕ್ಕೂ ದೃಷ್ಟಿ ತಾಗಿದಂತಾಗುತ್ತದೆಯೋ ಎಂದು ಆತ ಭಾಗ್ಯಗಳನ್ನು ಒಂದು ತೆರದ ಸುಪ್ಪುಲಿನಿಂದ ಮರೆಸಲು ಪ್ರಯತ್ನಿಸುತ್ತಾನೆ-ಲೋಭಿ ತನ್ನೈಶ್ವರ್ಯ ಅಂತಃಸುಖವನ್ನು ಹೊರಗಿನ ಕಾರ್ಪಣ್ಯದಿಂದ ಮರೆಸಿಡುವಂತೆ. ಶಾಸ್ತ್ರಿಗಳು ಅದಕ್ಕೋಸ್ಕರ ಅಶ್ವತ್ಥನನ್ನು ಅವನ ಬೆನ್ನಹಿಂದೆ ಅಸ್ವಸ್ಥ ಎನ್ನುತ್ತಾರೆ. ಅಶ್ವತ್ಥನನ್ನು ನೋಡಿ ನಾನು ಆಶ್ಚರ್ಯವನ್ನು ತೋರಿ, ಸ್ವಾಗತ ಸ್ಮಿತವನ್ನು ಬೀರಿದೆ. ಮಿಕ್ಕವರು "ಹೋ ಬನ್ನಿ, ಬನ್ನಿ" ಎಂದು ಉದ್ಗಾರ ತೆಗೆದರು. ಅಶ್ವತ್ಥ ಬಂದು ಕುಳಿತುಕೊಂಡ ಮೇಲೆ ಶಾಸ್ತ್ರಿಗಳು, ನನ್ನ ಕಡೆಗೆ ಕಿರುನಗೆ ಬೀರುತ್ತಾ, "ಏನು ಅಶ್ವತ್ಥಯ್ಯನವರೇ, ಎಂದು ಬಂದಿದ್ದು, ಆರೋಗ್ಯವೇ" ಎಂದರು.

"ನೀವು ನೋಡುವ ಹಾಗೆ ಇದೊ ಈಗ ತಾನೆ ಬಂದೆ. ಏನೋ ಹೀಗಿದ್ದೀನಿ, ನೀವೆಲ್ಲ ಆರೋಗ್ಯ ತಾನೆ" ಎಂದ ಅಶ್ವತ್ಥ.

"ಎಲ್ಲಾ ಆರೋಗ್ಯ. ಒಳ್ಳೆಯ ಸಮಯಕ್ಕೆ ಬಂದಿರಿ. ಲೇ, ರುಕ್ಮಿಣಿ, ಅಶ್ವತ್ಥ ಮಾವನಿಗೆ ಒಂದು ಬಟ್ಟಲು ಕಾಫಿ ತಂದುಕೊಡು" ಎಂದರು ಶಾಸ್ತ್ರಿಗಳು.

"ಏನು ಅಂಥ ಒಳ್ಳೆಯ ಸಮಯ, ಅಷ್ಟು ಕಾಕು ಹಾಕುತ್ತಿದೀರಲ್ಲಾ, ಏನು ಸಮಾಚಾರ?" ಎಂದ ಅಶ್ವತ್ಥ.

"ನಾವು ಕಾಲ ಎಂದರೆ ಏನು ಎಂದು ತರ್ಕ ಮಾಡುತ್ತಿದ್ದೆವು. ಬಗೆ ಹರಿಯಲಿಲ್ಲ. ನಿಮ್ಮ ಸಲಹೆ ಬೇಕಾಗಿದೆ, ಈ ವಿಚಾರದಲ್ಲಿ. ಅದರ ರಹಸ್ಯ ನಿಮ್ಮಿಂದಲೇ ಬಯಲಾಗಬೇಕಾದದ್ದು" ಎಂದರು ಶಾಸ್ತ್ರಿಗಳು.

"ಒಳ್ಳೆಯ ವಿಚಾರ, ಒಳ್ಳೆಯ ಪ್ರಶ್ನೆ, ಅದರ ಮಾತು ಬಿಡಿ. ಅದೊಂದು ಹಾಳು! ನನಗೆ ಎಂಥ ಕಸರತ್ತು ಮಾಡಿಸಿತು, ನಿನ್ನೆಯ ದಿನ ಅದು. ಅದು ಅಲಾರಂ ಗಡಿಯಾರ, ಅದು ಮಿಲ್ಲಿನ ಕೊಂಯ್‌ಕೊಳವೆ, ಅದು ದುರ್ಲಭ ಜಟಕಾಗಾಡಿ, ಅದು ಬಸ್ಸು, ಅದು ರೈಲು, ಅದು ಆ ಹೆಣ್ಣು-ಆ ಗಂಡು; ನಿನ್ನೆಯ ದಿನ ಅದರ ಮೇಲೆ ನನ್ನ ಯುದ್ಧ, ರಾಮ-ರಾವಣರ ಯುದ್ಧಕ್ಕೂ ಮಿಗಿಲು. ನಾವು ಸುಖವಾಗಿರ

ಬೇಕಾಗಿದ್ದರೆ ಎರಡೇ ದಾರಿ ಅದನ್ನು ಗೆಲ್ಲಬೇಕು-ಯುರೋಪಿನವರ ಹಾಗೆ-ಇಲ್ಲ, ಅದನ್ನು ಅಲಕ್ಷ್ಯದಲ್ಲಿಡಬೇಕು-ನಮ್ಮ ಪೂರ್ವೀಕರ ಹಾಗೆ'' ಎಂದ ಅಶ್ವತ್ಥ.

''ಅದೆಂಥ ಯುದ್ಧವಪ್ಪ ಇದು, ಕಾಲದ ಮೇಲೆ ನಿಮ್ಮದು'' ಎಂದ ರಾಧಾಕೃಷ್ಣ. ರಾಧಾಕೃಷ್ಣನಿಗೂ, ಅಶ್ವತ್ಥನಿಗೂ ಒಂದು ತೆರದ ಮಮತೆ. ಅಶ್ವತ್ಥಯ್ಯ ಏನೆಂದರೂ ಸರಿಯೆ ಅದಕ್ಕೆ ರಾಧಾಕೃಷ್ಣ ನಗುತ್ತಾನೆ. ಒಬ್ಬನಿಂದ ಒಬ್ಬನಿಗೆ ಸ್ಫೂರ್ತಿ. ಇದು ಪರಸ್ಪರವಾಗಿ, ಇವರಿಬ್ಬರೂ ಸೇರಿದಾಗ ನಮ್ಮ ಕೂಟಕ್ಕೆ ಬಹಳ ಕಳೆ ಬರುತ್ತದೆ. ಮಾತೆಲ್ಲ ಅಶ್ವತ್ಥನದೇ. ಅವನಿರುವಾಗ ಬೇರೆಯವರು ಉಸಿರೆತ್ತುವುದಕ್ಕೂ ದಾರಿಯಿಲ್ಲ. ಮಾತಾಡುತ್ತಿರುವಾಗ ಆತನ ಮಾತನ್ನು ಕೇಳಿ ನಲಿಯಬಹುದು; ಇಲ್ಲದೇ ಹೋದರೆ ಆತನ ಅಭಿನಯಕ್ಕೆ ನಾವು ತಲೆದೂಗಬಹುದು. ತಲೆ ಜುಟ್ಟು ಬಿಚ್ಚಿ ಹೋಗುತ್ತದೆ. ಮುಂದುಗಡೆ ಮೇಜ ಇದ್ದರೆ, ಆತನ ಅಂಗೈ ತಾಳಕ್ಕೆ ಅದು ಗಡಗಡನೆ ನಡುಗುತ್ತಿರುತ್ತದೆ. (ಅದರ ಮೇಲೆ ಕಾಫಿ ಬಟ್ಟಲು ಇಲ್ಲದೇ ಇದ್ದರೇನೇ ಒಳ್ಳೆಯದು.) ಅವನ ಕೈಗಳು ಗಾಳಿಯಲ್ಲಿ ಸಿಕ್ಕಿದ ಮರದ ರೆಂಬೆಗಳಂತೆ ಕುಣಿದಾಡುತ್ತಿರುತ್ತವೆ. ಆ ಸ್ವಾರಸ್ಯವಾದ ಮಾತುಗಳ ಸೂರೆಯಂತೆ ಆತನ ನಗೆ ಗಳಿಗೆಗೊಮ್ಮೆ ಚಿಮ್ಮಿ ತೇಲುತ್ತದೆ. ನಮ್ಮ ಅಶ್ವತ್ಥ ಬಹು ಸರಸಿ, ರಸಿಕ. ಮಧ್ಯೆ ಮಧ್ಯೆ ಈ ನಗೆ ಮಾತನ್ನು ನಿಲ್ಲಿಸಿ, 'ಸಾಕಪ್ಪಾ ನನಗೆ ಸುಸ್ತು ಸಂಕಟ, ನಿಮಗೇನು ಹೇಳಿ, ಏಕೋ ನೋಡು ನಿನ್ನೆಯಿಲ್ಲಾ ನಿದ್ದೆಯೇ ಬರಲಿಲ್ಲ, ಅನ್ನ ಸ್ವಲ್ಪವೂ ಸೇರಲಿಲ್ಲ' ಎನ್ನುವಾಗ, ಈ ವಿಷ್ಕಂಭವೂ ಬಹು ಮುದ್ದಾಗುತ್ತದೆ.

ಈ ದಿನ ಅಶ್ವತ್ಥ, ತಾನು ಕಾಲದ ಮೇಲೆ ಮಾಡಿದ ಯುದ್ಧವನ್ನು ವರ್ಣಿಸುವುದಕ್ಕೆ ಆಣಿಯಾದ. ರುಕ್ಮಿಣಿ (ಶಾಸ್ತ್ರಿಗಳ ಮಗಳು) ಕಾಫಿಯನ್ನು ತಂದುಕೊಟ್ಟಳು. ಅದನ್ನು ಕುಡಿದು, ಉಸ್ಸಪ್ಪಾ, ಬದುಕಿದೆ ಎಂದುಕೊಂಡು ಈ ತೆರದ ವರ್ಣನೆಗೆ ಪ್ರಾರಂಭಿಸಿದ.

''ಅದನ್ನು ಕೆಣಕಿದರೆ, ನಾವು ಬಹು ಜಾಗರೂಕರಾಗಿದ್ದುಕೊಂಡು ಗೆಲ್ಲಬೇಕು. ಇಲ್ಲದೇಹೋದರೆ ಅದನ್ನು ಲೆಕ್ಕಿಸಲೇಬಾರದು. ನಿನ್ನೆಯ ದಿನ, ಏಳೂವರೆ ಗಂಟೆ ರೈಲಿನಲ್ಲಿ ಕುಳಿತು ಇಲ್ಲಿಗೆ ಬರಬೇಕೆಂದು ಮೊನ್ನೆ ಸಂಕಲ್ಪ ಮಾಡಿಕೊಂಡೆ. ಆದರೆ ಕಾಲ ನನ್ನ ಈ ನಿರ್ಧಾರವನ್ನು ಕಂಡು, 'ನನ್ನ ಮೇಲೆ ತೊಡೆ ತಟ್ಟುತ್ತೀಯಾ' ಎಂದಿತು; ನಾನು ಎದೆಗೆಡದೆ ಹ್ಞೂ ಎಂದೆ. 'ಅಲಾರಂ ಇಡಬೇಡ' ಎಂದು ನಿದ್ದೆ ನನ್ನನ್ನು ಗೋಗರೆದುಕೊಂಡಿತು. ಕಾಲ, ನನ್ನ ಕಡೆ ಇರುವಹಾಗೆ, 'ಅದರ ಮಾತು ಕೇಳಬೇಡ-ಇಡು' ಎಂದಿತು. ನಾನು ಐದು ಗಂಟೆಗೇ ಅಲಾರಂ ಇಟ್ಟೆ. ಕೊಕ್ಕಾಟದಲ್ಲಿ ಕೊಕ್ ಕೊಡುವ ಹಾಗೆ ನಿದ್ದೆಗೇನೋ ಅಲಾರಂ ಸರಿಯಾಗಿ ಐದು ಗಂಟೆಗೇ ಕೊಕ್ಕೊಟ್ಟಿತು. ನನಗೂ ಎಚ್ಚರವಾಯಿತು. ಆದರೆ ಹೊರಗಡೆ ಇನ್ನೂ ಕತ್ತಲು. ಕನಸು ಬೇರೆ ಚೆನ್ನಾಗಿತ್ತು. ಅದರಲ್ಲಿ ಸುಳಿದು ಹೋದವಳ ಕಣ್ಣು ಹೊಳಪನ್ನು ಇನ್ನಲ್ಲಿ ಕಾಣಬೇಕು. ತಿರುಗಿ ಅದೇ ಕನಸೇ ಬರಲೆಂದು ಕಣ್ಣು ಮುಚ್ಚಿಕೊಂಡೆ. ಬಸವನಿಗೆ ಕೆಂಪು ಶಾಲನ್ನು ತೋರಿಸುವಂತೆ, ಕಾಲ ನನಗೆ ಏಳು ಏಳು ಹೊತ್ತಾಯಿತು ಎನ್ನುತ್ತಲೇ ಇತ್ತು. ಆದರೆ ಅದೆಲ್ಲಾ ಬರಿಯ ಬೂಟಾಟಿಕೆ. ನನಗೆ ರೈಲು ತಪ್ಪಿಸಿ ಕಾಡಬೇಕೆಂದೇ ಅದಕ್ಕೆ ಆಸೆ. ನಾನು ಎದ್ದೆ. ಆಗ ಆರು ಗಂಟೆ. ಶೌಚಾಹಾರ ತೀರಿಸಿಕೊಂಡು, ಆಕೆ ಗೊಣಗುಟ್ಟುತ್ತಾ ಮಾಡಿಕೊಟ್ಟ ಕಾಫಿಯನ್ನು ಕುಡಿದು, ಕೆಳಗೆ ಬಟ್ಟಲಿಡುವ ಹೊತ್ತಿಗೆ ಆರೂವರೆ. ಅವಸರವಸರವಾಗಿ ಹೊರಕ್ಕೆ ಹೊರಟೆ.

ಸಣ್ಣ ಗಂಟೊಂದು, ಆಮೇಲೆ ಈ ಛತ್ರಿ-ಎರಡೇ ನನ್ನ ಸಾಮಾನು. ಹೊತ್ತೆತ್ತೋ

ಆಗಿಹೋಯಿತು. ಜಟಕಾ ಸ್ಟಾಂಡಿನಲ್ಲಿ ಒಂದು ಜಟಕವೂ ಇಲ್ಲ. ಬಸ್ಸನ್ನಾದರೂ ಹಿಡಿಯೋಣ ಎಂದುಕೊಂಡು ಜೋರು ಜೋರಾಗಿ ನಡೆದೆ. ಬಸ್ ಸ್ಟಾಂಡಿರುವುದು ನಮ್ಮ ಮನೆಗೆ ಅರ್ಧ ಮೈಲಿ ದೂರ. ಬೆಳಕು ಹರಿಯುತ್ತಾ ಬರುತ್ತಿತ್ತು. ಯಾರೂ ಕಾಣದೆ ನಿರ್ಜನವಾಗಿರುವ ರಸ್ತೆಯಲ್ಲಿ ಸ್ವಲ್ಪದೂರ ಓಡಿಯೂ ಓಡಿದೆ. ಮಿಲ್ಲುಗಳು ಕೊಂಯ್ ಎಂದವು. ಅದು ಕಾಲದ ತುತ್ತೂರಿ. ನನ್ನ ಚಪ್ಪಲಿಗಳು ವೇಗವನ್ನು ತಗ್ಗಿಸುತ್ತಿವೆ ಎಂದು ಅವೆರಡನ್ನೂ ಬಲಗೈಯಲ್ಲಿ ಹಿಡಿದುಕೊಂಡೆ. ಛತ್ರಿಯೂ, ಗಂಟೂ ಎಡಗೈಯಲ್ಲಿ. ಬಿಚ್ಚಿ ಹೋದ ತಲೆ ಕೂದಲನ್ನು ಕಟ್ಟಿಕೊಳ್ಳುವುದಕ್ಕೂ ಆಸ್ಪದವಿಲ್ಲ. ನನಗೋ ಮೇಲುಸಿರು. ನಿಂತರೆ ತೊಡೆ ನಡುಗುವಷ್ಟು ನಿಶ್ಶಕ್ತಿ. ದೂರದಲ್ಲಿ ಬಸ್ಸು ಧ್ವನಿ ಮಾಡುತ್ತಿದೆ. ಕಾಲ ಕಾಮರೂಪಿ. ಈಗ ಅದು ಬಸ್ಸಿನ ಅವತಾರವನ್ನು ತಾಳಿ, ನನಗೆ 'ಓ, ಬಾ ಹಿಡಿ' ಎನ್ನುತ್ತಿದೆ. ನಾನು ಈ ಪೈಶಾಚ ವೇಷದಲ್ಲಿಯೇ, ಆವೇಶ ಬಂದವನಂತೆ 'ಸ್ಟಾಪ್ ಸ್ಟಾಪ್' ಎಂದು ಕಿರಿಚುತ್ತ, ಎಕ್ಕಡಗಳನ್ನೂ ಛತ್ರಿ, ಗಂಟುಗಳನ್ನೂ ಝಳಪಿಸುತ್ತಾ ನಿಲ್ದಾಣಕ್ಕೆ ಓಡಿದೆ. ಹತ್ತು ಮಾರು ದೂರದಲ್ಲಿರುವಾಗಲೇ ಬಸ್ಸು ಹೊರಟುಬಿಟ್ಟಿತು. ನಾನು ಸುಸ್ತಾಗಿಯೂ, ನಿರಾಶನಾಗಿಯೂ, ಅದರ ಹತ್ತಿರದಲ್ಲಿದ್ದ ಸರ್ಕಲ್ಲಿನ ಕಾಂಪೌಂಡು ಗೋಡೆಯ ಮೇಲೆ ಕುಳಿತು, ಕೈ ಬಿಡುವು ಮಾಡಿಕೊಂಡು ಜುಟ್ಟು ಗಂಟುಹಾಕಿದೆ.

ಆದರೆ ಆಸೆ ಸಾಮಾನ್ಯವಾಗಿ ಸಾಯುವುದಿಲ್ಲ. ನನ್ನ ಗಡಿಯಾರ ಆಗ ಏಳೂ ಹತ್ತು ಎನ್ನುತ್ತಿತ್ತು. ದೂರದಲ್ಲಿ ಮತ್ತೊಂದು ಬಸ್ಸು ಬರುತ್ತಿತ್ತು. ಏಳೂಕಾಲಿಗೆ ಅದನ್ನು ಹತ್ತಿ ಕುಳಿತುಕೊಂಡೆ. ಅದು ಹೊರಡುವುದಕ್ಕೆ ಎಷ್ಟು ವಿಘ್ನಗಳು, ಎಷ್ಟು ಸಲ ಮಧ್ಯದಲ್ಲಿ ಅದು ನಿಲ್ಲಬೇಕು. ಈ ಜನಗಳೆಲ್ಲಾ ಕಾಲದ ವಿಕಟಾವತಾರಗಳೇ-ಎಲ್ಲ ವಿಘ್ನಕಾರಿಗಳು. ಅದರೊಡನೆ ನಾನಾಡುತ್ತಿರುವ ಈ ಕುಸ್ತಿಯಲ್ಲಿ ನನಗೆ ಜಯ ಬಯಸುವವರೊಬ್ಬರೂ ಇಲ್ಲ. ಏಳೂವರೆಗೆ ರೈಲ್ವೆ ಸ್ಟೇಷನ್ ತಲುಪಿದೆ. ಟಿಕೇಟು ಕೊಡುವ ಜಾಗದಲ್ಲಿ ಜನವೇ ಇಲ್ಲ. ಆದರೆ ಕಿಟಕಿಯ ಬಾಗಿಲು ಮುಚ್ಚಿರಲಿಲ್ಲ. ಆ ದಿನ ರೈಲು ಸ್ವಲ್ಪ ತಡವಾಗಿ ಹೊರಡುತ್ತದೆ ಎಂಬ ಸಮಾಚಾರವನ್ನು ಟಿಕೇಟು ಮಾರುವವನ ಹತ್ತಿರ ತಿಳಿದುಕೊಂಡೆ. ನನ್ನ ಜೇಬಿನಲ್ಲಿ ಚಿಲ್ಲರೆ ಇಲ್ಲ. ನನ್ನ ಅವಸರ ಅವನಿಗೆ ಗೊತ್ತು. ಅವನೂ ಚಿಲ್ಲರೆ ಇಲ್ಲವೆಂದು ತಡಕಾಡುತ್ತಿದ್ದ. ನಾನು ಚಿಲ್ಲರೆಯನ್ನು ಅಲ್ಲೆ ಬಿಟ್ಟು ಸ್ಟೇಷನ್ನೊಳಕ್ಕೆ ಓಡಿದೆ. ಪುಣ್ಯಕ್ಕೆ ರೈಲು ನಿಂತಿತ್ತು. ಕೂಗಿಕೊಳ್ಳುತ್ತಿತ್ತು. ಅದರ ಕೊಳವೆಯಿಂದ ತಿಮಿಂಗಿಲದ ಉಸಿರಿನಂತೆ ಆವಿ ಸಶಬ್ದವಾಗಿ ಏಳುತ್ತಿತ್ತು. ಗಾರ್ಡು ತುಟಿಗೆ ಸಿಲ್ಪಿ ಸಿಕ್ಕಿಸಿಕೊಂಡು ಓಡಿಯಾಡುತ್ತಿದ್ದ. ಕಾಲದ ಪರಿಪೂರ್ಣಾವತಾರ ಈ ರೈಲು ಪೆಡಂಭೂತ. ಇದರ ಗರ್ಭದಲ್ಲಿ ನಾನು ಹೋಗಿ ಕುಳಿತೆ. ಜೈ ಎಂದೆ. ಆ ಗಾಡಿಯಲ್ಲಿ ಹತ್ತು ಮಂದಿ ಹಾಯಾಗಿ ಕೂರಬಹುದು. ಅಲ್ಲಿದ್ದವರು ಐವರು. ಕೊನೆಯ ಗಾಡಿ, ಗಲಾಟೆ ಇರಲಿಲ್ಲ, ನನ್ನ ಪುಣ್ಯಕ್ಕೆ.

ನಾನು ಕುಳಿತುಕೊಳ್ಳುವಷ್ಟರಲ್ಲಿ ಓಡಿ ಬಂದರಯ್ಯಾ, ಮತ್ತೆ ಮೂವರು. ಹುಡುಗಿ ಒಬ್ಬಳು-ಬಲಿತ ಹುಡುಗಿ, ಒಬ್ಬ ಗಂಡಸು, ಒಬ್ಬ ಹುಡುಗ. ಆಕೆ ಹೇಗೆ ಓಡಿ ಬಂದಳಯ್ಯಾ. ಎಂಥ ಗೆಲವಿತ್ತು ಆ ಕಾಲುಗಳಲ್ಲಿ. ಒಳ್ಳೆ ನಾಜೂಕಾದ ಹುಡುಗಿ-ಗಂಡು ಬೀರಿಯಲ್ಲ. ನಾನು ದಿಗ್ಭ್ರಾಂತನಾಗಿ ನೋಡುತ್ತಿದ್ದೆ. ಛಂಗನೆ ಆಕೆ ಗಾಡಿಗೆ ಹತ್ತಿದಳು. ಅವಳ ಹಿಂದೆ ಆ ಹುಡುಗ, ಅವನ ಹಿಂದೆ ಆ ಗಂಡಸು, ಆಮೇಲೆ ಗಂಟನ್ನು ಹೊತ್ತುಕೊಂಡು ಬರುತ್ತಿದ್ದ ಕೂಲಿಯಾಳು. ಒಂದು ಕ್ಷಣದಲ್ಲಿ ಎಲ್ಲರೂ ಒಳಕ್ಕೆ ಬಂದರು. ಕೂಲಿ ಇಳಿದ ಕ್ಷಣ ರೈಲು ಹೊರಟಿತು. ಕೂಲಿ ನಾಕಾಣೆ ಕೇಳಿದ. ಗಂಡಸು ತಕ್ಷಣ ಕೊಟ್ಟುಬಿಟ್ಟ. ರೈಲು ಹೊರಟ ಮೇಲೆ ನಾನು ನಿಧಾನವಾಗಿ ಉಸಿರುಬಿಡುತ್ತಾ, ಕೊನೆಗೂ ನಾನೇ ಗೆದ್ದೆ ಎಂದು

ಕೊಂಡೆ. ಅದು ಸ್ಟೇಷನ್ನು ಬಿಡುವ ಹೊತ್ತಿಗೆ, ಈ ಆಗಂತುಕರೂ, ಸ್ಪಷ್ಟವಾಗಿ ನನ್ನ ಬಲ ಪಕ್ಕಕ್ಕಿದ್ದ ಮೂರು-ನಾಲ್ಕು ಜನ ಕೂರುವಂಥಾ ಸೀಟನಲ್ಲಿ ಕುಳಿತುಕೊಂಡರು. ಆ ಹುಡುಗಿ ನನಗೆ ಹತ್ತಿರ ವಾಗಿ, ಆ ಮೇಲೆ ಆ ಹುಡುಗ, ಅವನ ಮಗ್ಗುಲಲ್ಲಿ ಆ ಗಂಡಸು. ಆಕೆಯ ಮುಖ ಬೆವತಿತ್ತು. ಕುಂಕುಮ ಹರಡಿತ್ತು. ಕುರುಳು ಮುಖಕ್ಕೆ ಅಂಟಕೊಂಡು ಅಚಂಚಲವಾಗಿತ್ತು. ಕೆನ್ನೆ ಕೆಂಪಾಗಿತ್ತು. ಆಕೆ ಬುಲಾಕನ್ನು ತೊಟ್ಟುಕೊಂಡಿದ್ದಳು. ಈ ಆಭರಣವನ್ನು ಅಲ್ಲಗಳೆಯುವವರ ಮೌಢ್ಯಕ್ಕೆ ನಾವು ಏನು ಹೇಳೋಣ. ಆ ಬುಲಾಕಿನ ಮುತ್ತು ಆಕೆ ನಕ್ಕಾಗ ಬೆಳ್ಳಗಾಗುತ್ತಿತ್ತು. ಆಕೆಗೆ ಹದಿನೆಂಟು ವಯಸ್ಸಿರಬಹುದು. ಆದರೆ ಏನು ಗೆಲವಯ್ಯಾ ಅವಳ ಮುಖದಲ್ಲಿ, ಎಂಥ ಸರಳತೆ-ಅವಳ ಉಡುಪಿನಲ್ಲಿ, ಎಂಥ ಬೆಡಗು, ರೀತಿಯಲ್ಲಿ ಎಂಥ ಕೊಂಕು. ಆಕೆ ನನ್ನನ್ನು ನೋಡಿ ತುಸು ನಗುತ್ತಾ ಕುರುಳನ್ನು ಸರಿಮಾಡಿಕೊಳ್ಳುತ್ತಿದ್ದಳು. ಆಕೆಯ ಬಳೆಗಳು-ಬಣ್ಣಗಳ ಹೊಂದಾವಣೆ ಎಷ್ಟು ಸೊಗಸಾಗಿತ್ತು ಎನ್ನುತ್ತೀಯಾ-ಚಿನ್ನದ್ದು, ಗಾಜಿನದು, ರತ್ನಗಳದು-ಹಾ-ಹಾ-ಅದೇನು ದನಿಗೈದು ವಯ್ಯಾ. ನಾನು ಮೂಢನಾದೆ.

ಒಳ್ಳೆಯ ಬಲಿತ ಗೋಧಿನಾಗರಿನಂಥ ದುಂಡು ತೋಳುಗಳು ಆಕೆಗೆ. ಕುರುಳನ್ನು ಸರಿಮಾಡಿಕೊಂಡು, ಸೀರೆಯ ನಿರಿಯನ್ನು ಅಲ್ಲಿ ಇಲ್ಲಿ ಮುಟ್ಟಿ, ಸುಕ್ಕನ್ನು ಸರಳವಾಗಿ ಹರಡಿಸುತ್ತಾ ತಿರುಗಿ ನನ್ನ ಕಡೆ ನೋಡಿ ನಕ್ಕಳು. ನಾನು ಸುಸ್ತಾದೆ. ಬೇರೆಯ ಕಡೆ ನೋಡಲುತೊಡಗಿದೆ. ಆ ಗಂಡಸು ಮೊದ್ದ, ಶುದ್ಧ ಮೊದ್ದ. ಕೂಲಿ ಕೇಳಿದಷ್ಟು ದುಡ್ಡು ಕೊಟ್ಟಾಗಲೇ ಅವನ ಯೋಗ್ಯತೆ ನನಗೆ ಗೊತ್ತಾಗಿಹೋಯಿತು. ಗಂಡನೇ ಇರಬಹುದು. ತಲೆಯಲ್ಲಿ ಬೈತಲೆ ತೆಗೆದ ಕ್ರಾಪು. ಅದಕ್ಕೆ ಬಾಚಣಿಗೆ ಊರಿ ಎಷ್ಟು ದಿನಗಳಾಗಿತ್ತೋ. ಗಡ್ಡದಲ್ಲಿ ಐದು ದಿನಗಳ ಕೂದಲು. ಅಂಗಿ ರೇಶ್ಮೆಯದು, ಆದರೆ ಶುದ್ಧ ಕೊಳಕು; ಇಸ್ತ್ರಿಯ ಪೆಟ್ಟಿಗೆಯನ್ನು ಅದು ಕಂಡಹಾಗೆ ಕಾಣುತ್ತಲೇ ಇರಲಿಲ್ಲ. ಕೈ ಬೆರಳುಗಳಿಗೆಲ್ಲಾ ಕಜ್ಜಿ ಹತ್ತಿದಹಾಗೆ ಉಂಗುರ. ಮುಖಕ್ಕೆ ನಾಮ. ಎಂಥ ಬಾಬಯ್ಯನ ಹಬ್ಬದ ಮನುಷ್ಯ ಈತ. ಸಿರಿವಂತ ಇರಬಹುದು. ಆದರೆ ಶುದ್ಧ ಅಸಂಸ್ಕೃತ, ಜತೆಗೆ ಮೊದ್ದ. ಒಂದು ಮಾತಿಲ್ಲ, ಒಂದು ಸದ್ದಿಲ್ಲ. ಸುಮ್ಮನೆ ಕತ್ತನ್ನು ಕೂತ ಕಿಟಕಿಯ ಹೊರಗೆ ಹಾಕಿ ಎಲ್ಲವನ್ನೂ ಕಕ್ಕಾಬಿಕ್ಕಿಯಾಗಿ ನೋಡುತ್ತಿದ್ದ. ಇವನೆಲ್ಲಿ, ಈಕೆ ಎಲ್ಲಿ? ಈಕೆಯ ಉಡುಗೆಯಲ್ಲೇ ಎಂಥ ಕಳೆ. ಈ ಅಪ್ಸರೆಗೆ ಇಂಥವನೇ ಗಂಡನಾಗಬೇಕೆ ಎಂದುಕೊಂಡೆ.

ಇವರಿಬ್ಬರ ನಡುವೆ ಕುಳಿತಿದ್ದ ಆ ಹುಡುಗ, ಅವನ ತಮ್ಮನೋ, ಇವಳ ತಮ್ಮನೋ ಕಾಣೆ, ತಾನು ಈ ಪಕ್ಕದ ಕಿಟಕಿಯ ಹತ್ತಿರಕ್ಕೆ ಬರಬೇಕೆಂದು ಆ ಹುಡುಗಿಯನ್ನು ಕಾಡುತ್ತಿದ್ದ. ಅದಕ್ಕೆ ಸರಿಸಮನಾಗಿ ಆಕೆಯೂ ಹಠಹಿಡಿದು, ಆ ಹುಡುಗನನ್ನು ಕೀಟಲೆ ಮಾಡಿ ಅಳಿಸುತ್ತ, ತನ್ನ ಜಾಗ ಬಿಡದೆಯೇ ಕುಳಿತಿದ್ದಳು. ತನ್ನ ಗಂಡನ ಹತ್ತಿರ ಕುಳಿತುಕೊಳ್ಳುವುದಕ್ಕೆ ಅವಳಿಗೆ ಇಷ್ಟವಿಲ್ಲವೇನೋ ಎಂದುಕೊಂಡೆ. ಆಕೆಯ ಮಾತು ಎಷ್ಟು ಮಧುರ. ದೋರುದಾಳಿಂಬೆಯ ಬಿತ್ತದ ಹಾಗೆ ಹಲ್ಲು. ಅವಳ ನಗುವಿನಲ್ಲಿ ಎಂಥ ಬೆಳಕಿನ ಸುಗ್ಗಿ. ಅದು ತುಟಿಯಲ್ಲಿ ಹರಡಿ, ಕೆನ್ನೆಯಲ್ಲಿ ಗುಳಿ ಬಿದ್ದಾಗ ಅದೆಂಥ ಮೋಹಕ ರೂಪ ಅವಳದು. ಆ ಬುಲಾಕಿನ ಮುತ್ತು ಈ ದಿವ್ಯಸ್ಮಿತಕ್ಕೆ ತಕ್ಕ ಕನ್ನಡಿ. ಆಕೆ ನಕ್ಕ ಬೆಳಕನ್ನೆಲ್ಲಾ ಶೇಖರಿಸಿಕೊಂಡು ಇದು ಇಷ್ಟು ಹೊಳಪೂ, ಗಾತ್ರವೂ ಆಯಿತೇನೊ. ನೋಟದ ಮಿಂಚಿನ ಘಾತ ಮಾತ್ರ ನನಗೆ.

ನನ್ನೊಡನೆ ಚೆಲ್ಲಾಟವಾಡಬೇಕೆಂದೇ ಆ ಹುಡುಗನನ್ನು ಈ ರೀತಿ ಕುಚೇಷ್ಟೆ ಮಾಡುತ್ತಿದ್ದಾಳೊ ಎಂದು ನನಗೆ ತೋರುತ್ತಿತ್ತು. ಒಮ್ಮೆ ಅವನನ್ನು ಸಿಡುಕಿಕೊಂಡು, ಒಂದು ತರದ ಕೊಂಕಿನಿಂದ ಮುಖವನ್ನು ಕಿಟಕಿಯ ಹೊರಕ್ಕೆ





ಹಾಕುತ್ತಾಳೆ. ಇನ್ನೊಂದು ಕ್ಷಣದಲ್ಲಿ, ಆ ಹುಡುಗನ ಕಡೆಗೆ ಸರ್ರನೆ ತಿರುಗಿ ಮುದ್ದಿನ ಮಾತನ್ನಾಡುತ್ತಾಳೆ. ಹೀಗೆ ಒನಪಿನಿಂದ ತಿರುಗುವಾಗ, ಆಡುವ ಹಾವಿನ ಹೆಡೆಯಂತೆ ಈ ತೆಳುನಡುವಿನವಳ ದೇಹ ಮೋಹಕವಾಗುತ್ತದೆ. ಈ ಮಧ್ಯದಲ್ಲಿ ನನ್ನ ಕಡೆಗೆ ಬಲುತುಂಟ ಕಟಾಕ್ಷವನ್ನು ಬೀರುತ್ತಾಳೆ. ಆ ಮಿಂಚಿನ ಹೊಳಪನ್ನು ಹೇಳತೀರದು. ನನ್ನ ಹೃದಯ ಮೊದಲೇ ಈ ರೂಪಿನಿಂದ ಅಸ್ಥಿರವಾಗಿಬಿಟ್ಟಿದೆ. ಈಗ ಈ ಕಣ್ಣಿನ ಝಳುಕು ಬೇರೆ ಅದರ ಮೇಲೆ ಬಿದ್ದು, ನನ್ನ ಭ್ರಾಂತ ಮನಸ್ಸು ಎಲ್ಲೆಲ್ಲಿಯೋ ಅಲೆಯುತ್ತಿದೆ-ಕೈಕನ್ನಡಿಯ ಮೇಲೆ ಬಿದ್ದ ಸೂರ್ಯಕಿರಣದ ಹಾಗೆ. ನನಗಾದ ಆ ಚಿತ್ತ ಚಾಂಚಲ್ಯವನ್ನೂ, ಆಗಿನ ನನ್ನಾತ್ಮದ ದೀಪ್ತಿಯನ್ನೂ ಹೇಳಲಾಸಲ್ಲ. ತುಂಟ ಹುಡುಗಿ-ಬಲು ತುಂಟ ಹುಡುಗಿ.

ಅವಳು ಸ್ವಲ್ಪ ಅಲುಗಿದರೂ, ಆಕೆ ಯಾವ ವಿಧವಾದ ಅಂಗಚಲನೆಯನ್ನು ಮಾಡಿದರೂ, ನನಗೊಂದು ತರದ ಹಿತವಾದ ನೋವಾಗುತ್ತಿತ್ತು. ಹಾಗೆ ನಗಬೇಡ, ಈ ತರ ಕಡೆಗಣ್ಣು ಹಾರಿಸಬೇಡ, ಈ ರೀತಿ ನಿನ್ನ ಮೈಯನ್ನು ತಿರುಗಿಸಬೇಡ. ಕೈ ಆಡಿಸಬೇಡ, ಸ್ವಸ್ಥಳಾಗಿರು, ದಮ್ಮಯ್ಯಾ, ಎಂದು ಗೋಗರೆಯುವ ದುಃಸ್ಥಿತಿಗೆ ಇಳಿದಿದ್ದೆ ನಾನು. ಕೊನೆಗೆ ಆ ಹುಡುಗನಿಗೆ ಕಿಟಕಿಯ ಹತ್ತಿರ ಜಾಗಕೊಟ್ಟು ಈ ಕಡೆಗೆ ಒತ್ತರಿಸಿಕೊಂಡಳು. ಗಂಡ, ಪಕ್ಕದಲ್ಲಿ ಮೊದ್ದಾಗಿ ಕಿಟಕಿಯ ಕಡೆಗೆ ತಲೆ ಹಾಕಿಕೊಂಡೇ ಕುಳಿತಿದ್ದ. ಈಕೆ ಅವನನ್ನು ಮಾತನಾಡಿಸುವುದಕ್ಕೆ ಪ್ರಯತ್ನಪಟ್ಟಳು. ಆತ ಮೌನ, ಇಲ್ಲವೇ ಏನೋ ಒಂದು ಮಾತಿನ ಗುಟುರನ್ನು ಹಾಕುತ್ತಾನೆ ಅಷ್ಟೆ. ಈ ಕಡೆಯೂ ನೋಡಪ್ಪೊಲ್ಲ. ವಿಧಿ ಎಂಥ ಕುರುಡ. ಎಂಥ ಗೆಲವಾದ ಬೆಡಗಿ ಈ ಹೆಣ್ಣು. ಶುದ್ಧ ಮಂಕು ಈ ಗಂಡ ಎಂದು ನಾನು ಮನಸ್ಸಿನಲ್ಲಿ ಪರಿತಾಪ ಪಡುತ್ತಿರುವಾಗ, ಈ ವಿಷಾದಕ್ಕೆ ಅವಕಾಶಕೊಡದಂತೆ ಆಕೆ, ತಿರುಗಿ ನನ್ನ ಕಡೆಗೆ ಮಿಂಚಿನ ನೋಟವನ್ನೆಸೆದು, ಕಿಟಕಿಯ ಹತ್ತಿರ ಕುಳಿತಿದ್ದ ಆ ಹುಡುಗನನ್ನು ಕೀಟಲೆ ಮಾಡುತ್ತಾಳೆ. ಬಲು ಚಟುವಟಿಕೆಯುಳ್ಳ ಹುಡುಗಿ. ಅವಳ ಭಾವ-ಭಂಗಿ ಎಂಥವರ ಮನಸ್ಸನ್ನೂ ಚಿಟುಕುಮುಳ್ಳಾಡಿಸುತ್ತದೆ. ಪ್ರಣಯ ಪ್ರಸಂಗದಲ್ಲಿ ಬಾಲೆಯಲ್ಲ, ಪ್ರೌಢೆ ಎನ್ನಿಸುವಂತಿತ್ತು ಆಕೆಯ ಆಟಗಾರಿಕೆ. ಆಕೆಗೆ ನಾನು ತೀರ ಬೆರಗಾದೆ. ಅಂಥ ಚೆಲುವುಳ್ಳ, ಅಷ್ಟು ಗೆಲವುಳ್ಳ ಹೆಣ್ಣನ್ನು ನಾನು ನೋಡಿಯೇ ಇಲ್ಲ. ಅವಳು ನನ್ನನ್ನು ಈ ರೀತಿಯಾಗಿ ಗೋಳುಹೊಯ್ದುಕೊಳ್ಳುತ್ತಿರುವಾಗ ಒಂದು ಸ್ಟೇಷನ್ನು ಸಮೀಪಿಸಿತು. ಅಲ್ಲಿ ಒಂದು ಚಮತ್ಕಾರ ನಡೆಯಿತು.

ಅಲ್ಲಿ ರೈಲುಗಾಡಿಯ ಹತ್ತಿರಕ್ಕೆ ತಾಳೆ ಹೂಗಳನ್ನು ಕುಕ್ಕೆ ತುಂಬ ತುಂಬಿಕೊಂಡು ಒಬ್ಬ ಮಾರುವುದಕ್ಕೆ ಬಂದಿದ್ದ. ಆ ಹೂವನ್ನು ನೋಡಿ ಈ ಮೊದ್ದುಗಂಡ, ತಲೆಯನ್ನು ಗಾಡಿಯೊಳಕ್ಕೆ ತಿರುಗಿಸಿ, ಹೆಂಡತಿಯನ್ನು ಒಂದು ತೆರದ ನಗೆ ಭಾವದಲ್ಲಿ, 'ಬೇಕೆ?' ಎನ್ನುವ ಹಾಗೆ ನೋಡುತ್ತಾನೆ. ಆಕೆ ತಲೆಯಾಡಿಸಿ, ದಿವ್ಯ ಸ್ಮಿತವೊಂದನ್ನು ಬೀರಿ, ಸನ್ನೆಯಿಂದಲೇ ಹ್ಞೂ ಎನ್ನುತ್ತಾಳೆ. ಆತನ ನಗೆ ಅವನ ರೂಕ್ಷಭಾವವನ್ನೆಲ್ಲಾ ತೊಳೆದು ಮುಖಕ್ಕೆ ಒಂದು ಅಲೌಕಿಕವಾದ ತೇಜಸ್ಸನ್ನು ಕೊಡುತ್ತದೆ. ಅದು ಪ್ರೇಮದ ಹೊಳಪು. ಈಕೆಯ ಮಿದು ನಗೆ ಅದಕ್ಕೆ ಹೊಳಲು ಕೊಡುತ್ತಿದೆ. ಆಕೆಯ ಈ ಮೊದಲಿನ ಚೆಲ್ಲಾಟಕ್ಕೂ, ಈಗಿನ ಈ ಭಾವಕ್ಕೂ ಯಾವ ಸಂಬಂಧವೂ ಇಲ್ಲ. ಅವಳ ಹೃದಯದ ಸ್ಥಿರ ಸ್ವರೂಪ ಈ ಪ್ರೇಮಭಾವ. ನನಗೆಸೆಯುತ್ತಿದ್ದ ಕಟಾಕ್ಷ ಅದರ ಚರ ಸ್ವರೂಪ. ಅದು ಸತ್ಯ, ಇದು ಮಿಥ್ಯ, ಮಾಯೆ. ಇವರೆಡೂ ಅನುಭವೈಕವೇದ್ಯ. ಆತ ತೆಗೆದುಕೊಟ್ಟ ತಾಳೆ ಮೋತೆಯ ಒಂದೆಸಳನ್ನು ಆಕೆ, ನನ್ನನ್ನು ಮೊದಲಿನ ಕೊಂಕಿನ ಭಾವದಲ್ಲೇ ನೋಡುತ್ತಾ ಮುಡಿದುಕೊಳ್ಳುತ್ತಾಳೆ.



ತಿರುಗಿ ಕಳೆದಿಡುತ್ತಾಳೆ. ಈಗ ಜಡೆ ಬಿಚ್ಚಿ ನಾಲ್ಕನೆಳನ್ನು ಹೆಣೆದುಕೊಳ್ಳುತ್ತಾಳೆ, ಮೇಲೊಂದು ಮುಡಿಯುತ್ತಾಳೆ. ಆ ತೋಳಿನ ಕುಲುಕಾಟ, ಬೆರಳುಗಳ ಮನೋಹರವಾದ ನರ್ತನ, ಕೆನ್ನೆ ಗುಳಿ ಬೀಳಿಸುವ ನಗು, ತಲೆ ಬಗ್ಗಿ ಹೂವನ್ನು ಮುಡಿದುಕೊಳ್ಳುವಾಗ ನನ್ನ ಕಡೆಗೆಸೆಯುವ ಕೋಲ್ನೋಟ-ಎಲ್ಲ ಬಲು ಮನೋಹರವಾಗಿವೆ:

ಆದರೆ ಇವ್ಯೊಂದೂ ಈಗ ನನ್ನನ್ನು ಮರುಳು ಮಾಡುತ್ತಿಲ್ಲ. ಆ ತುಂಟ ಹುಡುಗಿ ನನ್ನನ್ನು ಬೇಕೆಂದೇ ನೋಡಿ ನಗುತ್ತಿದ್ದಾಳೆ. ನನಗೆ ಅವಳಲ್ಲಿ ಆಸಕ್ತಿ ಈಗ ಕಡಿಮೆ. ಗಂಡಸಿಗೆ ಹೆಂಗಸಿನ ಮೇಲೆ ಗೌರವ ಹುಟ್ಟಿಬಿಟ್ಟ ಮೇಲೆ ಏನು ಪ್ರಯೋಜನ? ನನಗೆ ತೀರ ನಾಚಿಕೆಯಾಯಿತು. ಎಲೆ ಎಲಾ ಹುಡುಗಿ ಎಂದು ನಾನು ವಿಭ್ರಾಂತನಾದೆ. ರೈಲು ಹೊರಟಿತು. ಸ್ಟೇಷನ್ನಿನ ಹೆಸರು ನನಗೆ ಈಗ ಕಣ್ಣಿಗೆ ಬಿತ್ತು. ನಾನು ಇಳಿಯಬೇಕಾಗಿದ್ದುದು ಇದಕ್ಕೆ ಹಿಂದಿನ ಸ್ಟೇಷನ್ನಿನಲ್ಲಿ! ಈ ದಾರಿಯಲ್ಲಿ ಎಲ್ಲಾ ಸ್ಟೇಷನ್ನುಗಳೂ ಒಂದೇ ತರಹ. ಅಲ್ಲದೆ ಇದುವರೆಗೂ ಈ ಚೆಲ್ಲಾಟದ ಬೆಡಗಿಯ ಭ್ರಮೆ ಬೇರೆ ನನಗೆ. ಹೊತ್ತೇ ಗೊತ್ತಾಗಲಿಲ್ಲ. ಎಂಥ ಮೋಸವಾಗಿ ಹೋಯಿತು. ಎಂಥ ಮೋಸವಾಗಿ ಹೋಯಿತು! ಆದರೆ ಅಬ್ಬ, ಎಂಥ ಹುಡುಗಿ, ಎಂಥ ಚಮತ್ಕಾರ. ಕಾಲ ಈ ಮಾಯಾಂಗನೆಯ ವೇಷ ಹಾಕಿಕೊಂಡು ನನ್ನನ್ನು ಗೇಲಿ ಮಾಡುವುದಕ್ಕೆ ಈ ತೆರ ಬಂದಿತ್ತೇನೋ. ಅಬ್ಬ ಎಂಥ ಹುಡುಗಿ. ಎಂಥ ಚೆಲ್ಲಾಟ; ಆ ಮೊದನನ್ನು ಕಂಡರೆ ಎಂಥ ಪ್ರೇಮ, ಹೆಂಗಸರನ್ನು ನಂಬುವಂತೆಯೇ ಇಲ್ಲ. ಸದಾರಮೆ ಆ ಕಳ್ಳನನ್ನು ವಂಚಿಸಿದ ಹಾಗೆ ಈಕೆ ನನ್ನನ್ನು ವಂಚಿಸಿದಳು; ಅಂಥ ಠಕ್ಕನ ವಿಲಾಸ ಇವಳದು. ಅವಳ ಗಂಡನಿಗೊಂದು ತರದ ಭಾವ-ನಮ್ಮಂಥವರಿಗೊಂದು ತರದ ಭಾವ. ಅಬ್ಬ ಎಂಥ ಹುಡುಗಿ. ಕೊನೆಗೆ ಕಾಲ ನನ್ನನ್ನು ಸೋಲಿಸಿತು. ನಿನ್ನೆ ನಿಮ್ಮೂರಿಗೆ ನಾನು ಬರಲೇ ಆಗಲಿಲ್ಲ.

ರೈಲು ಮುಂದುವರಿಯುತ್ತಲು, ನನಗೆ ಕುತೂಹಲ ಕಡಮೆಯಾಗದಿದ್ದರೂ, ಆ ಹುಡುಗಿಯಲ್ಲಿದ್ದ ಮೋಹ ಹೊರಟು ಹೋಯಿತು. ಈಗ ಗಂಡ ಕಿಟಕಿಯಿಂದ ಮುಖವನ್ನು ಒಳಕ್ಕೆ ಇಟ್ಟುಕೊಂಡು ಹೆಂಡತಿಯ

ಕಡೆ ನೋಡುತ್ತಾನೆ. ಈಗ ಆತ ನನಗೆ ಅಷ್ಟು ಮೊದ್ದನಂತೆ ಕಾಣುವುದಿಲ್ಲ. ಬಹಳ ಗೌರವಸ್ಥನಂತೆ ಕಾಣುತ್ತಾನೆ. ಆಕೆ ಒಂದು ಸಣ್ಣ ತಾಳೆಯ ಹೂವಿನ ಎಸಳನ್ನು ಆತನ ಅಂಗಿಗೆ ಸಿಕ್ಕಿಸಿ ಒಂದು ತೆರದಲ್ಲಿ ನಲಿಯುತ್ತಾಳೆ. ಆಮೇಲೆ ನನ್ನ ಕಡೆಗೆ ನೋಡಿ ನಗುತ್ತಾಳೆ. ಅಂಥ ಹುಡುಗಿಯನ್ನು ಈ ಜನ್ಮದಲ್ಲಿ ನಾನು ತಿರುಗಿ ಕಾಣುವಂತಿಲ್ಲ. ಮುಂದಿನ ಸ್ಟೇಷನ್ನು ಬಂತು. ನನಗೆ ಈ ಹುಡುಗಿಯ ಸಹವಾಸ ಸಾಕಾಗಿ, ಪ್ರಕೃತಿ ದರ್ಶನದಲ್ಲಿ ನಾನು ಸಮಾಧಾನವನ್ನು ತಾಳುತ್ತಿದ್ದೆ. ಈ ಸ್ಟೇಷನ್ನಿನಲ್ಲಿ ನನ್ನ ಹಳೆಯ ಸ್ನೇಹಿತ ರಾಮು ಕಣ್ಣಿಗೆ ಬಿದ್ದ. ಅದರ ಹತ್ತಿರದ ಒಂದು ಹಳ್ಳಿಯಲ್ಲಿ ಅವನ ಮನೆ. ''ರಾಮೂ'' ಎಂದೆ. ಅವ ಹತ್ತಿರ ಬಂದು, ''ಎಲ್ಲಿಗೆ ಪ್ರಯಾಣ'' ಎಂದ. ''ಎಲ್ಲಿಗೂ ಇಲ್ಲ'' ಎಂದೆ. ''ಹಾಗಾದರೆ ಇಲ್ಲೆ ಇಳಿ'' ಎಂದ. ಹ್ಞೂ ಎಂದು ಇಳಿದೇಬಿಟ್ಟೆ. ರಾಮುವಿಗೂ ಆಶ್ಚರ್ಯ.

ನಾನು ರೈಲಿಳಿಯುವಾಗಲೂ ಆಕೆ ನನ್ನನ್ನು ನೋಡಿ ಒಂದು ಸಲ ನಕ್ಕಳು. ಆಮೇಲೆ ಗಂಡನನ್ನು ನೋಡಿ ಒಂದು ಕಿರುನಗೆ ಬೀರಿದಳು. ಆ ಹುಡುಗನಿಗೆ ಕಚಗುಳಿಯಿಟ್ಟು ಅವನ ಕೂದಲನ್ನೆಳೆದಳು. ಆಹಾ ಬಲು ಸೋಜಿಗದ ಹುಡುಗಿ ಆಕೆ. ನನಗೆಲ್ಲಿಯಾದರೂ ಅಂಥವಳು ಗಂಟುಬಿದ್ದಿದ್ದರೆ, ನಾನು ಅಸೂಯೆಯಿಂದ ಏನಾಗಿಬಿಡುತ್ತಿದ್ದೆನೋ. ಅವಳ ಗಂಡ ಗಂಭೀರ ವಾದ ಹುಡುಗ, ಗಟ್ಟಿಗ. ಕಾಳಿ ಆಕೆ-ಕಾಲ ಸ್ವರೂಪಿಣಿ. ನನ್ನ ಹೃದಯವನ್ನು ಚೆನ್ನಾಗಿ ಕುಣಿಸಿ ದಳು. ರೈಲು ಹೊರಡುವವರೆಗೂ ರಾಮುವಿಗೆ ಹ್ಞೂ ಹ್ಞೂ ಎಂದು ಉತ್ತರಕೊಡುತ್ತಾ, ಈ ದಂಪತಿಗಳ ಮೇಲೆ ನನ್ನ ಓರೆನೋಟವನ್ನಿಡುತ್ತಾ ಅಲ್ಲೆ ನಿಂತಿದ್ದೆ. ಗಾಡಿ ಹೊರಟಿತು. ಅದು ಹಾಯಾಗಿ ಸಿಗರೇಟನ್ನು ಸೇದುವಂತೆ ಹೊಗೆಯನ್ನು ಕಾರುತ್ತಾ, ಮೂಲೆ ತಿರುಗಿ ಕೊಂಪ್ ಗುಟ್ಟಿದಾಗ, ಹಿಂದಕ್ಕೆ ತಿರುಗಿ ನೋಡಿ ನನ್ನನ್ನು ಗೇಲಿ ಮಾಡುತ್ತಿರುವಂತೆ ತೋರಿತು. ನಾನು ಖಿನ್ನನಾಗಿ ತಲೆ ತಗ್ಗಿಸಿಕೊಂಡೆ, ಸೋತೆನೆಂದು. ರಾಮುವಿನ ಹಳ್ಳಿಯಲ್ಲಿ ತಂಗಿದ್ದು, ಬೆಳಗಿನ ರೈಲಿನಲ್ಲಿ ನಾನು ಈ ಕಡೆಗೆ ಬಂದೆ. ವಿಚಿತ್ರ ಹುಡುಗಿ ಅವಳು, ಕಾಲದ ಗುಪ್ತಚಾರಿಣಿ. ಕಾಲದ ಮೇಲೆ ಮಾತ್ರ ಸ್ಪರ್ಧೆಗೆ ಹೋಗಬಾರದು, ಹೀಗೆ ಹಾಯಾಗಿದ್ದು ಕೊಂಡು ಅದನ್ನು ಅಸಡ್ಡೆ ಮಾಡಬೇಕು. ಅದಕ್ಕೆ ಲಕ್ಷ್ಯಗೊಡುವುದೇ ಸಂಸಾರ, ಅದನ್ನು ಅಲಕ್ಷಿಸು ವುದೇ ವಿಹಾರ. ಎಂಥ ಹುಡುಗಿ, ಎಂಥ ಮೋಸ.

ಹೀಗೆ ಅಶ್ವತ್ಥ ಮಾತು ಮುಗಿಸಿದ. ''ಒಳ್ಳೆಯ ಪ್ರಯಾಣ ನಿಮ್ಮದು'' ಎಂದು ರಾಧಾಕೃಷ್ಣ ಗಟ್ಟಿಯಾಗಿ ನಕ್ಕ. ಶಾಮ ಮತ್ತು ರಾಘವ ಇದಕ್ಕೆ ಪಕ್ಕವಾದ್ಯ ಬಾರಿಸಿದರು. ನಾನು ಸುಮ್ಮನಿದ್ದೆ. ದಿಟವಾಗಿ ಬೆರಗುಗೊಳಿಸುವಂಥ ಅನುಭವ ಅಶ್ವತ್ಥನದು. ಅಷ್ಟುಹೊತ್ತಿಗೆ ಫಲಾಹಾರ ಸಾಮಗ್ರಿ ಗಳೊಡನೆ ಇನ್ನೊಂದು ತಂಬಿಗೆ ತುಂಬ ಕಾಫಿ, ಶಾಸ್ತ್ರಿಗಳ ಮನೆಯಿಂದ ನಮ್ಮೆಡೆಗೆ ಬರುತ್ತಿತ್ತು. ನಮಗೆಲ್ಲಾ ಅದರ ಮೇಲೆ ಗಮನವಾಯಿತು. ಶಾಸ್ತ್ರಿಗಳು, ''ಆ ಭದ್ರಕಾಳಿಯ ಕಡೆಗಣ್ಣು ಈತನ ಎದೆಯ ಮೇಲೆ ಕುಣಿದು, ಇವನ ಮನಸ್ಸನ್ನು ಸ್ವಲ್ಪಕಾಲ ಗೋಜ ಗೋಜಾಗಿ ಮಾಡಿತು'' ಎನ್ನುತ್ತಾ ನಮ್ಮೆಡೆಗೆ ಸ್ಮಿತಪೂರ್ವಕವಾದ ದೃಷ್ಟಿಯನ್ನು ಬೀರಿದರು. ಅಶ್ವತ್ಥನಿಗೆ ಇದು ಕೇಳಿಸಲೇ ಇಲ್ಲ. ಆತ ಕುರ್ಚಿಯ ಹಿಂದಕ್ಕೆ ತಲೆಯಿಟ್ಟು, ಬಾನನ್ನು ನಿಟ್ಟಿಸುತ್ತಾ, ನಿದ್ದೆಯಲ್ಲಿರುವವನು ಕನವರಿಸುವಂತೆ, 'ಅದು ಸಂಸಾರ ಇದು ವಿಹಾರ' ಎನ್ನುತ್ತಲೇ ಇದ್ದ.



('ಧ್ವಜರಕ್ಷಣೆ' ಕಥಾ ಸಂಗ್ರಹದಿಂದ - ಕಾವ್ಯಾಲಯ ಪ್ರಕಾಶನ, ಮೈಸೂರು.)

ಇನ್ನೇನು, ನನ್ನ ಯಮುನೆ ಬರುವ ಹೊತ್ತಾಯಿತು. ಬಹುದೂರದಿಂದೆಲ್ಲೋ ಅವಳ ಪೈಜಣದ ಮಿದು ದನಿ, ಕಿವಿಯ ಕದವನ್ನು ತಟ್ಟುತ್ತಿದೆ. ನನ್ನವರೆಗೆ ಅವಳ ಪಯಣ ಗಂಗೆಯ ಕೈ ಹಿಡಿದೇ. ಒಮ್ಮೆ ನನ್ನ ಕರೆ ಕೇಳಿತೋ, ಎಲ್ಲ ಸಾಂಗತ್ಯದ, ಬಂಧನದ ಹಂಗು ತೊರೆದು, ತನ್ನ ಸಾದುಗಪ್ಪಿನ ನೀಳ ಮೈಯನ್ನು ಬಳುಕಿಸುತ್ತ ಕುಣಿತದ ನಡಿಗೆಯಲ್ಲಿ ನನ್ನತ್ತ ಧಾವಿಸುವವಳೇ. ಎಲ್ಲರಂತಲ್ಲ ನನ್ನ ಈ ಯಮುನೆ. ಗಂಗೆಯ ಗಾಂಭೀರ್ಯ, ಗೋದಾವರಿಯ ಲಜ್ಜೆ, ನರ್ಮದೆಯ ಶೀಘ್ರಕೋಪ, ಸಿಂಧುವಿನ ಶಾಲೀನ್ಯ, ಕಾವೇರಿಯ ಲಾಲಿತ್ಯಗಳನ್ನೆಲ್ಲ ಇಷ್ಟಿಷ್ಟು ಸಂಗ್ರಹಿಸಿಕೊಂಡಿರುವ ಪೂರ್ಣ ಪ್ರಮಾಣದ ಹೆಣ್ಣು ಆಕೆ. ಹಾಗೆಂದೇ ನನಗೆ ಅವಳನ್ನು ಕಂಡರೆ ಆದರ ಮಿಶ್ರಿತ ಒಲವು. ಭಯ ಬೆರೆತ ಗೌರವ.

ನಮ್ಮ ಸಾಹಚರ್ಯಕ್ಕೇನೋ ಯುಗ ಯುಗಗಳ ಇತಿಹಾಸವಿದೆ. ಹುಟ್ಟಿದ್ದೂ ಸಾವಿರದ ಈ ಯಾತ್ರೆಯಲ್ಲಿ, ಒಮ್ಮೆಯಾದರೂ ಅವಳು 'ಹೀಗೆ ಇರುತ್ತಾಳೆ' ಎಂದು ಊಹಿಸಿಕೊಳ್ಳುವುದು ನನ್ನಿಂದಾಗಿಲ್ಲ. ಅವಳು ಪ್ರಕೃತಿ. ಮುಚ್ಚುಮರೆಯಿಲ್ಲದೆ, ಕ್ರಿಯೆಗೆ ಪ್ರತಿರೋಧವನ್ನೋ, ಅಂಗೀಕಾರವನ್ನೋ ತೋರಬಲ್ಲ ಪ್ರಕೃತಿ. ಅವಳ ಸಾನಿಧ್ಯವೆಂದರೆ, ಒಳ ಹೊರಗುಗಳು ಶುಚಿಯಾದುವೆಂದೇ ಅರ್ಥ. ಯಾವ ಅಂಕೆಗೂ ಸಿಕ್ಕದ ನನ್ನ ಉಕ್ಕು-ಸೊಕ್ಕುಗಳನ್ನು ಶಮನಗೊಳಿಸುತ್ತಾಳೆಂದೇ, ತೀವ್ರ ಸಂವೇದನೆಯ ಕ್ಷಣಗಳಲ್ಲಿ ನಾನು ಅವಳನ್ನು 'ಶಾಂತೀ' ಎಂದೇ ಕರೆಯುತ್ತೇನೆ. ಆ ಕ್ಷಣವನ್ನು ಅವಳು ಆಸ್ವಾದಿಸುವ ರೀತಿ ನೋಡಬೇಕು. ಇಷ್ಟಗಲ ಕಣ್ಣುಗಳನ್ನು ತುಂಬುವ ಭಾವ. ತುಳುಕಬಾರದೆಂದೋ ಏನೋ, ಅವುಗಳನ್ನು ಅರ್ಧ ಮುಚ್ಚಿ ಧ್ಯಾನಸ್ಥಳಾದಳೆಂದರೆ ಜೀವಂತ ಶಿಲ್ಪವೇ.

ನನ್ನ ಯಮುನೆ, ಬರಿಗೈಯಲ್ಲೆಂದೂ ಬಂದವಳಲ್ಲ. ಯೋಜನಗಳಾಚೆಯ ಯಮುನೋತ್ರಿಯಿಂದ ಹೊರಟು, ನಿಧ ನಿಧಾನಕ್ಕೆ ತನ್ನ ಪಾತ್ರವನ್ನು ವಿಸ್ತರಿಸಿಕೊಳ್ಳುತ್ತ, ಇಕ್ಕೆಲದ ನೆಲಕ್ಕೆ ಸಾರವನ್ನುಣಿಸುತ್ತ, ತಾನು ಸವರುವ ದಂಡೆಗಳ ಸಾರಕ್ಕೆ ಒಡಲೊಳಗೆ ಆಶ್ರಯ ನೀಡುತ್ತ ಬರುವ ಅವಳು, ಬೊಗಸೆ ತುಂಬ ಚಿತ್ರ-ವಿಚಿತ್ರವಾದ, ರೋಚಕವಾದ ಕೌತುಕದ ಕಥೆಗಳನ್ನು ತುಂಬಿ ತರುತ್ತಾಳೆ, ತುಂಬಿ ಬರುತ್ತಾಳೆ.

ಆ ಕಥೆಗಳನ್ನು ಅವಳು ಹೇಳುವ ರೀತಿಯೂ ಸೊಗಸು, ಬಲು ಸೊಗಸು. ಆ ಕಥೆಗಳು ಹೆಚ್ಚು ಆಕರ್ಷಕವೋ, ಅಲ್ಲ ಅವಳು ಹಾವ, ಭಾವ, ಬೆಡಗು, ಬಿನ್ನಾಣ, ಸಿಟ್ಟು, ಸೆಡವುಗಳ ಪಾಕದಲ್ಲಿ ಅವುಗಳನ್ನು ತೋಯಿಸುವ ರೀತಿ ಚೆಂದವೋ ನಾನು ಹೇಳಲಾರೆ. ಹಾಗೆಂದು ಅವಳ ಕಥೆಗಳ ಮಧ್ಯೆ ಅಪ್ಪಿ ತಪ್ಪಿ ಏನಾದರೂ ಕೊಂಕು ತೆಗೆದೆನೋ; ಇಲ್ಲ,

'ನಾನು ನೋಡುತ್ತಿದ್ದ ಹಾಗೆ, ಆ ಅಜ್ಜ ಬೆರಳ್ಳಿ ಯಿಂದ ಹನ್ನೆರಡು ತುಳಿಗಳನ್ನು ಕೊಂದದ್ದೇ' ಎನ್ನುವಂಥ ಆಕಾಶ ಪುರಾಣಗಳನ್ನು ಗೇಲಿ ಮಾಡಿದೆನೋ, ಕಥೆ ಕೈಲಾಸವಾಯಿತೆಂದೇ ಲೆಕ್ಕ! ಮಾಟವಾದ ತುಟಿಗಳನ್ನು ಬಲವಾಗಿ ಬಿಗಿದು ಕೊಂಡು, ಕಣ್ಣನಲ್ಲಿ ಕೋಪ, ಪ್ರತಿಭಟನೆ, ನೋವು, ನಿರೀಕ್ಷೆಗಳೆಲ್ಲದರ ಮಿಶ್ರಣವನ್ನು ತುಂಬಿಟ್ಟು, ಕಮಲದ ದೇಟನಂಥ ಕೈಗಳನ್ನು ಮೊಣಕಾಲ ಸುತ್ತ ಬಳಸಿ, ತಲೆಯಾನಿಸಿ ಕುಳಿತಳೆಂದರೆ... ಅನಂತರ ನನ್ನ ಬತ್ತಳಿಕೆಯೆಲ್ಲ ಬಯಲಾಗಿ, ಮೂವತ್ತಮೂರು ಕೋಟಿ ದೇವತೆಗಳೂ ಸಾಕ್ಷಿಗಳಾಗಿ ಬಂದರೇ ಅವಳ ಕಥೆಯ ಕಡಿದ ಕೊಂಡಿಗಳಿಗೆ ಮಿಲನ ಯೋಗ. ಇಲ್ಲವೋ ನನಗೆ ಏಕಾದಶಿ ವ್ರತ. ಸುತ್ತ ಮೌನದ ಸಾಮ್ರಾಜ್ಯ.

ಅವಳ ಲಕ್ಷ್ಯವನ್ನೇನೋ ನಿಯಂತ್ರಿಸಬಲ್ಲೆ. ಆದರೆ, ಅಸ್ತಿತ್ವವನ್ನು ಕರಗಿಸಿಕೊಳ್ಳುವುದರಲ್ಲೇ ಅಸ್ತಿತ್ವವನ್ನು ಕಂಡುಕೊಳ್ಳುವ, ಅಂತರಂಗದ ಗುಡಿ ಯೊಳಗೆ ಬೇಕಾದಾಗ ಮಾತ್ರವೇ ನನ್ನನ್ನೂ ಕೂಡಾ, ಬರಮಾಡಿಕೊಳ್ಳುವ ಅವಳೊಳಗಿನ ಸತ್ವವನ್ನು ಮುಟ್ಟಲಾರೆ.

ನುಣ್ಣನೆಯ ಮರಳು ಹಾಸಿನ ಉದ್ದವನ್ನು ಅಳೆಯುತ್ತಾ, ಚಿಕ್ಕೆ ಚಂದ್ರಮರ ಝೂಟಾಟಕ್ಕೆ ಕಣ್ಣು ಮಿಟುಕಿಸುತ್ತಾ, ದಿಗಂತದಂಚಿನಲ್ಲಿ ಮೂಡುವ ಕೆಂಪಿಗೆ ಕಾಯುತ್ತಾ, ನನ್ನ ಯಮುನೆ ಸಿಂಚಿಸುವ ಔದಾರ್ಯದ ನೀರ್ಪನಿಗಳಿಗಾಗಿಯೇ ನನ್ನ ಬದುಕಿನ ಏಕತಾನತೆಯೂ ಎದೆ ತೆರೆದು ಕಾಯುತ್ತಿರು ವುದು ಸುಳ್ಳಲ್ಲವಲ್ಲ. ಈ ಚಕ್ರಾವರ್ತದಲ್ಲಿ ನಾವು ತೊಡಗಿಕೊಳ್ಳುವ ವಾಗ್ವಾದಗಳೆಷ್ಟು, ದೂಷಣೆ-ಪ್ರಶಂಸೆಗಳೆಷ್ಟು, ಕಟ್ಟುವ, ಒಡೆಯುವ, ಮತ್ತೆ ಕಟ್ಟುವ ಕ್ರಿಯೆಗಳೆಷ್ಟು, ಪ್ರಾಯಶಃ, ನಿಯತಿಯೂ ಲೆಕ್ಕಪಿಡಲಾರದೆ ಕೈ ಚೆಲ್ಲುವಷ್ಟು...

ಅದೆಲ್ಲ ಸರಿ, ಈ ವೇಳೆಗಾಗಲೇ ಅವಳು ಬಂದು ತಲುಪಿರಬೇಕಾಗಿತ್ತಲ್ಲ. ದಾರಿಯ ಯಾವ ಅಡಚಣೆಗೆ, ಅವಳ ಧಾವಂತಕ್ಕೆ ಎದುರಾಗುವ



ಶಕ್ತಿಯಿದೆ? ಹೋ... ಬರುತ್ತಾ ಇದ್ದಾಳೆ. ಆದರೆ, ಇದೇನು, ತನ್ನ ನಡಿಗೆಯ ಪಲುಕನ್ನ ಎಲ್ಲಿ ಕಳೆದು ಕೊಂಡುಬಿಟ್ಟಿದ್ದಾಳೆ? ಹತ್ತಿರ ಬಂದ ನರ್ಮದೆಯ ಕಣ್ಣುಗಳಲ್ಲಿ, ಮೊದಲ ಬಾರಿಗೆ ಮರಣಭಯದ ಮಂಜುಗಡ್ಡೆಯಿದೆಯಲ್ಲ. ಏನಾಗಿದೆ ಇವಳಿಗೆ?

''ನನ್ನ ಯಮುನೆಗೆ ನನ್ನ ಸಹವಾಸವೇ ಬೇಸರಾಗಿ, ತನ್ನ ಪ್ರತಿಕೃತಿಯನ್ನೇನಾದರೂ ಇಲ್ಲಿ ಕಳಿಸಿಲ್ಲವಲ್ಲ'', ಬಿಸಿಯುಸಿರಿಗೆ ಕೀಟಲೆ ಬೆರೆಸಿ ಕಿವಿಗೆ ತಾಗಿಸಿದರೂ ಅದು ಕೆಂಪು ತಿರುಗುತ್ತಿಲ್ಲ. ಹೋಗಲಿ, ಮೌನವೇ ಮಾತಾಡಲೆಂದು ಸುಮ್ಮನಾಗಿ ಬಿಟ್ಟೆ. ಕಾಲವೂ ತಡೆದು ನಿಂತು ಕಿವಿಯೊಡ್ಡುತ್ತಿತ್ತು. ನಿಧಾನಕ್ಕೆ, ಯಮುನೆ ಬಿತ್ತಿಟ್ಟ ಸಂವೇದನೆಗಳಿಗೆ ಮಾತುಗಳು ಬರತೊಡಗಿದವು.



"ಸಾಗರ, ನಿನಗೆ ಗೊತ್ತಿರಲಾರದು. ಉಪದಾನವಿಯು ಇಂದು ನನ್ನಾಳದಲ್ಲಿ ಮುಳುಗಿಬಿಟ್ಟಳು."

ತಡೆಯಲಾರದ ನಗೆಯ ಹೊನಲು ನನ್ನ ಮುಖವನ್ನೆಲ್ಲ ಬೆಳಗಿಸಿಬಿಟ್ಟಿರಬೇಕು. ಅದೇ ನಗುವಿನಲ್ಲಿ ಮಿಂದ ಸ್ವರದಲ್ಲಿ ಛೇಡಿಸಿದೆ.

"ಇದೇನು ಹುಚ್ಚೇ ನಿನಗೆ ಯಮುನೆ? ನಿತ್ಯ ಹರಿಯುವುದನ್ನು, ಜೀವಕ್ಕೆ ಆಶ್ರಯ ಕೊಡುವುದನ್ನು, ಜೀವ ತೆಗೆಯುವುದನ್ನೂ ಒಂದೇ ಕರ್ತವ್ಯದ ಕಕ್ಷೆಯಲ್ಲಿ ಕಂಡವಳು ನೀನು. 'ಸ್ವತಃ ಉಸಿರಾಡದವರ ಉಸಿರು ಕಟ್ಟಿಸುವುದೇ ನನ್ನ ಸ್ವಭಾವ. ಸೃಷ್ಟಿಯ ಆಶಯ, ನನಗೆ ಆದೇಶ' ಎಂದೆಲ್ಲ ಬುರುಡೆ ಬಿಡುತ್ತಲೇ ಇರುತ್ತಿದ್ದಿಯಲ್ಲೇ. ಈ ತೀರಾ ಸಾಮಾನ್ಯವಾದ ಘಟನೆ, ಯಾರು, ಉಪದಾನವಿಯೆಂದೆಯ? ಅದೇನು ಹೆಸರೇ ಅದು, ಅವಲಕ್ಷಣ. ಮುಳುಗಿ ಜೀವಬಿಟ್ಟಳೆಂದು ನನ್ನನ್ನೂ ಮುಳುಗಿಸುತ್ತೀಯೇನೇ"... ನಾನು ಹೇಳುತ್ತಿರುವುದನ್ನು ಅವಳು ಗ್ರಹಿಸುತ್ತಿಲ್ಲವೆನ್ನುವ ಅನುಮಾನ ನನ್ನ ನಾಲಿಗೆಯನ್ನು ತಡೆಯಿತು.

ಯಮುನೆಯು ಸಹಜ, ಸಮಸ್ಥಿತಿಗೆ ಮರಳುತ್ತಿದ್ದಾಳೇನೋ. ಅವಳ ಕೆನ್ನೆಗಳಲ್ಲಿರದಿದ್ದ ರಾಗ ರಂಗುಗಳ ಸಂಚಾರ ಕಾಣಿಸಿ, ನನಗೆ ಸ್ವಲ್ಪ ಹಗುರೆನಿಸಿತು. ಅವಳ ಪಕ್ಕಕ್ಕೆ ಸರಿದು, ಕೊರೆಯುತ್ತಿದ್ದ ಅವಳ ಕೈಗಳಿಗೆ ನನ್ನ ಕೈಗಳ ಬಿಸುಪನ್ನು ದಾಟಿಸತೊಡಗಿದೆ. ಆ ಶಾಖವನ್ನು ಹೀರಿಕೊಂಡ ಅವಳ ಮೈ ಬಿಸಿಯೇರತೊಡಗಿದಂತೆ, ಹರಳುಗಟ್ಟಿದ ಭಾವಗಳೂ ಹರಿವನ್ನು ಕಾಣತೊಡಗಿದುವು. ನನ್ನ ಮೈಯೊರಗಿ ಜೂಗರಿಸುತ್ತ, ತಲೆಕೂದಲುಗಳ ಮೇಲೆ ಬೆರಳಾಡಿಸುತ್ತ, ಉಪದಾನವಿಯೆಂದಳಲ್ಲ, ಅವಳ ನೆನಪು ನೇಯ್ದ ಚಿತ್ರವನ್ನು ನನ್ನ ಮುಂದೆ ಬಿಡಿಸತೊಡಗಿದಳು, ನನ್ನ ಯಮುನೆ.

"ನೀನು ಹೇಳುವುದು ನಿಜ, ಸಾಗರ. ಉಪದಾನವಿಯೆನ್ನುವ ಹೆಸರನ್ನು ಅವರು ಯಾರೂ ಇಷ್ಟಪಟ್ಟಿರಲಿಲ್ಲ. ಅದಕ್ಕೆ ಅವರು ಅವಳನ್ನು 'ಜಾಗೃತಿ'ಯೆಂದು ಕರೆದರು. ಆದರೆ ಪಾಪ, ಅವಳಿಗೆ ಜಾಗೃತಿಯೆನ್ನುವುದು ಆಗಲೇ ಇಲ್ಲ..." ಮೃದುವಾಗುತ್ತ ಬಂದ ಸ್ವರ, ಗಾಢ ಪಿಸುಗುಟ್ಟುವಿಕೆಯಾಗಿ, ಕೇಳಿಸದಂತಾದಾಗ, ನಾನು ಎಚ್ಚೆತ್ತೆ. ಇವಳನ್ನು ಹೀಗೇ ಬಿಟ್ಟರೆ, ದೊರೆತಿರುವ ಅಲ್ಪ ಅವಕಾಶವನ್ನೂ ಕಳೆದ ಕಾಲದ ಮೊತ್ತಕ್ಕೆ ಸೇರಿಸಿಬಿಡುತ್ತಾಳೆ. ದಿಗಂತದಂಚಿನ ಕೆಂಪು ಕಂಡೊಡನೆ, ನನಗೆ ನನ್ನ ಕರ್ತವ್ಯಗಳಿವೆ. ಯಮುನೆಯೂ ಸ್ವಂತದ ಪಾತ್ರವನ್ನ ಹುಡುಕುವ



ಹುಂಬ ಹಂಬಲದೊಂದಿಗೆ ಮರಳುತ್ತಾಳೆ. ಈ ತುದಿ ಮೊದಲಿಲ್ಲದ ಪರಿಭ್ರಮಣದಲ್ಲಿ ಎಲ್ಲೋ ಕಾಣುವ ಜೀವ ಸಂಚಾರದ ಕ್ಷಣಗಳನ್ನು ಕೈಯಾರೆ ಹೊಸಕಿ ಹಾಕಬೇಕೇಕೆ?

''ಯಾರು ಕರೆದರು ಯಮುನೆ?'', ನನ್ನ ಪ್ರಶ್ನೆ ನಿಂತಿದ್ದ ಮಾತಿನ ಓಘಕ್ಕೆ ಚಾಲನೆ ನೀಡಿದಂತಿದೆ. ''ಅವರೇ, ಚೈತ್ರಾ,ರಾಣಿ-ಜ್ಯಾಮಗರು'' ಈ ಯಮುನೆಯ ರೀತಿಯೇ ಹಾಗೆ. ಅವಳು ಯಾವುದೋ ಒಂದು ಬಿಂದುವಿನಲ್ಲಿ ನಿಂತು, ಹಿಂದೆ ಮುಂದೆ ನೋಡುತ್ತಾ ಮಾತನಾಡುತ್ತಿರುತ್ತಾಳೆ. ಅದನ್ನು ಅರ್ಥಮಾಡಿಕೊಳ್ಳಲು ನಾನು ಹರಸಾಹಸ ಪಡಬೇಕು. ಈಗೀಗ ಸ್ವಲ್ಪ ವಾಸಿ. ಅವಳ ನಾಡಿ ಮಿಡಿತದ ಗತಿ ನನಗೆ ಅಷ್ಟೋ ಇಷ್ಟೋ ಪರಿಚಿತವಾಗಿದೆ. ಮೊದಮೊದಲು ... ಅಯ್ಯಪ್ಪ, ನೆನೆಯದಿದ್ದರೇ ವಾಸಿ!

''ಉಪದಾನವಿಯು ಕೋಶಾವಸ್ಥೆಯಲ್ಲಿಯೇ ಬದುಕಿದಳು. ನಿನಗೆ ಗೊತ್ತೇ, ಸಾಗರ'', ಗ್ರಹಚಾರವೇ, ನನಗೆ ಹೇಗೆ ಗೊತ್ತಿರುವುದು? ಹೇಳಿಕೇಳಿ ನನ್ನ ಚಲನಶೀಲನೆನ್ನುವುದು ಒಂದು ಭ್ರಮೆ. ನನಗೆ ಗೊತ್ತಿರುವುದು ಅದೇ ತುಂಡು ಆಕಾಶ, ಅದೇ ನೆಲದಾಳ. ಅದೇ ಜೀವಸಂಕುಲ. ಯಮುನೆಗಾದರೋ ಉದ್ದುದ್ದ ಭೂಭಾಗಗಳ ಪರಿಚಯ, ಮೈ ತುಂಬುವ ಅನುಭವಗಳ ಹರವು. ಅವಳೇ ಹೇಳಲಿ.

''ಈ ನೆನಪು ಅಷ್ಟಪಾದದ ಚಿಹ್ನವಿದ್ದಂತೆ. ನೋವು ಮಾಯಬಹುದು, ಆದರೆ ಚಿಹ್ನೆ ಮಾಸುತ್ತದೆಯೇ ಹೇಳು. ಕಾಲ, ನೆನಪಿನ ಮೇಲೆ ತೆರೆಯನ್ನು ನೇಯಬಹುದು. ಆದರೆ ಅದನ್ನ, ಹರಿಯುವ ಧಾರೆಯನ್ನು ಮೊಂಡಾಗಿಸುವುದು ಸಾಧ್ಯವೇ?'' ಇವಳು ಯಾವಾಗಲೂ ಹೀಗೆಯೇ ಎಂದೆನಲ್ಲ. ಒಗಟೊಗಟಾಗಿ ಮಾತನಾಡುವುದು. ನಾನು ತಿಳಿಯಲಿಲ್ಲವೆಂಬಂತೆ ಮುಖ ಮಾಡಿದಾಗ, ಸರ್ವಜ್ಞ ಭಾವದಿಂದ ನಗುವುದು, ಜಗತ್ತಿನ ಮಾತೃತ್ವವನ್ನೆಲ್ಲ ಸೂರೆಗೈದವಳಂತೆ ನನ್ನನ್ನು

ಮಡಿಲಿಗೆಳೆದುಕೊಂಡು ಕಚಗುಳಿಯಿಡುವುದು, ನಗೆಯ ಅಬ್ಬರದಲ್ಲಿ ಕೊಚ್ಚಿಹೋಗುವುದು... ಹಾಗೆ ಹೇಳಿ ಬದುಕಲುಂಟೇ!

ನಿದ್ರೆಯಲ್ಲಿ ಮಾತಾಡುವವಳಂತೆ, ತಗ್ಗಿದ ಸ್ವರದಲ್ಲಿ ಯಮುನೆ ಮುಂದುವರೆಸಿದಳು.

ಇಲ್ಲಿಂದ ಬಹು ದೂರದ ಪ್ರದೇಶ. ಇನ್ನೇನು ನಸುಕು ಹರಿಯಲಿತ್ತು. ಗಂಗೆಯೊಂದಿಗಿನ ನನ್ನ ಪಯಣದ ಮುಂದೆ ಬಹುದೂರದ ಹಾದಿ ಹಾಸಿ ಬಿದ್ದಿತ್ತು. ಆಗ, ಅಲ್ಲಿ, ಮರಳ ದಂಡೆಯಲ್ಲಿ ಕೀಲಿಸಿಟ್ಟ ಒಂದು ಚಿತ್ರ. ಒಂದು ಕ್ಷಣ ಓಟವನ್ನು ಮರೆತು ಅತ್ತ ನೋಡಿದೆ. ಅಲ್ಲಿ ಜಾಗೃತಿ ನಿಂತಿದ್ದಳು. ಅವಳ ಮುಂದೆ, ನೆನಪುಗಳ ಮೆರವಣಿಗೆ. ಸ್ತಬ್ಧ ಚಿತ್ರಗಳ ಸಾಲು ಸಾಲು. ನೋಡುತ್ತಿದ್ದ ನನಗೂ ಮೈ ಮರವೆ. ಮತ್ತೆ ನಾನು ಮುಂದಡಿಯಿಡಲಾರದವಳಾದೆ. ನಾನೂ ನಿಂತು ಬಿಟ್ಟೆ, ಸಾಗರ. ನಾನು ಕಂಡುದನ್ನೇ ನಿನಗೆ ಕಾಣಿಸುತ್ತೇನೆ. ನನ್ನ ಕಣ್ಣುಗಳ ಮೂಲಕ ಒಳಗಿಣು ಕುವ ನೀನು, ನಿನ್ನ ಕ್ರಾಂತದೃಷ್ಟಿ, ಭವಿಷ್ಯವಾದಿತ್ವ ಗಳೂ ತೋರಿಸಲಾರದ್ದನ್ನು ನೋಡುವೆಯಂತೆ.''

''ಇದು ನೋಡು, ಮೊದಲ ಚಿತ್ರ. ಇದೊಂದು ಪುಟ್ಟ ರಾಜ್ಯ. ಹೆಸರೇನಾದರೂ ನೀನೇ ಇಟ್ಟುಕೋ. ಇವರು ಅಲ್ಲಿಯ ರಾಜದಂಪತಿ. ಅವರೊಂದಿಗೆ ಪ್ರೀತಿಯ ಧಾರೆಯೆರೆದು ಮುಗು ಳೊಡೆಯಲೆಂದು ಕಾಯುತ್ತಿರುವ ಮಗಳು, ಉಪದಾನವಿ; ಎಳೆಪಲ್ಲವ. ಬಾಲ್ಯಕ್ಕೆ ವಿದಾಯ ಹೇಳಿದೊಡನೆ ಅವಳ ಮೈ ತುಂಬುತ್ತೇನೆಂದು ತಡೆದಿರುವ ಯೌವನದ ತನಿರಸದ ದಾರಿ ನೋಡುತ್ತಿರುವ ಆಕೆ ಇನ್ನೂ ದೋರೆಗಾಯಿ.

ಇಲ್ಲಿ, ಈ ಕಡೆ, ಅದರ ಪಕ್ಕದ ಚಿತ್ರವನ್ನು ನೋಡು. ತುಂಡು ನೆಲಕ್ಕಾಗಿ ಕಾದಾಡುತ್ತಿರುವ ಉಪದಾನವಿಯ ತಂದೆ, ಮತ್ತು ಯಾದವ ನೃಪತಿ ಜ್ಯಾಮಗರು ಕಾಣುತ್ತಾರೇನು? ನೋಡು, ನೋಡು, ಸಾಗರ. ಜ್ಯಾಮಗನ ಕೈ ಮೇಲಾಗು ತ್ತಿದ್ದಂತೆ, ಉಪದಾನವಿಯ ತಂದೆಯ ತಲೆ ನೆಲಕ್ಕೆ ಉರುಳುತ್ತಿರುವುದನ್ನು...

ಅದರ ಬದಿಯ ಚಿತ್ರವನ್ನು ನೋಡು. ''ಯುದ್ಧದಲ್ಲಿ ಸೋತ ರಾಜನ ಕನ್ಯೆ, ನನ್ನ ಸೊತ್ತೇ ಆಗಿದ್ದಾಳೆ. ಅವಳನ್ನು ನಾನು ಕರೆದೊಯ್ಯು ತ್ತಿದ್ದೇನೆ'' ಎಂದು ಘೋಷಿಸುತ್ತಿದ್ದಾನೆ, ಜ್ಯಾಮಗ. ರಾಜಸ್ವಕ್ಕೆ ಎದುರಾಡಿದವರುಂಟೇ? ಉಪದಾನ ವಿಯ ಹರಿಗೆಡಿದ ನಾವೆಗೆ ಬಿರುಗಾಳಿ ಬೀಸಿದ್ದೇ ದಿಕ್ಕಾಗಿತ್ತು.

''ಏಯ್, ಸಾಗರ ತೂಕಡಿಸುತ್ತಿದ್ದೀಯಾ?'', ಯಮುನೆ ಬಲವಾಗಿ ಕುಲುಕಿಸಿದಾಗ ನನ್ನ ಮಂಪರಿನಿಂದ ಹೊರಬಂದೆ. ಇದನ್ನ ಯಾವ ಮಹಾಸಂಗತಿಯೆಂದು ಹೇಳಲು ಹೊರಟಿದ್ದಾಳೆ. ಇವಳು. ಈ ರೂಢಿ ಇಂದು ನಿನ್ನೆಯದಲ್ಲ ನನ್ನ ಪ್ರಜ್ಞೆ ಎಚ್ಚತ್ತಾಗಿನಿಂದ ಕಂಡು ಕೇಳುತ್ತಿರುವ ವಿಚಾರವೇ. ಅವಳೋ, ಅವಳ ಮನೋ ವೃತ್ತಿಯೋ, ಒಂದೂ ಅರ್ಥವೇ ಆಗುವುದಿಲ್ಲಪ್ಪ. ಆದರೆ, ಪೂರ್ವಾನುಭವದ ಭಯದಿಂದ ನನ್ನ ನಾಲಿಗೆ ನುಡಿದುದೇ ಬೇರೆ. ''ಇಲ್ಲಿಲ್ಲ ಯಮುನಾ, ನಿನ್ನ ಜಾಗೃತಿಯ ಕಥೆ ತುಂಬ ಕುತೂಹಲ ಕರವಾಗಿದೆ. ಮುಂದೇನಾಯಿತು ಹೇಳಲ್ಲ''?

ಇಲ್ಲದ ಆಸಕ್ತಿಯನ್ನು ಸ್ವರದಲ್ಲಿ ತುಂಬಿಸಿ ಹೇಳಿದೆ. ಎಂದಿನಂತಾಗಿದ್ದರೆ, ಯಮುನೆಗೆ ನನ್ನ ಕಪಟ ತಿಳಿದುಬಿಡುತ್ತಿತ್ತು. ಇಂದಿನ ಚೋದ್ಯವೇ ಬೇರೆ. ಬೇರೆ ಗತಿಯೇ ಇಲ್ಲ. ಅವಳು ಹೇಳುವುದನ್ನೆಲ್ಲ ಕೇಳಿದರೇ ಮುಕ್ತಿ.

'ಹಾಗೆ ನೋಡಿದರೆ', ನನ್ನ ಮುಖವನ್ನೇ ಪರೀಕ್ಷಿಸುವವಳಂತೆ ನೋಡುತ್ತಾ, ಯಮುನೆ ಮತ್ತೆ ಸುರು ಹಚ್ಚಿದಳು.

''ಹದಿನಾಲ್ಕರ ಉಪದಾನವಿಗೆ ಮೂವತ್ತು ವಸಂತಗಳನ್ನೂ ಕಾಣದ ಜ್ಯಾಮಗನ ವಶವಾಗು ವುದರಲ್ಲಿ ಅಂಥ ಹಿಂದೆಗೆತವಿರಲಿಲ್ಲವೋ ಏನೋ. ಅವಳ ಮುಖದಲ್ಲಿ, ಯಾದವ ಸಾಮ್ರಾಟನ ಕೈ ಹಿಡಿಯುವ 'ಅಹಂ' ಗೆರೆ ಕೊರೆದಂತಿದೆ ಯಲ್ಲವೆ? ಇದರಲ್ಲಿ ಹೊಸತೇನೂ ಇಲ್ಲ ಬಿಡು.

ಬಲಿಷ್ಠ ಕೈಗಳು ಜಯಗಳಿಸುವುದೂ, ಹೆಣ್ಣು, ಸಂಪತ್ತಿನ ಭಾಗವಾಗುವುದೂ ನಮ್ಮಲ್ಲಿ ಅನೂಚಾನವಾಗಿ ನಡೆದುಕೊಂಡುಬಂದ ಪದ್ಧತಿಯೇ. ಆದರೆ, ಉಪದಾನವಿಯ ಕಥೆಗೆ ಅಷ್ಟು ಸರಳವಾದ ನಡೆಯಿದೆಯೆಂದುಕೊಂಡರೆ ಮಾತ್ರ ನೀನು ಮೋಸ ಹೋಗುತ್ತೀಯೇ.''

ಹೀಗೆ ಕೌತುಕದ ಕೆಂಡಕ್ಕೆ ಗಾಳಿ ಯೂದುತ್ತಲೇ ಇರುವುದು ಯಮುನೆಯ ಸ್ವಭಾವವೇ ಆಗಿರುವುದರಿಂದ, ಅವಳ ಈ ಹೇಳಿಕೆಯನ್ನೂ ನಾನು ತೇಲಿಸಿಬಿಟ್ಟೆ.

''ಈ ಮಾಲಿಕೆಯ ಮುಂದಿನ ಚಿತ್ರ ಕಾಣುತ್ತಿದೆಯಾ? ಜ್ಯಾಮಗನಾದರೂ ನಿರಂಕುಶ ನಲ್ಲ. ಅವನ ಹುಚ್ಚು ಬಯಕೆಗಳಿಗೆ ಕಡಿವಾಣ ವಾದವಳು, ಉಚ್ಛೃಂಖಲತೆಗೆ ಅಂಕುಶವಾದವಳು ಅವನ ಪಟ್ಟದ ರಾಣಿ, ಚೈತ್ರಾ. ಅವಳು ತನ್ನೊಂದಿಗೆ ತಂದ ಬೊಕ್ಕಸದ ಹಿರಿ ಹೊರೆ, ಸದಾ ಅವಳ ಬೆನ್ನು ಕಾಯುವ ಬಲಾಢ್ಯ ತಂದೆಯ ಕಣ್ಗಾಲಿ ಅವಳೆಂಬ ಎಚ್ಚರಗಳು ಅವನನ್ನು ಎರಡೂ ಬದಿಗಳಿಂದ ಜಗ್ಗುತ್ತಿರುತ್ತವೆ. ಅವಳ ಕಣ್ಣುಗಳ ನೇರ, ವಕ್ರ, ತೀಕ್ಷ್ಣ ನೋಟಗಳಿಗೆ ಅರ್ಥ ಹೊಂದಿಸುವುದರಲ್ಲಿ, ಅವಳ ನಡಿಗೆಯ ಬೀಸು, ಲಾಸ್ಯ, ಬಳುಕು, ವೇಗಗಳೊಂದಿಗೆ ಸಮೀಕರಣ ಸಾಧಿಸುವುದರಲ್ಲಿ ಅವನ ಅಂತಃ ಪುರದ ಬದುಕು ಖಾಲಿಯಾಗುತ್ತಿತ್ತು.

ಅಂಥ ಚೈತ್ರಳ ಮುಂದೆ ಬರುತ್ತಿದ್ದಂತೆ; ಜ್ಯಾಮಗನೊಳಗೆ ಹೆಡೆಯಾಡಿಸುತ್ತಿದ್ದ ಬಯಕೆ ಗಳೆಲ್ಲ ಮುದುಡಿಕೊಳ್ಳುತ್ತಿವೆ. ನೋಡಲ್ಲಿ, 'ಸವತಿ' ಶಬ್ದವನ್ನೇ ದ್ವೇಷಿಸುತ್ತಿದ್ದ ಅವಳ ಮುಂದೆ ಜ್ಯಾಮಗ ಉರುಳಾಡಿಸಿದ ವಾಕ್ಯಗಳಾದರೂ ಎಂಥವು ಕೇಳುತ್ತೀಯಾ? ಅವನ ಸಮಯಸ್ಫೂರ್ತಿ ಮಾಡಿದ ಅನಾಹುತವನ್ನು ನೋಡುತ್ತೀಯಾ?''

ಕೇಳದೆ ಬೇರೇನು ಮಾಡುವಂತಿದ್ದೇನೆ? ಏನು ಹೇಳುತ್ತಾಳೋ ಕೇಳೋಣ.

''ಈ ಹುಡುಗಿ ಸರ್ವಲಕ್ಷಣ ಸಂಪನ್ನೆ ಮಾತ್ರವಲ್ಲ. ಮೃತ್ಯುಂಜಯ ಶಕ್ತಿಯುಳ್ಳವಳು. ನಮ್ಮ ಸೊಸೆಯಾಗಲೆಂದೇ ಕರೆತಂದಿದ್ದೇನೆ'' ಎನ್ನುತ್ತಿದ್ದಾನೆ ಜ್ಯಾಮಗ.

''ಚೈತ್ರಾ, ಕ್ಷತ್ರಿಯಾಣಿಯಾದರೂ ತಾಯಿ. ಎರಡು ವರ್ಷದ ಹಾಲು ಹಸುಳೆ ವಿದರ್ಭನ ತಾಯಿ. ಆ ಎಳೆಯ ಕುಡಿಯ ಆಯುಷ್ಯಕ್ಕೆ ಕಂಟಕ ವಿದೆ ಎನ್ನುವ ಭಯದ ನೆರಳಲ್ಲೇ ಉಸಿರಾಡು ತ್ತಿರುವ, ಅದರ ನಿವಾರಣೆಗಾಗಿ ಹಗಲಿರುಳೂ ಚಿಂತಿಸುತ್ತಿರುವ ತಾಯಿ. ಅವಳ ಸ್ತ್ರೀತ್ವವನ್ನು, ಮಾನವತ್ವವನ್ನು ಅವಳ ತಾಯ್ತನ ಗೆದ್ದುಬಿಟ್ಟಿತು. ವಿದರ್ಭನಿಗಿಂತ ಪೂರಾ ಹನ್ನೆರಡು ವರ್ಷಗಳಷ್ಟು ಮುಂದಿದ್ದ ಉಪದಾನವಿಯ ಕೈಗಳಿಗೆ ಅವನ ಆಯುಃ ಸೂತ್ರಗಳನ್ನು ವರ್ಗಾಯಿಸಿದ ಚೈತ್ರಾ, ಅವಳನ್ನು ಜಾಗೃತಿಯನ್ನಾಗಿ, ತನ್ನ ಪುತ್ರವಧು ವಾಗಿ ಸ್ವೀಕರಿಸಿಬಿಟ್ಟಳು.''

ಕ್ಷಣ ತಡೆದ ಯಮುನೆ, 'ಈಗೇನೆನ್ನು ತ್ತೀಯಾ' ಎನ್ನುವ ಪ್ರಶ್ನೆ ಹೊತ್ತ ಮುಖವನ್ನೆತ್ತಿ ದಳು. ಇದೇನೋ ಹೊಸ ಪರಿಯೇ ಆಯಿತಲ್ಲ. ನನ್ನ ದೃಷ್ಟಿಗೆ ಭವಿಷ್ಯವನ್ನು ಬಗೆಯುವ ಶಕ್ತಿ ಯೇನೋ ಇದೆ. ಆದರೆ, ಹೀಗೆ ಅಸಂಬದ್ಧ ಕಾರಣಗಳಿಗಾಗಿ ಅದನ್ನು ವಿನಿಯೋಗಿಸಬಾರದೆನ್ನುವ ಎಚ್ಚರವೂ ಇದೆ. ಆದರೂ ಕುತೂಹಲ... ಇಲ್ಲ, ದೃಷ್ಟಿ ಹರಿಯುವವರೆಗೂ, ಕಲ್ಪಾಂತದವರೆಗೂ ಇಂಥ ಒಂದು ಸಂಭವವಿದ್ದಂತೆ ಕಾಣುತ್ತಿಲ್ಲ. ಹೋಗಲಿ. ಜಾಗೃತಿಯ ಗತಿ ಏನಾಯಿತೋ.

ಯಮುನೆ ನನ್ನ ಆಲೋಚನೆಯ ಗತಿಯನ್ನು ಮುಖಭಾವದಿಂದಲೇ ಗ್ರಹಿಸಿಬಿಡುತ್ತಾಳೆ. ಆಸಕ್ತಿಯ ಕೇಂದ್ರವನ್ನೇ ಮುಟ್ಟುವವಳಂತೆ ಅವಳು ಮುಂದುವರೆಸುತ್ತಿದ್ದಾಳೆ.

''ಇಲ್ಲಿ ನೋಡು ಸಾಗರ. ವಿದರ್ಭ ಎಷ್ಟು ಮುದ್ದಾದ ಮಗು. ಯಾವ ಕಿನ್ನರ ಲೋಕದ ವಿಹಾರವೋ. ಜೋಡು ಹವಳದ ದಂಡೆ ತುಟಿಯ ಉದ್ದಕ್ಕೂ ಹಾಸಿಕೊಂಡ ನಗೆ ಮುಗುಳು, ಜಾಗೃತಿಯ ತಾಯ್ತನಕ್ಕೂ ಉಕ್ಕು ಬಂದಿರಬೇಕು.

ಆ ಪುಟ್ಟ ಕಂದ, ಅರೆನಿದ್ದೆಯ ಸಮ್ಮೋಹಿನಿಯಲ್ಲಿಯೇ ಸೆರಗು ಜಗ್ಗಿ, 'ಅಮ್ಮಾ' ಎನ್ನುತ್ತಿದೆಯಲ್ಲ. ಜಾಗೃತಿಯ ಮುಖದ ಬಣ್ಣವೆಲ್ಲ ಸೋರಿ ನೆಲ ಸೇರುತ್ತಿರುವುದು ಕಾಣುತ್ತಿದೆಯೇ? ಮುಂದೆಂದೋ ತನ್ನ ಮಗುವಿನ ತಂದೆಯಾಗಲಿರುವ ಶಿಶುವನ್ನು ಮಡಿಲಿನಲ್ಲಾಡಿಸಿ ಬೆಳೆಸಬೇಕಾದ ಘೋರವನ್ನು ನನ್ನಿಂದಂತೂ ನೋಡಲಾಗಲೇ ಇಲ್ಲ, ಸಾಗರ''

''ಅಲ್ಲ ಯಮುನಾ, ಆ ಮಗುವನ್ನು ನೋಡಿಕೊಳ್ಳುವ ತಾಪತ್ರಯ ಅವಳಿಗ್ಯಾಕೆ ಬೇಕಿತ್ತು? ಯಾದವ ದೊರೆಯ ರಾಣಿವಾಸದಲ್ಲಿ ಪ್ರತ್ಯೇಕ ಅಂತಃಪುರಕ್ಕೇನೂ ಕೊರತೆಯಿದ್ದಿರಲಿಕ್ಕಿಲ್ಲವಲ್ಲ?''

ನಾನೂ ಕಥೆಯಲ್ಲಿ ಪಾಲ್ಗೊಳ್ಳುತ್ತಿದ್ದೇನೆಂಬ ನಂಬಿಗೆ ಯಮುನೆಗೂ ಬರಬೇಕು, ನನ್ನ ಕುತೂಹಲವೂ ತಣಿಯಬೇಕೆಂಬಂತೆ ಕೇಳಿದೆ.

''ಇದೇ ಪ್ರಶ್ನೆಯನ್ನು ಜಾಗೃತಿಯೂ ಜ್ಯಾಮಗನ ಮುಂದಿಟ್ಟಿದ್ದಳು. ಅವನ ನಿರ್ಲಿಪ್ತ, ನಿರ್ಲಜ್ಜ ಉತ್ತರವನ್ನು ಕೇಳಿಸಿಕೋ, ಸಾಗರ. ವಿದರ್ಭ ವಯಸ್ಸಿಗೆ ಬರುವವರೆಗೆ ನಿನ್ನನ್ನು ನಮ್ಮ ಕಣ್ಣರಿಕೆಯಲ್ಲಿ ರಕ್ಷಿಸಿಡುವುದು ಹೇಗೆ ನಮ್ಮ ಹೊಣೆಯೋ ಹಾಗೇ, ಕಂಟಕವಿರುವ ಅವನ ಜೀವಕ್ಕೆ ಕಣ್ಗಾವಲಾಗುವುದು ನಿನ್ನ ಸತೀತ್ವದ ಮೊದಲ ಕರ್ತವ್ಯವೇ ಆಗಿದೆ.'' ಈ ನೀತಿ ಸಂಹಿತೆಗಳನ್ನು ಮೀರಲಾರದ ಸಂದಿಗ್ಧ, ಬಂಡೇಳುವ ಮನಸ್ಸುಗಳ ಮಧ್ಯೆ ಜಾಗೃತಿಯ ಹೆಣ್ತನಕ್ಕೆ ಆಯ್ಕೆಯ ಸೌಖ್ಯ, ಗೆಲುವಿನ ರೋಮಾಂಚನ, ಸೋಲಿನ ಸವಾಲುಗಳೆಲ್ಲ ಅಳವಿನಾಚೆಯವುಗಳೇ ಅಲ್ಲವೇ?''

ಈ ಯಮುನೆಯ ಒಣ ವೇದಾಂತ ನನಗಂತೂ ಸುತರಾಂ ಹಿಡಿಸುವುದಿಲ್ಲ. ಏನು ಮಾಡಲಿ? ಅವಳು ಬೇಕೆಂದಾದರೆ, ಅವಳ ಮಿತಿ, ದೌರ್ಬಲ್ಯಗಳೂ ಬೇಕೆಂದೇ ಅರ್ಥವಲ್ಲವೇ?

''ಈ ಯಾತನಾ ಪರ್ವಕ್ಕೆ ಎರಡು ದೀರ್ಘ ದಶಕಗಳಾದಾಗ, ಅದರ ಕೊನೆಯೇ, ಅಲ್ಲ ಇನ್ನೊಂದು ಅಧ್ಯಾಯದ ಮೊದಲ ಪುಟವೋ... ಮೂವತ್ತನಾಲ್ಕರ ಜಾಗೃತಿ, ಹರೆಯ ಜಾರುತ್ತಿದ್ದ ಜಾಗೃತಿ, ಇಪ್ಪತ್ತೆರಡರ, ಯೌವನದ ಸರಹದ್ದನ್ನು ದಾಟಲೋ ಬೇಡವೋ ಎಂದು ಅನುಮಾನಿಸುತ್ತಿದ್ದ ವಿದರ್ಭನ ಕೈ ಹಿಡಿದಳು. ಯಾದವರ 'ಯುವರಾಜ್ಞಿ'ಯಾದಳು. ತನ್ನ ತೋಳ ತೊಟ್ಟಿಲಲ್ಲಿ ಉಯ್ಯಾಲೆಯಾಡುತ್ತ ಬೆಳೆದ ಮಗುವಿನ ಅರ್ಧಾಂಗಿಯಾದಳು. ಶರೀರ, ಮನಸ್ಸುಗಳ ನಿಯಂತ್ರಣವೇ ಬದುಕಿನ ವಿಧಾನವಾಗಿದ್ದ, ಅವುಗಳ ವಿಚ್ಛೇದನವನ್ನು ಎಂದೋ ಸಾಧಿಸಿಕೊಂಡಿದ್ದ ಅವಳು, ಅವನ ಮಗುವಿನ ತಾಯಿಯೂ ಆದಳು.'' ಈ ಪರಿಸ್ಥಿತಿಯನ್ನು ಕಲ್ಪಿಸಿಕೊಳ್ಳುತ್ತಿದ್ದಂತೆ, ನನ್ನೊಳಗೂ ಪ್ರಶ್ನೆಗಳು ಮೊಳೆಯುತ್ತಿದ್ದಾವು, ಅಪ್ರಯತ್ನವಾಗಿಯೇ.

''ಅಲ್ಲ, ವಿದರ್ಭನಾದರೂ ಇದನ್ನು ಹೇಗೆ ಒಪ್ಪಿಕೊಂಡ ಅನ್ನುತ್ತೇನೆ...''

ನನ್ನ ರಾಗವಿನ್ನೂ ಪೂರ್ತಿಯಾಗಿರಲಿಲ್ಲ. ಯಮುನೆಗೆ ನನ್ನ ಪ್ರಶ್ನೆಗೆ ಉತ್ತರವಾಗುವ ಆತುರ.

''ಬುದ್ಧಿ ಬಲಿಯುತ್ತಿದ್ದ ಹಂತದಲ್ಲೇ, ತಾಯಿ, ತಂದೆ, ಅತ್ತೆ, ತಂಗಿ ಸಂಬಂಧ ವಾಚಕಗಳಂತೆಯೇ 'ಪತ್ನಿ' ಉಪಾಧಿಯನ್ನೂ ಆತ ಒಗ್ಗಿಸಿಕೊಂಡಿದ್ದ. ಅದರ ಮಿಥ್ಯೆಯನ್ನು ಒಡೆಯುವ ಧೈರ್ಯ, ವ್ಯವಧಾನಗಳೆರಡೂ ಅವನಿಗಿರಲಿಲ್ಲ. ಬಿಡುವಿಲ್ಲದ ರಾಜಕಾರಣದ ಕಠಿಣ ತರಬೇತಿ, ಅದರೆಲ್ಲ ಸೂಕ್ಷ್ಮಗಳನ್ನೂ, ಸಂಕೀರ್ಣತೆಗಳನ್ನೂ ಮುಷ್ಟಿಯೊಳಗೆ ಹಿಡಿಯುವ ಉತ್ಸಾಹ, ಚಿಗುರೊಡೆಯುತ್ತಿದ್ದ ಮಹತ್ವಾಕಾಂಕ್ಷೆಗಳಿಗೆ ಸದಾ ಸ್ಪಂದಿಸುತ್ತಿದ್ದ ಅವನಿಗೆ ಈ ಭಾವನಾತ್ಮಕ ಏರಿಳಿತಗಳ ಮೇಲೆ ಲಕ್ಷ್ಯವಾದರೂ ಎಲ್ಲಿತ್ತು?''

ಪ್ರಶ್ನೆಯೇ ಉತ್ತರವೂ ಆಗಿ, ಜಾಗೃತಿಯ ಮನಸ್ಸಿನ ಮೂಲೆ ಮೂಲೆಗಳನ್ನೂ ಸ್ಪರ್ಶಿಸುತ್ತಿದ್ದಾಳೆ, ಯಮುನೆ. ಕತ್ತಲೆಯ ತಿರುವುಗಳಲ್ಲಿ ಅವಿತಿದ್ದ ಭಾವಗಳಿಗೆ ಜೀವ ತುಂಬುತ್ತಿದ್ದಾಳೆ. ಅಂಜಿ, ಹಿಂಜರಿಯುವ ಅನಿಸಿಕೆಗಳಿಗೆ ದನಿ ನೀಡುತ್ತಿದ್ದಾಳೆ.

''ಇಕ್ಷ್ವಾಕು ದೊರೆ ತ್ರ್ಯರುಣನ ಮಗ ಸತ್ಯವ್ರತನ ಕಥೆಯನ್ನು ಹಿಂದೊಮ್ಮೆ ನಿನಗೆ ಹೇಳಿದ್ದೆನಲ್ಲವೆ, ಸಾಗರ?'' ಅವಳು ಎಂದೋ ಹೇಳಿರುವುದನ್ನೆಲ್ಲ ತಲೆಯಲ್ಲಿ ತುಂಬಿಕೊಳ್ಳುವುದು, ನನಗೆ ಬಿಡಿ, ಸಾವಿರ ತಲೆಯ ಆದಿಶೇಷನಿಗೂ ಸಾಧ್ಯವಿಲ್ಲವೇನೋ! ಆದರೆ, ಸತ್ಯವ್ರತ, ತ್ರಿಶಂಕುವಾದ ಕಥೆ ಅಷ್ಟು ಸುಲಭದಲ್ಲಿ ಮರೆಯುವಂಥದ್ದಲ್ಲ. ಆಕಾಶದೆತ್ತರದಲ್ಲಿದ್ದ ಇಕ್ಷ್ವಾಕು ವಂಶದ ಧ್ವಜವನ್ನು ಎವೆ ಮಿಟುಕಿಸುವಷ್ಟರಲ್ಲಿ ನೆಲಕ್ಕೆ ಇಳಿಸಿಬಿಟ್ಟನಲ್ಲ, ಈ ಸತ್ಯವ್ರತ, ಅವನಿಗೆ 'ತ್ರಿಶಂಕು' ಹೆಸರೇ ಸರಿಯಾದದ್ದು. ಅದು ಹೋಗಲಿ, ಈ ಜಾಗೃತಿಯ ಕಥೆಯೊಳಗೆ ಇವನೆಲ್ಲಿಂದ ನುಸುಳಿದನಪ್ಪ.

ಯಮುನೆಯ ರೀತಿಯೇ ಹಾಗೆಂದೆನಲ್ಲ. ಅವಳಿಗೆ ಒಮ್ಮೊಮ್ಮೆ ಸೂರ್ಯಮಂಡಲದ ಮಧ್ಯದಲ್ಲಿ ಪಾತಾಳ ಲೋಕ ಕಾಣುತ್ತದೆ. ಉರಿಯುವ ಮರುಭೂಮಿಯಲ್ಲಿ ಹಿಮಬಿಂದುಗಳು ಪ್ರತ್ಯಕ್ಷವಾಗುತ್ತವೆ. ಮಗುವೊಂದರ ಹುಚ್ಚಾಟದಲ್ಲಿ ಸಪ್ತಲೋಕಗಳಿರುತ್ತವ. ಹಾಗೆಂದಾದರೂ ಹೇಳಿಬಿಟ್ಟೆನೋ, ''ಅಲ್ಲವೋ ಬೃಹಸ್ಪತಿ. ನಿನ್ನ ಹೊಟ್ಟೆಯ ಒಳಗೇ ವಡಬಾನಲ ಇದೆಯಲ್ಲೋ ಮುಟ್ಟಿ ನೋಡಿಕೊಳ್ಳೋ...'' ಎಂದು ಅರಳು ಬಿರಿಯುವಂತೆ ನಗುತ್ತಾಳೆ.

''ಅದೇ ತ್ರಿಶಂಕು, ಈ ಜಾಗೃತಿಯ ಬದುಕಿನ ಅನಿಷ್ಟ ತಾರೆಯಾದ'', ಯಮುನೆ ಕಥೆಯ ಕೊಂಡಿ ಜೋಡಿಸಿದಳು. ''ಅನಿಷ್ಟ ತಾರೆಯೆಂದೆನೆ? ಬಾಯ್ತಪ್ಪಿ ಹಾಗೆಂದಿರಬೇಕು ನಾನು. ಅವನು ಜಾಗೃತಿಗೆ ಅವಳು ಯಾರೆನ್ನುವುದನ್ನು ತೋರಿಸಿಕೊಟ್ಟ. ಅವಳನ್ನು ಬಲವಂತವಾಗಿ ಅಪಹರಿಸಿ ತರುವುದರ ಮೂಲಕ ಅವಳ ಹೆಣ್ತನವನ್ನು ಎಚ್ಚರಿಸಿದ. ನಡು ವಯಸ್ಸಿನ ಅವಳಲ್ಲೂ ಸ್ನಿಗ್ಧತೆ, ಆಕರ್ಷಣೆಗಳಿವೆಯೆನ್ನುವುದನ್ನು ತೋರಿಸಿಕೊಟ್ಟ. ಭ್ರಮಿಷ್ಟನಂತೆ ಅವಳೆಲ್ಲ ಬೇಕುಗಳಿಗೆ ಸ್ಪಂದಿಸಿದ. ವಿದರ್ಭನೊಂದಿಗಿನ ಬದುಕಿನ ಒತ್ತಡದ ಅಡಿಯಲ್ಲಿ ಹೂತುಹೋಗಿದ್ದ ಕನಸಿನ ಕುಂಜದಲ್ಲೆಲ್ಲ ಅಡ್ಡಾಡಿಸಿದ. ಆ ಮುಕ್ತ ಗಾಳಿಯಲ್ಲಿ, ಹೊಸತನದಲ್ಲಿ, ಮನಸ್ಸು, ಶರೀರಗಳ ಸಂಬಂಧ ಮತ್ತೆ ಸ್ಥಾಪಿತವಾದ ಆವೇಗದಲ್ಲಿ, ಅವಳ ಪ್ರತಿರೋಧವನ್ನು ಕರಗಿಸುವ ಶಕ್ತಿಯಿತ್ತು.''

ದಿನದ ದುಡಿಮೆಯ ಆಯಾಸ ನನ್ನ ಕಣ್ಣುಗಳನ್ನೊತ್ತುತ್ತಿತ್ತು. ಎವೆಗೆ ಎವೆ ಕೂಡಿಸುವ ಸೌಖ್ಯಕ್ಕೆ ಕಾದಿದ್ದ ಮನಸ್ಸೇ ಪಿಸುಮಾತಾಯಿತು. ''ಸರಿ ಹೋಯಿತು. ನಿನ್ನ ಜಾಗೃತಿ ಅಲ್ಲಾದರೂ ಸುಖವಾಗಿರಲಿ.'' ಅಲ್ಲ, ನಾನೇನು ಸಲ್ಲದ್ದು ಹೇಳಿದೆ? ಯಮುನೆಯ ಕಣ್ಣುಗಳು ಅಗಲವಾಗತೊಡಗಿದಾಗಲೇ ಎಲ್ಲೋ ಎಳೆ ತಪ್ಪಿತೆಂದು ನನಗೆ ತಿಳಿದುಹೋಯಿತು. ಅವಸರ ಅವಸರವಾಗಿ ಮತ್ತೆ ಸೇರಿಸಿದೆ, ''ಎನ್ನುವಂತಾಯಿತೇ ಹೇಗೆ?'' ಪಾಪ, ಯಮುನೆಯ ಸಿಟ್ಟು ಏರಿದಂತೆ ಇಳಿಯಿತು; ಜಾಗೃತಿಯ ಪ್ರಪಂಚಕ್ಕೆ ಮರಳಿದಳು.

''ಇಲ್ಲ, ಸಾಗರ, ಹಾಗಾಗಲಿಲ್ಲ. ನಾನೂ, ನೀನೂ ಬಯಸಿದಷ್ಟು ಕರುಣೆಯನ್ನು ಬದುಕು ತೋರಿಸುವುದಿಲ್ಲ. ಚೈತನ್ಯದ ಮೂಲಕ್ಕೇ ದಾಳಿಯಿಟ್ಟು, ಪ್ರಶ್ನೆಯ ಮೇಲೆ ಪ್ರಶ್ನೆಯನ್ನು ದುರಿಸುತ್ತಾ, ಕೈಕಾಲು ಬಿಡುವ ಜೀವಗಳನ್ನ ನೋಡುವುದೇ ಅದಕ್ಕೆ ಮೋಜು. ಈ ಪೈಶಾಚಿಕ ತೃಪ್ತಿಗಾಗಿ ಅದು ತಿರುಗಿದ್ದು ಜಾಗೃತಿಯತ್ತ.'' ನಾನು ಸುಮ್ಮನೆಯಿರುತ್ತಿದ್ದರೆ ಯಮುನೆಯ ಕಥೆ ಮುಗಿಯುತ್ತಿತ್ತೋ ಏನೋ. ನಾನಾಗಿ ಅದನ್ನ ಬೆಳೆಸಿದ ಹಾಗಾಯಿತು. ಛೇ ಇನ್ನು ಅವಳಾಗಿ ಮುಗಿಸುವುದನ್ನು ಕಾಯದೆ ವಿಧಿಯಿಲ್ಲ. ಏನಾದರೂ ಹೇಳಿಕೊಳ್ಳಲಿ.

''ಜಾಗೃತಿಯ . ಎದೆಯಾಳದ ಬಗ್ಗಡ ಮೇಲ್ಪದರಕ್ಕೆ ಹರಡಲು ಹೆಚ್ಚು ಕಾಲ ತಗಲಲಿಲ್ಲ. ಮನಸ್ಸು ತಣಿಯುವುದು ನಿರಂತರ ಭೋಗದಿಂದಲ್ಲ. ಅದು ತರುವ ತೃಪ್ತಿಗೆ ಕೊನೆಯಿದೆ, ಅದು ಸತ್ಯವೂ ಅಲ್ಲ, ನಿತ್ಯವೂ ಅಲ್ಲ ಎನ್ನುವ ತಿಳಿವಿನ ಒರತೆಯೊಂದು ಜಾಗೃತಿಯ

ಒಳಗೆಲ್ಲೋ ಸೆಲೆಯೊಡೆಯಿತು. ಪ್ರತಿ ದಿನದ ಅನುಭವವೂ ಅದರ ಇಕ್ಕೆಲಗಳನ್ನು ನಿರ್ದಯವಾಗಿ ಕೊರೆಯತೊಡಗಿತು. ಈ ಬೆಚ್ಚನೆಯ ಸ್ರೋತ, ಬದುಕಿನ ಸಾರ್ಥಕತೆ-ನಿರರ್ಥಕತೆಗಳ ಪ್ರಶ್ನೆಯನ್ನೂ ಅವಳ ಮುಂದಿಟ್ಟಿತು.

ಬದುಕಿಗೆ ಕನಸುಗಳ ರಂಗಿನೋಕುಳಿ ಎರಚಬೇಕಾಗಿದ್ದ ಸಾರಪೂರ್ಣವಾದ ದಿನಗಳಲ್ಲಿ ಎಳೆಯ ಶಿಶುವಿನ ಬೇಕು-ಬೇಡಗಳಲ್ಲೇ ಕಳೆದ ಅಕಾಲ ಪ್ರೌಢತ್ವ. ಕಾದು, ಕಾವೇರಿ, ಕಾವು ಕಳೆದುಕೊಂಡು ಸೂರ್ಯ ನಡುನೆತ್ತಿಯಿಂದಾಚೆ ವಾಲಿದ ಬಳಿಕ, ವಸಂತೋದಯದ ಭ್ರಮೆಯ ಬದುಕು. ಬಾಳಿನ ಋಜುತ್ವವನ್ನು ಗ್ರಹಿಸಲಾರದ ಸಂಕಟಗಳು ಅವಳನ್ನು ಮುತ್ತುತ್ತಿರುವುದನ್ನು ಈ ಚಿತ್ರದಲ್ಲಿ ಕಾಣುತ್ತೀಯಾ?'' ಮತ್ತೆ ಯಮುನೆಯ ಪ್ರಶ್ನೆ.

ಏನು ಕಾಣುವುದೋ, ನನಗಂತೂ ಹಾಸಿಗೆ ಕಂಡರೆ ಸಾಕಾಗಿದೆ. ಹಾಗೆ ಹೇಳಿ ಪಾರಾಗಲುಂಟೇ?

''ಎಂಥ ದಾರುಣವಾದ ಬದುಕು!'', ಉದ್ಗರಿಸಬೇಕಾದ ಅನಿವಾರ್ಯತೆಯಿಂದ ಹೇಳಿದೆ. ಯಮುನೆಗೆ ಅಷ್ಟೇ ಸಾಕಾಯಿತು.

''ಹಾಗಲ್ಲ ಸಾಗರ, ಬದುಕು-ಸಾವುಗಳು ಅವಳ ಪಾಲಿಗೆ ಅಂತರ ಕಳೆದುಕೊಂಡಿದ್ದವು. ನನ್ನ ತಟದಲ್ಲಿ ನೀರವವಾಗಿ ಕೈ ಕಟ್ಟಿ ನಿಂತ ಅವಳ ಪ್ರತಿಮೆಯನ್ನು ನೋಡು. ಇದು ಭೂಮಿಯ ಮೇಲಿನ ಅವಳ ಕೊನೆಯ ಚಿತ್ರ. ನನ್ನ ಓಟಕ್ಕೆ ತಡೆಯಾದ ನಿಲುವು. ಜಗತ್ತಿನ ಎಲ್ಲ ಮೌಲ್ಯಗಳನ್ನು, ನೀತಿ ಸಂಹಿತೆಗಳನ್ನು ಒತ್ತಟ್ಟಿಗೆ ಸರಿಸಿದ ನೇರ, ನಿರ್ಭೀತ ನೋಟ.

ನನ್ನ ಸುಳಿಯೊಳಗೆ ಹಾರಿಕೊಂಡ ಅವಳನ್ನು ಒಳಗೆಳೆದುಕೊಳ್ಳುವ ಸಹಜ ಧರ್ಮ ನನಗೆ. ಅವಳೊಳಗಿನ ಜೀವಕ್ಕೆ ಶರೀರದ ಬಂಧನ ಕಡಿದುಕೊಳ್ಳಲಾರದ ಸೆಳೆತ. ಸಾವು ಬದುಕಾಗುವ ಸ್ಥಾನಪಲ್ಲಟ. ಕಣ್ಣುಗಳೊಳಗೆ ಅರಸಿನದ ಪುಡಿಯಾಗಿ ಒತ್ತುವ ಮೃತ್ಯು. ಪ್ರಾಯಶಃ, ಮಗುವಿಲ್ಲದ ನಾನು, ಗಂಗೆಯಂತೆ ತಾಯಿಯೇ ಆದೆನೇನೋ....'' ಗುಣುಗುಣಿಕೆಯ ಮಟ್ಟಕ್ಕೆ ಇಳಿಯುತ್ತಿದ್ದ ಯಮುನೆಯ ಸ್ವರ, ನನ್ನ ಅಲೆಗಳ ಅಬ್ಬರವನ್ನೂ ಮೀರಿಸಿ, ನನ್ನೆಲ್ಲ ನಿದ್ದೆಯನ್ನು ಕಸಿಯುವ ಹಾಗೆ ಕಿವಿಗಳ ಒಳಗೆ ಇಳಿಯುತ್ತಿದೆ.

''ಸಾಗರ, ನಾವು, ಇಷ್ಟೆಲ್ಲ ಸಿಹಿ ನೀರಿನ ಅಸಂಖ್ಯ ಪ್ರವಾಹಗಳನ್ನು ನಿನ್ನ ಒಡಲಿಗೆ ಸುರಿಯುತ್ತಲೇ ಇದ್ದೇವಲ್ಲ, ಅಲ್ಲಿರುವ ಉಪ್ಪನ್ನು ಕರಗಿಸುವುದು, ಮುಗಿಸುವುದು ನಮ್ಮಿಂದಾಗುತ್ತಿಲ್ಲವಲ್ಲ, ಏಕೆಂದು ಹೇಳುತ್ತೀಯಾ?''



"ಏಯ್, ಸಾಗರ ತೂಕಡಿಸುತ್ತಿದ್ದೀಯಾ?" ಯಮುನೆ ಬಲವಾಗಿ ಕುಲುಕಿದಾಗ ನನ್ನ ಮಂಪರಿನಿಂದ ಹೊರ ಬಂದೆ, ಇದನ್ನ ಯಾವ ಮಹಾ ಸಂಗತಿಯೆಂದು ಹೇಳಲು ಹೊರಟಿದ್ದಾಳೆ, ಇವಳು.

ಮಣಿಮಾಲಿನಿ ವಿ ಕೆ.



ಲಘು ಕತೆ



ವಿವೇಕ ಎಲ್. ಪಟಗಾರ

# ಶಿವರಾತ್ರಿ ಮಜ

ಹೋಗಿ ಬಂದ ಎಲ್ಲಾ ಜನರು, 'ಶಿವರಾತ್ರಿ ತೇರು ಗೋಕರ್ಣದಲ್ಲಿ ಮಜಾ ಆಗುವದು' ಎಂದು ಹೇಳುವುದನ್ನು ಕೇಳಿ ರಾಮನಿಗೂ ತೇರಿಗೆ ಹೋಗಬೇಕು ಎನಿಸಿತು. ಅದಕ್ಕಾಗಿ ಅವನು ಕೆಲಸಕ್ಕೆ ಹೋದಾಗ ಕೊಟ್ಟ ಒಂದು ವಾರದ ಸಂಬಳವನ್ನು ಅಪ್ಪ ಬೆರಪ್ಪನಿಗೆ ಕೊಡದೆ, ''ನನಗೂ ಹಕ್ಕು ಇದೆ ನನ್ನ ಹಣ ಖರ್ಚು ಮಾಡಲು, ನಾನು ಥೋಡೆ ಸಾಮಾನು ತಗಂಬೇಕು. ಪ್ರತಿ ವಾರ ಮನೆಯವರನೆಲ್ಲ ಸಾಕುದೇ ನನ್ನ ಕೆಲಸವಲ್ಲ'' ಎಂದು ಗತ್ತಿನಿಂದಲೇ ಹೇಳಿ ಹಣ ಕೊಡಲಿಲ್ಲ. ಬೆರಪ್ಪನು ಮಗ ರಾಮನ ಮಾತಿನಿಂದ ಒಂದು ಕ್ಷಣ ಕಂಗಾಲಾದನು. ಮತ್ತು ತನ್ನ ಮಡದಿ ಬೆರಮ್ಮನ ಹತ್ತಿರ ಹೇಳಿದನು, ''ಪರಾಯದ ಮಕ್ಕ, ಹಿಂಗೆ ನೀ ಬೇಜಾರ ಮಾಡಬ್ಯಾಡ, ಮುಂದೇನು ನೋಣ ಕಣವ''. ಹೀಗೆ ಹೇಳಿ, ನೇರವಾಗಿ ಕಾಮತರ ಅಂಗಡಿಗೆ ಹೋಗಿ, ''ಒಡೆಯಾ ಈ ವಾರ ಒಂದು ನಂಗೆ ಸಾಲ ಕೊಡಿ. ಬರುವಾರ ರಾಮನ ಸಂಬಳ ಬಂದ ಕುಡ್ಲೆ ನಿಮ್ಮ ಸಾಲ ತಿರಸ್ತೇನೆ'' ಎಂದು ಹೇಳಿ ವಾರಕ್ಕೆ ಆಗುವಷ್ಟು ಸಾಮಾನು ತಂದನು.

ತೇರಿನ ದಿನ ಬಂದಿತು. ಆ ದಿನ ರಾಮ, ಮದ್ಯಾಹ್ನ ಹನ್ನೆರಡು ಗಂಟೆಗೆ ಗಂಜಿ ಊಟ ಮಾಡಿಕೊಂಡು, ತನ್ನ ವಯಸ್ಸಿನ ಕಲಿತ ಕಾಲೇಜು ಮಕ್ಕಳ ಸಂಗಡ ತೇರಿಗೆ ಹೊರಟನು. ಬಡತನದ ಕಾರಣ ರಾಮ ನಾಲ್ಕನೇ ಇಯತ್ತೆಯ ಮುಂದೆ ಕಲಿತಿರಲಿಲ್ಲ. ಆದರೆ ಅವನ ಜೊತೆಯವರಾದ ರಾಜು, ನಾಗರಾಜ, ಎಲ್ಲ ಕಲಿತು ಕಾಲೇಜಿಗೆ



ಶಶಿಧರ್

ಹೋಗುತ್ತಿದ್ದರು. ರಾಮನು ಅವರಿಂದ ಆಗುಹೋಗುಗಳ ವಿಷಯವನ್ನೆಲ್ಲ ತಿಳಿದುಕೊಳ್ಳುತ್ತಿದ್ದ.

ರಾಮ ಮತ್ತು ಗೆಳೆಯರು ಗೋಕರ್ಣ ಪ್ರವೇಶಿಸುತ್ತಿದ್ದಂತೆ ಸುಂಕ ಕೊಡಬೇಕೆಂದು ಹೇಳಿದಾಗ, ರಾಮನ ಗೆಳೆಯರು ಬೇರೆ ಯಾವುದೋ ದಾರಿಯಲ್ಲಿ ರಾಮನನ್ನು ಕರೆದುಕೊಂಡು ಹೋಗಿ ಗೋಕರ್ಣ ಪ್ರವೇಶಿಸಿದರು. ಅವರ ಆ ವರ್ತನೆ ರಾಮನಿಗೆ ಖುಷಿ ತಂದಿತು. ಹಾಗೂ ರಾಮ ಗೆಳೆಯರನ್ನು ಹೊಗಳಿದನು. ಅವರು ಗೋಕರ್ಣ ಪೇಟೆ ಸುತ್ತುವಾಗ, ಗೆಳೆಯರ ಮಾತನ್ನು ಕೇಳಿ ರಾಮ ನಕ್ಕನು ಹಾಗೂ ಆ ನೂಕು ನುಗ್ಗಲಿನಲ್ಲಿ ರಾಮನಿಗೆ ಶಿವರಾತ್ರಿ ತೇರು ನಿಜಕ್ಕೂ ಮಜವೆನಿಸಿತು.

ತೇರನು ಎಳೆದರು. ದೇವರಿಗೆ ವಂದಿಸಿ ರಾಮ ಪುನಃ ತಿರುಗಾಡಲು ಪ್ರಾರಂಭಿಸಿದನು. ಕೊನೆಗೆ ಆರ್ಕೆಸ್ಟ್ರಾ ನೋಡಲು ಹೋಗುವಾ ಎಂದು ಗೆಳೆಯರು ಹೇಳಿದಾಗ ಅದಕ್ಕೆ ಒಪ್ಪಿ ಅಲ್ಲಿಗೆ ಹೋದ ರಾಮ, ಅಲ್ಲಿ ಹೇಳಿದ ಹಿಂದಿ ಹಾಡಿನ ಸಾಲನ್ನು ಬಾಯಲ್ಲಿ ಗುನುಗುತ್ತಾ ನಂತರ ಬಂದನು. ಹೊರಬಂದು ಪುನಃ ಸಂಜೆ ಎಂಟು ಗಂಟೆಯಾದರೂ ಮನೆಗೆ ಹೋಗುವ ವಿಚಾರ ಮಾತನಾಡದೇ ಗೆಳೆಯರ ಜೊತೆಗೂಡಿ ಮತ್ತೆ ತಿರುಗಿದನು. ಗೆಳೆಯರೆಲ್ಲ ಸೇರಿ ಅವನಿಗೆ ತಮ್ಮಂತೆ ಕುಡಿಯುವದನ್ನು ಕಲಿಸಿದರು. ಗೆಳೆಯರೊಂದಿಗೆ ಸಾರಾಯಿ ಕುಡಿದ ರಾಮ, ತನ್ನ ಸ್ಥಿತಿಯನೆಲ್ಲ ಮರೆತು, ಪುನಃ ಗೆಳೆಯರೊಂದಿಗೆ ತಾನೂ ಅಲ್ಲಸಲ್ಲದ ಮಾತನಾಡುತ್ತಾ ತಿರುಗಾಡಲು ಪ್ರಾರಂಭಿಸಿದನು. ರಾತ್ರಿ ಒಂಬತ್ತು ಗಂಟೆ ಸುಮಾರಿಗೆ ರಾಮನ ಜೊತೆಯವರು ಹುಡುಗಿಯರಿಗೆ ಏನೋ ಚುಡಾಯಿಸಿ ಓಡಿಹೋದರು. ಆಗ ಕಂಗೆಟ್ಟು ನಿಂತಲ್ಲೇ ನಿಂತ ರಾಮ, ಅಲ್ಲಿಯ ಜನರ ಕೈಗೆ ಸಿಕ್ಕು ಸಿಕ್ಕಾಪಟ್ಟೆ ಹೊಡೆತ ತಿಂದನು. ಹಾಗೂ ಪೊಲೀಸರು ರಾಮನನ್ನು ಜೈಲಿಗೆ ಹಾಕಿದರು.

ಬೆರಪ್ಪ ರಾತ್ರಿ ಹನ್ನೆರಡು ಗಂಟೆ ಆದರೂ ಮಗ ಮನೆಗೆ ಬರದೆ ಇದ್ದುದರಿಂದ ಗಾಬರಿಯಾಗಿ ಪಕ್ಕದ ಆತನ ಗೆಳೆಯರನ್ನು ವಿಚಾರಿಸಿದರು. ಅವರಿಂದ ರಾಮ ಜೈಲಿನಲ್ಲಿರುವದನ್ನು ತಿಳಿದುಕೊಂಡು, ನೇರವಾಗಿ ಹಮ್ಮಣ ನಾಯಕರ ಹತ್ತಿರ ಹೋದನು. ಅವರಿಗೆ ವಿಷಯ ತಿಳಿಸಿದಾಗ ಅವರು ಎಂ.ಎಲ್.ಎ. ಸಾಹೇಬ್ರಿಗೆ ಫೋನ್ ಮಾಡಿ ಅವರಿಂದ ಐ.ಎಸ್.ಐ. ಅವರಿಗೆ ಫೋನ್ ಮಾಡಿ ರಾಮನನ್ನು ಬಿಡಿಸಿದರು.

ಮನೆಗೆ ಬಂದ ರಾಮ, ನಾಲಾಯಕ ಗೆಳೆಯರ ಮಜವು ತನ್ನ ಮಜವಲ್ಲ, ದುಡಿದು ತಿನ್ನುವುದರಲ್ಲೇ ತನಗೆ ಬೇಕಾದ ಮಜ, ನೆಮ್ಮದಿ ಇದೆ ಎಂದು ತಿಳಿದನು. ಹಾಗೂ ದಗಾ ಹಾಕುವ ಸ್ನೇಹಿತರ ಸಹವಾಸವು ಸಾಕು ಎಂದು ತಿಳಿದುಕೊಂಡು, ಎಂದಿನಂತೆ, ಕ್ರಷರಿನ ಕಡಿ ಹೊರುವ ಕೆಲಸಕ್ಕೆ ಹೋಗಲು ಪ್ರಾರಂಭಿಸಿದನು.





ವಿವೇಕ ತುಂಟಗಾರ





ಕುಂ. ವೀರಭದ್ರಪ್ಪ

## ಭಳಾರೆ ವಿಚಿತ್ರಂ

# 'ಕೋನ' ಮಾಪಕ

ಕಾಲ: 1969 ಸ್ಥಳ: ಸೆಂಟರಲು ಗೋರು ಮೆಂಟಾಪೀಸು

ಟೆರ್ರರ್ ಎಂದೇ ಹೆಸರಾಗಿರುವ ಪಾಟೀಲರು ಹಾಸಿಗೆಯಿಂದೇಳುತ್ತಲೇ ಘೋ...ಡ್ಕೆ ಎಂಬ ಬಯ್ಗಳ ಪದವನ್ನು ನೆನಪಿಸಿಕೊಂಡರು. ಕೂಡಲೆ ಯಾರನ್ನಾದರು ಆ ಪದದಿಂದ ಬಯ್ದು ಮನಸ್ಸು ಹಗುರ ಮಾಡಿಕೊಳ್ಳಬೇಕೆಂದು ನಿರ್ಧರಿಸಿದರು. ಸಲೀಸಾಗಿ ಬಯ್ಸಿಕೊಳ್ಳುವಂಥ ಸೂಟಬಲ್ ಪರ್ಸನ್‌ಗಾಗಿ ಹುಡುಕಾಡಿದರಾದರೂ, ಸಿಗಲಿಲ್ಲ. ಆಫೀಸಿಗೆ ಹೋಗಿ ಪರಮ ಸಬಾರ್ಡಿನೇಟ್ಸ್ ಪೈಕಿ ಯಾರನ್ನಾದರು ಆಯ್ಕೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದರು. ದೈವದತ್ತವಾಗಿ ಕಿವಿ ತುಂಬ ಕೂದಲ ಬೆಳೆ ಅಲಂಕರಿಸಿರುವ ಅವರು ದಿನಂಪ್ರತಿ ಘೋಽಽದಿಂದ ಆರಂಭವಾಗುವ ಬಯ್ಗಳನ್ನು ಆಯ್ಕೆ ಮಾಡಿಕೊಳ್ಳುವುದು ಅಭ್ಯಾಸ ಮಾಡಿಕೊಂಡಿರುವರು. ಅಂಥ ಅವಾಚ್ಯ ಶಬ್ದವನ್ನು ಪ್ರಯೋಗಿಸಿದ ನಂತರವೇ ಅವರಿಗೆ ನೆಮ್ಮದಿ. ತದನಂತರ ಬಯ್ಸಿಕೊಂಡ ಬಲಿಪಶುವಿಗೆ. ಒಂದು ರೂಪಾಯಿ ಗೌರವಧನ ನೀಡಿ ಪಾಪಪ್ರಜ್ಞೆಯಿಂದ ಬಚಾವಾಗುವರು.

ಇಂಥ ಪಾಟೀಲ ಸಾಹೇಬರ ಫಿಜಿಕ್ಕು ಸ್ವಲ್ಪ ಅಬ್ನಾರ್ಮಲ್ಲು. ಉದ್ದಕ್ಕಿಂತ ಅಗಲ ಜಾಸ್ತಿ. ಭಾರಿ ಗ್ಲೋಬಿನಂಥ ಜಠರ ಚೀಲ. ಆದರೂ ಅವರು ಬ್ರಿಲಿಯಂಟೆಂಬುದರಲ್ಲಿ ಅನುಮಾನವಿಲ್ಲ. ಸಖತ್ ಸ್ಟ್ರಿಕ್ಟಾಪೀಸರರೆಂದೇ ಹೆಸರಾಗಿರುವ ಅವರ ನಾಲಿಗೆಗೆ ಸದಾ ಬಯ್ಯುವ ತೀಟೆ. ತಮ್ಮ ಯಶಸ್ಸಿನ ಪ್ರಥಮ ಸೋಪಾನವೆಂದು ಜಿಹ್ವಾಗ್ರದ ಕಡೆ ಬೆರಳು ಮಾಡಿ ತೋರಿಸದೆ ಇರರು. ಬಯ್ಸಿಕೊಳ್ಳುವ ಶಕ್ತಿ ಇಲ್ಲದ ಸಬಾರ್ಡಿನೇಟ್ಸ್ ಮಂದಿ ದೇಶದ ಅಭಿವೃದ್ಧಿಗೆ ಮಾರಕ ಎಂಬುದೇ ಅವರ ಖಚಿತ ನಿಲುವು. ಹೈಯರ್ ಲೆವೆಲ್ಲಿನಲ್ಲೆಲ್ಲಾ ಕೈ ಕಾಲಾಡಿಸುವ ಜಾಯಮಾನ. ಅವರನ್ನು ವಿರೋಧಿಸುವ ಹಿಮ್ಮತ್ತಾಗಲೀ, ತಾಕತ್ತಾಗಲೀ ಸದರೀ ಆಫೀಸಿನಲ್ಲಿ ಯಾರಿಗೂ ಇಲ್ಲವೆಂದೇ ಹೇಳಬಹುದು.

ರತುನ ಸಿಮ್ಹಾಸನದಂಥ ಕುರ್ಚಿ ಮೇಲೆ ಕೂತು, ಅವರಿವರ ಮೂತ್ರದಲ್ಲಿ ಬಂಗಡಾ ಹುಡುಕಲು ಪ್ರಯತ್ನಿಸಿದರಾದರೂ ಸಾಧ್ಯವಾಗಲಿಲ್ಲ. ಹೈಯರಾಫೀಸರರಿಂದ 'ಅಯರನ್ನು' ಎಂಬ ಬಿರುದ

ಪಡೆದಂಥವರಾದ ಸಾಹೇಬರು, ತತ್‌ಕ್ಷಣ ಕೋನನನ್ನು ನೆನಪಿಸಿಕೊಂಡರು. ಕೋನಾss ಎಂದು ಹೇಷಾರವ ಮಾಡಿದರಾದರೂ ಅವನ ದೇಹಾಕೃತಿ ಎದುರಿಗೆ ಮೂಡಲಿಲ್ಲ. ಮತ್ತೊಮ್ಮೆ ಅವರು ಕೂಗಿದೊಡನೆ, ತನ್ನ ಮೂರನೆ ಹೆಂಡತಿ ರುಕುಮಾಯಿಯೊಂದಿಗೆ ಜಟಾಪಟಿಗಿಳಿದಿದ್ದ ಕೋನನು, ದಿಗ್ಗನೆ ಎದ್ದು ತಲೆಗೊಂದು ಮಫ್ಲರು ಸುತ್ತಿಕೊಂಡನು. ಎಲ್ಲಿ ಹಾಳಾಗಿ ಹೋದನಾ ಸೂ..ಗ? ಎಂದವರು ಮಗದೊಮ್ಮೆ ಗರ್ಜಿಸಲು, ಇವನು ಬಾಗಿಲು ದಾಟ, ತನ್ನ ಆನೆಗಾಲುಗಳಿಗೆ ಪಂಚೇರು ತೂಕದ ಛಡಾವು ಧರಿಸಿಕೊಂಡನು.

''ಅಗಾ, 'ಮೊಗಲ್ಲೇ ಅಜಮ್' ಇವತ್ತೇ ಲಾಸ್ಟು...'', ರುಕುಮಾಯಿ ಕಂಪು ನಿಶಾನೆ ತೋರಿಸಿದಳು.

''ಸೋಚೋ ಮತ್...ಪೌಡರು, ಸುನೋ ನಮ್ ಮದ್ವೆ ಪೋಟೋ ಪೀಛೇ ಹೈ'' ಎಂದು ಕೂಗಿ ಹೇಳುತ್ತ ಒಂದೆರಡು ಕೂಗಳತೆ ದೂರದಲ್ಲಿದ್ದ ಆಫೀಸಿನ ಕಡೆ ಮುಖ ಮಾಡಿದನು.

ಅತ್ತ ಪಾಟೀಲರ ಮೈ ತುಂಬಾ ವೋಲ್ಟೇಜು. ಕಾಲಿಂಗು ಬೆಲ್ಲು ಒತ್ತಿದೊಡನೆ ಸೀನಿಯರ್ ಮೋಸ್ಟು ಅಟೆಂಡರು ಓಬ ಕೆಮ್ಮುತ್ತ, ಕ್ಯಾಕರಿಸುತ್ತ ಹಾಜರಾದನು. ಭೋ... ಅಂತ ಬಯ್ಯಲು ಪ್ರಯತ್ನಿಸಿದರಾದರೂ ಸಾಧ್ಯವಾಗಿಲಿಲ್ಲ. ನಮ್ತಂದೆ ವಯಸ್ಸೂ ನಿನ್ ವಯಸ್ಸೂ... ಆದಿರ್‍ಲಿ...: ಎಲ್ಲಿ ಹಾಳಾಗಿ ಹೋದ ಕೋನ...?'' ಮುಷ್ಠಿ ಬಿಗಿದು ಕೇಳಿದರು.

''ಊರಾಗದಾನ್ರಿ... ಆದ್ರೆ ಎಲ್ಲದಾನಂತ ತಿಳಿಯಲ್ಲೊದ್ರೀ'' ಎಂದು ಓಬಣ್ಣ ಕೆಮ್ಮಿ ಬಚಾವಾಗಿ ಬಂದ.

ಎದುರಿಗೆ ಕನ್ನಡಿ. ತಮ್ಮ ಮುದ್ದಾದ ಪ್ರತಿಬಿಂಬ. ಅದಕ್ಕೆ ಬಯ್ದರೆ ಹೇಗೆ! ಸುಮ್ಮನಾದರು... ಕ್ರಮೇಣ ಸಾಹೇಬರ ವೋಲ್ಟೇಜು, ಬೀಪಿ ಕಮ್ಮಿಯಾಯಿಯತು. ಭೋ...ಡ್ಕೆ'' ಎಂಬ ನುಡಿ ರತುನವನ್ನು ಮನದ ನಗಂದಿಗಿಳಿಬಿಟ್ಟು ಶಾಂತಚಿತ್ತರಾದರು. ಪ್ರ.ಪಿ.ಬ್ರ.ಕು. ಯಿಂದ ಬೋಧವನ್ನು ಕಳೆದ ವಾರವಷ್ಟೆ ಪಡೆದಿದ್ದ ಅವರು ಕಣ್ಮುಚ್ಚಿ ಧ್ಯಾನ ಶುರು ಮಾಡುವುದಕ್ಕೂ ಸ್ಕ್ರೀನ್ ಡೋರು ಕೀರ್‍ರುಟ ಎಂದು ಆಲಾಪನೆ ಮಾಡುವುದಕ್ಕೂ ಸರಿ ಹೋಯಿತು, ಎಚ್ಚರಗೊಂಡು ನೋಡುತ್ತಾರೆ. ಜವಾನವರೇಣ್ಯ ಕೋನನು ಮುಜುರೆ ಸಲ್ಲಿಸುತ್ತಿರುವ ದೃಶ್ಯವು.

ಸಾಹೇಬರು ಆ ಕೂಡಲೆ ನಾಲಿಗೆ ಮೇಲೆ 'ಭೋ' ಎಂಬ ಶಬ್ದಾಸ್ತ್ರವನ್ನು ಪ್ರತಿಷ್ಠಾಪಿಸಿಕೊಂಡು 'ಏನ್ಲೇ ಭೋಸೂಡ್ಕೆ... ಬೆಳಗಿನಿಂದ ಎಲ್ಲಿ ಸುತ್ತು ಹೋಗಿದ್ದಿ; ಎಂದು ಪ್ರಯೋಗಿಸಿ ಕೃತಾರ್ಥರಾಗಿಬಿಟ್ಟರು. ಮಫ್ಲರು



ಕಡೆ ಕೈ ತೋರಿಸಿದ ಕೋನನು, ''ಒಂದಿನ ರಜೆ ಬೇಕಾಗಿತ್ರೀ ಸಾಹೇಬ್ರ'' ಎಂದನು ವಿನಯದಿಂದ. ''ಯಾಕ್ಲೆ?'' ಅಂದ್ರು ಸಾಹೇಬರು. ''ನನ್ ಹೆಂಡ್ತೀನ ಮ್ಯಾಟನೀಗೆ ಕರ್ಕ್ಕೊಂಡೋಗಬೇಕಾಗಿತ್ರಿ'' ಎಂದನು, ಇದ್ದದ್ದು ಇದ್ದಂತೆ. ''ಎಷ್ಟನೇ ಹೆಂಡ್ತೀಲೆ!'' ಎಂದು ಸಾ... ''ಮೂರ್ನೇಕಿ ರುಕ್ಮಾಬಿ'' ಎಂದನು ಶಾಂತ ಚಿತ್ತದಿಂದ. ಮಕ್ಕಳಿಗಿಂತ ಹೆಂಡತಿಯರೇ ಕೋನಗೆ ಹೆಚ್ಚಿರುವರೆಂಬ ಸಂಗತಿ ಸತ್ಯವೆನ್ನಿಸಿತು ಸಾಹೇಬರಿಗೆ. ''ಸೂ... ಮಗ್ನೆ! ಮೈ ಮೇಲೆ ಖಬುರ್ರೈತೇನಲೆ! (ಬಯ್ಯಲಿಕ್ಕೆ ಸುಸಮಯ) ಕೊಡೇದಿಲ್ಲಲೇ... ಮುಕ್ಕೀ, ಬಾಯಿ ಮುಚ್ಕೊಂಡು ಗೆಟ್ ಔಟಂದ್ರೆ, ಗೆಟ್‌ಔಟಲೇ'' ಎಂದು ಕಡ್ಡಿ ಮುರಿದಂತೆ... ಇಲ್ರೀ ಸಾಹೇಬ್ರ... ಮ್ಯಾಟನಿ ಶಾಲಾಗ ಆಕಿ ಕೂಡಾಗೆ ನಾನು ಕೆಳಗೂ ಮ್ಯಾಲೂ ಆಗಿದ್ದೀರಿ'' ಎಂದು ಕೋನನು ಎಷ್ಟೇ ಕೇಳಿಕೊಂಡರೂ ಪಾಟೀಲರ ಹೃದಯ ಕರಗಲಿಲ್ಲ. ಅವನು ಅಲ್ಲಿಂದ ಹೋದನು.

''ಶಬ್ಬಾಷ್ ಪಾಟೀಲ... ಆಫೀಸರಂದ್ರ ನೀನೇ ಕಣಯ್ಯ!'' ತಮ್ಮನ್ನು ತಾವೇ ಶ್ಲಾಘಿಸಿಕೊಂಡರು. ತಮ್ಮ ಭಾಷಾಸಂಪತ್ತಿಗೆ ತಾವೇ ಬೆರಗಾದರು. ದೇವರು ದೊಡ್ಡವನು... ಎಲ್ಲರೂ ತಮ್ಮಿಂದ ಬಯ್ಯಿಸಿಕೊಳ್ಳುತ್ತಿರುವರು.

ತುಸು ಹೊತ್ತಾದ ಮೇಲೆ ಸ್ಕೀನು ಡೋರು ಮತ್ತೆ ಕಿರ್ರ ಗುಟ್ಟಿತು. ತಲೆ ಎತ್ತಿ ನೋಡುತ್ತಾರೆ. ಕಣ್ಣು ಕೆಂಪಗೆ ಮಾಡಿಕೊಂಡಿರುವ ಕೋನನು. ''ಸಾಹೇಬ್ರ... ನಾನಿವತ್ತು ನನ್ ರುಕ್ಮ್ಯಾನ ಮ್ಯಾಟನಿಗೆ ಕರ್ಕ್ಕೊಂಡೋಗಲೇ ಬೇಕು... ರಜ ಕೊಡ್ಲೇಬೇಕು'' ಎಂದವನು ಸ್ವಲ್ಪ ಗದ್ದರಿಸೇ ಕೇಳಿದನು. ಎಲಾ ಇವನ... ಯಃಕಶ್ಚಿತ್ ಜವಾನ ಕುಡಿದು ತಮ್ಮೆದುರು ನಿಂತಿರುವುದೆಂದರೇನು! ಅಮಲಿನಲ್ಲಿರುವವರನ್ನು ಬಯ್ದು ದಕ್ಕಿಸಿಕೊಳ್ಳಬೇಕೆಂದು ನಿರ್ಧರಿಸಿದ ಸಾಹೇಬರು ಮತ್ತೆ 'ಭೋ..'ಎಂದೇ ಆರಂಭಿಸಿ 'ಸೂ...' ಎಂದು ಮುಕ್ತಾಯ ಮಾಡಿದರು. ಮೇಲು ಕೀಳು ಎಂಬ ದರಕಾರಿಲ್ಲದೆ ಮಾತಾಡಿದವನಾದ ಕೋನನು ಅದೆಂಗ ರಜೆ ಕೊಡೇದಿಲ್ವೋ ನಾನು ನೋಡೇಬಿಡ್ತೀನಿ ಎಂದು ಸವಾಲು ಹಾಕಿ, ದಪ ದಪ ಹೆಜ್ಜೆ ಇಡುತ್ತ ಅಲ್ಲಿಂದ ಹೋದನು.

ಎದುರಿನ ಕನ್ನಡಿಯೊಳಗೆ ಕೆರಳಿದ ಸಿಂಹದಂಥ ಪ್ರತಿಬಿಂಬ ತಮ್ಮದೆ. 'ಶಹಬಾಷ್' ತಮ್ಮ ಬಗ್ಗೆ ತಾವೇ ಶ್ಲಾಘಿಸಿಕೊಂಡರು. ಇಡೀ ಸ್ಟಾಫಿಗೆ ಸ್ಟಾಫೇ ತಮ್ಮನ್ನು ಕಂಡರೆ ಹೆದರಿ ತತ್ತಿ ಹಾಕುತ್ತಿರುವುದೆಂದುಕೊಂಡರು. ಫ್ಯಾನಿಗೆ ದೇಹ ಒಡ್ಡಿದರು, ಸ್ವಲ್ಪ ಹೊತ್ತು ನೀಲಿಮ ನೇತ್ರಗಳಾದರು.

ಮತ್ತೆ ಸ್ಕ್ರೀನ್ ಡೋರು ಕಿರ್ರಗುಟ್ಟಿತು. ಕಣ್ಣುಬಿಟ್ಟು ನೋಡುತ್ತಾರೆ, ಕೋನನೆಂಬ ಯಃಕಶ್ಚಿತ್ ಮಾನವನು ಸೀದ ಒಳ ಬಂದವನೆ, ಎದುರಿಗಿದ್ದ ಖುರ್ಚಿ ಮೇಲೆ ಕಾಲ ಮೇಲೆ ಕಾಲು ಹಾಕಿ ಕೂತುಕೊಂಡುಬಿಟ್ಟನು. ಬೀಡಿ ಹಚ್ಚಿಕೊಂಡು ಬುಸು ಬುಸು ಹೋಗೆ ಬಿಡುತ್ತ, 'ನೌಕರಿ ಸೈ ಸೆಂಟಸ್ಯೆ... ನನ್ ಮೂರ್ಮಂದಿ ಹೆಂಡ್ರು ದುಡಿದು ನನ್ನ ಸಾಕ್ತರ್ರೀ' ಎಂದು ಏನೇನೋ ಮಾತಾಡಿದನು. ಪಾಟೀಲರಿಗೋ ನಖಶಿಖಾಂತ ನಡುಗು. ಬಾಯಿ ಬೇರೆ ಒಣಗಿದೆ. ಕೂಗಲಿಕ್ಕೂ ಆಗಲಿಲ್ಲ.

''ರಜೆ ಕೊಡಲ್ಲಂತೀಯಾ... ಈ ಆಫೀಸೇನು ನಿಮ್ಮಪ್ಪನ ಜಾಗೀರ ಥು... ಹ್ಥಾ... ಈತ ಬಯ್‌ದ್ರೆ ನಾನು ಬಯ್‌ಸ್ಕೋಬೇಕಂತೆ.'' ಕೋನ ಒಂದು ಕ್ಷಣ ದುರುಗುಟ್ಟಿದ ''ರಜೆ ಮಂಜೂರು ಮಾಡಿ ಮರುವಾದಿ ಉಳಿಸ್ಕಂತೀಯಾ, ಇಲ್ಲಾ?''

ಬಯ್ಯಿಸಿಕೊಂಡು ಗೊತ್ತಿಲ್ಲದ ಪಾಟೀಲ, ''ಕೊಡಲ್ಲಾಂದ್ರೇನೋ ಮಾಡ್ತೀಯಾ!'' ಎಂದರು. ಅದಕ್ಕಿದ್ದು ಕೋನನು, ''ಏನ್ಮಾಡ್ತೀನಿ ಗೊತ್ತಾ'' ಎಂದು ಜೇಬಿನಿಂದ ಒಂದೂವರೆ ಗೇಣುದ್ದ ಉಡ ಎಂಬ ಉರಗವನ್ನು ತೆಗೆದು, ''ನಿನ್ನೆದೆ ಮೇಲೆ ಬಿಟ್‌ಬಿಡ್ತೀನಿ ಖಬರ್ದಾರ್'' ಎಂದು ಪ್ರದರ್ಶಿಸಿದನು.

ಜಿರಳೆ ಕಂಡರೆ ಹೆದರುವ ಪಾಟೀಲರು ಒಂದು ದಿನಕ್ಕೆ ಬದಲಾಗಿ ಎರಡು ದಿನ ರಜೆ ಮಂಜೂರು ಮಾಡಿದರಲ್ಲದೆ, ಹತ್ತರ ಎರಡು ನೋಟು ಕೊಟ್ಟು ಕೋನನನ್ನು ಸಾಗಹಾಕಿ ಬಚಾವ್ ಆದರು. ಅಂದಿನಿಂದ ಅವರು ಯಾರನ್ನೂ ಬಯ್ಯಲಿಲ್ಲ. ■

ಒಂದಾಣೆ ಮಾಲೆ

# ದಯೆ

ಎಂ.ಆರ್. ಭಟ್

ಒಮ್ಮೆ ಅಮೆರಿಕದ ಅಧ್ಯಕ್ಷ ಲಿಂಕನನು ರಾಜಸಭೆಗೆ ಹೋಗುತ್ತಿದ್ದನು. ರಸ್ತೆಯಲ್ಲಿ ಒಂದು ಹಂದಿಯು ಕೆಸರಿನಲ್ಲಿಳಿದು, ಮೇಲಕ್ಕೆ ಬರಲಾರದೆ ಪೇಚಾಡುತಿದ್ದುದು ಕಂಡುಬಂತು. ಅದು ಎಷ್ಟು ಯತ್ನ ಮಾಡುತ್ತಿತ್ತೋ ಅಷ್ಟು ಆ ಕೆಸರಲ್ಲಿ ಹೂತುಹೋಗುತಿತ್ತು.

ಹಂದಿಯ ಆ ದಯಾಕರ್ಷಕ ದಶೆಯನ್ನು ಕಂಡು ಲಿಂಕನನು ಕರುಣೆಗೊಂಡನು. ತಾನು ಧರಿಸಿದ್ದ ವಸ್ತ್ರಗಳ ಸಹಿತ ಆ ಕೆಸರಲ್ಲಿ ಇಳಿದು, ಆ ಹಂದಿಗೆ ಮೇಲಕ್ಕೆ ಬರಲು ಸಹಾಯವಿತ್ತನು.

ಅಧ್ಯಕ್ಷನ ಬಟ್ಟೆಗಳಿಗೆ ತುಂಬ ಕೆಸರು ಅಂಟಿಕೊಂಡಿತು. ಮನೆಗೆ ಹಿಂದಿರುಗಿ ಬಟ್ಟೆಗಳನ್ನು ಬದಲಾಯಿಸೋಣವೆಂದರೆ, ಸಭೆಯ ಸಮಯ ಮೀರಿಹೋಗಿದೆ. ಅವನು ನೇರಾಗಿ ಸಭೆಗೆ ಹೋದನು.

ಸಭಾಸದನವು ಈ ವಿಚಿತ್ರ ಉಡುಪನ್ನು ನೋಡಿ ಚಕಿತವಾಯಿತು. ಅವರ ಪ್ರಶ್ನೆಗಳಿಗೆ ಅಧ್ಯಕ್ಷನು ಉತ್ತರವಾಗಿ, ದಾರಿಯಲ್ಲಿ ನಡೆದುದೆಲ್ಲವನ್ನೂ ವಿವರಿಸಿದನು. ಅವರೆಲ್ಲರೂ ಅದನ್ನು ಕೇಳಿ, ಅವನ ದಯಾಗುಣವನ್ನೂ ಕೊಂಡಾಡಿದರು. ಆಗ ಅಧ್ಯಕ್ಷನು, ಅವರನ್ನು ತಡೆದು ಹೀಗಂದನು:

''ನೀವು ವ್ಯರ್ಥ ನನ್ನ ಪ್ರಶಂಸೆ ಮಾಡುತ್ತಿರುವಿರಿ. ನನಗೆ ಹಂದಿಯ ಮೇಲೆ ಯಾವ ದಯೆಯೂ ಬರಲಿಲ್ಲ. ಅದು ದುಸ್ಸಾಧ್ಯ ಕೆಸರಲ್ಲಿ ಬಿದ್ದುದನ್ನು ನೋಡಿ ನನಗೆ ದುಃಖವಾಯಿತು. ನನ್ನ ದುಃಖವನ್ನು ಹೋಗಲಾಡಿಸುವುದಕ್ಕೇನೇ, ಅದನ್ನು ನಾನು ಹೊರತೆಗೆದೆನು. ಹಂದಿಗೆ ನಾನು ಯಾವ ಉಪಕಾರವನ್ನೂ ತೋರಲಿಲ್ಲ. ನನ್ನ ಒಳ್ಳೇದನ್ನೇ ಮಾಡಿದೆ; ಸ್ವಕಲ್ಯಾಣವನ್ನು ಸಾಧಿಸಿದೆ. ಏಕೆಂದರೆ, ಅದನ್ನು ಹೊರಗೆ ತೆಗೆದೊಡನೆಯೇ ನನ್ನ ದುಃಖವು ಮಾಯವಾಯಿತು.''

ಆ ಮಾತುಗಳು ಅರ್ಥಗರ್ಭಿತವಾಗಿವೆ. ಪ್ರಾಣಿ ಮಾತ್ರದ ದುಃಖದಿಂದ ದುಃಖಿತನಾದವನು, ತನ್ನನ್ನೇ ಆ ದುಃಖದಿಂದ ವಿಮೋಚಿಸುವ ಸ್ವಚೇಷ್ಟೆಯೇ ದಯೆಯೆಂದು ಕರೆಯಲ್ಪಡುತ್ತದೆ.



ರಾಧಾಕೃಷ್ಣ

ಎಂದೋ, ಯಾರೋ ಹೇಳಬೇಕಾಗಿದ್ದ, ಯಾವತ್ತೋ ಹೇಳಿ ಮುಗಿಸಬಹುದಾಗಿದ್ದ ಅತ್ತ ಮರೆವಿಗೂ ಸರಿಯದ, ಇತ್ತ ನೆನಪಾಗಿಯೂ ಉಳಿಯಲೊಪ್ಪದ ಈ ಒಂದು ಕತೆಯನ್ನು, ಇಷ್ಟು ದಿನವೂ ನೀವ್ಯಾರೂ ನಂಬಲಾರಿರಿ ಎಂಬ ಅಪನಂಬಿಕೆಯಿಂದಲೇ ದೂಡುತ್ತಾ ಬಂದಿದ್ದನ್ನು, ಇಂದಾದರೂ ಹೇಳಲು ಹೊರಟಿರುವುದೂ ಕೂಡಾ-'ನೀವು ನಂಬುವುದಾದರೇ...' ಎಂಬ ಪೀಠಿಕೆಯಿಂದಲೇ. ಹೇಳಿದರೆ ಈಗಲೇ, ಇಲ್ಲವೆಂದರೆ ಮತ್ತೆಂದೂ ಸಾಧ್ಯವಿಲ್ಲವೆಂದು ತಡವಾಗಿಯಾದರೂ ಮೂಡಿಬಂದ ಆತ್ಮವಿಶ್ವಾಸದಿಂದ, ಒಳಗೆಲ್ಲೋ ಉಳಿದುಹೋದ ತುಣುಕೊಂದನ್ನು ಬಲವಂತದಿಂದ ಹೊರದಬ್ಬಿ ಇದೀಗ ಸಾದರಪಡಿಸಲು ಹೊರಟಿರುವುದೂ ಕೂಡಾ, ನೀವು ನಂಬುತ್ತೀರಿ ಎಂಬ ದೃಢವಿಶ್ವಾಸದ ಆಸೆಯ ಉದ್ದೇಶವೂ ಇದರಲ್ಲಿ ಮಿಳಿತವಾಗಿರುವುದರಿಂದ...



ಜಯಶ್ರೀ ಕಾಸರವಳ್ಳಿ

# ಒದ್ದೆ ಅಂಗಳದ ಕನಸ ತುಣುಕುಗಳು

ಹಾಗಾಗಿ, 'ನೀವು ನಂಬುವುದಾದರೇ...' ಎನ್ನುವುದನ್ನು ಇನ್‌ವರ್ಟೆಡ್ ಕಾಮಾದಲ್ಲಿ ಹಾಕಿ, ಈಗ ಹೇಳಲು ಹೊರಟಿರುವುದೇನಿದ್ದರೂ ಮಾತ್ರ ಕತೆ.

ಇದೇ ಮನೆಯ ಬಾಗಿಲಾಚೆ ನಡೆದದ್ದು, ಕತೆ ಎಂದ ಮೇಲೆ, ಅದು ಬಾಗಿಲಾಚೆಯೇ ಜೀವ ತಳೆಯುವುದು.

ರಾತ್ರಿ, ಸಾವಿಗೆ ಸಂಬಂಧಪಟ್ಟಂತಹ ಯಾವುದೇ ಕತೆಗಳಂತೆ, ಕತ್ತಲ ಕಪ್ಪಿನೊಂದಿಗೆ ಸಂಬಂಧವಿಟ್ಟುಕೊಂಡು ಮಧ್ಯರಾತ್ರಿ ನಡೆದಂತಹ ಕತೆಯಿದು.

ಅಥವಾ ಯಾರಿಗೆ ಗೊತ್ತು? ನಾವು ರಾತ್ರಿ ಎಂದುಕೊಂಡಿದ್ದು ಮತ್ತೊಬ್ಬರಿಗೆ ಹಗಲಾಗಿಯೂ ಕಾಣಸಿರಬಹುದು. ಅಂದಷ್ಟೇ ಕೋಣೆಯನ್ನು ಸ್ವಚ್ಛವಾಗಿ ತೊಳೆದು, ಕುರ್ಚಿ, ಟೇಬಲ್‌ಗಳ

ಧೂಳನ್ನೆಲ್ಲಾ ಜಾಡಿಸಿ, ಅವುಗಳನ್ನೆಲ್ಲಾ ಅಂದವಾಗಿ ಎಂದಿನ ಸ್ವಸ್ಥಾನಗಳಲ್ಲೇ ಜೋಡಿಸಿಡಲಾಗಿತ್ತು. ಮೇಲೆ ತಿರುಗುತ್ತಿದ್ದದ್ದು ಒಂದು ಫ್ಯಾನ್. ಯಾವಾಗಿನ ಅದೇ ಏಕತಾನದ ಸದ್ದಿನೊಂದಿಗೆ, ಹೊರಗೆಲ್ಲೋ ಓಡುವ ಆಟೋಗಳ ಸದ್ದು, ಮೇಲೆಲ್ಲೋ ಹಾರಿಹೋಗುವ ವಿಮಾನದ ಸದ್ದುಗಳು ಸೇರಿಕೊಳ್ಳುತ್ತಿದ್ದವು.

ಎದುರಿಗೇ ಒಂದು ಅಂಗಳ. ಬೋಳೋ ಬೋಳು. ಎಲ್ಲಿಂದಲೋ ಹಾರಿಬಂದ ಒಂದು ಏರೋಪ್ಲೇನ್ ಹುಳ, ಯದ್ವಾತದ್ವಾ ಹಾರಾಡಿ, ಇದ್ದಕ್ಕಿದ್ದಂತೇ ವಿಲವಿಲ ಒದ್ದಾಡಿ, ಅವಾಗಷ್ಟೇ ಪ್ರಾಣಬಿಟ್ಟು, ತಟಸ್ಥವಾಗಿ ಬಿದ್ದುಕೊಂಡಿತ್ತು. ಅದರ ಒದ್ದಾಟಕ್ಕೆ ಬಾಲಗಳು ಯಾವಾಗಲೋ ಕಳಚಿ, ಹೊಟ್ಟೆ ಅಂಗಾತವಾಗಿ, ಆ ಪುಟ್ಟ ಹುಳದಲ್ಲಿ ಅದೆಲ್ಲೋ ಅಡಗಿ ಕುಳಿತ ಪ್ರಾಣ ಎಂಬುವುದು ನೋಡನೋಡುತ್ತಿದ್ದಂತೇ ಫುರ್ರನೇ ಹಾರಿಹೋಗಿ, ನಂತರ ಬರೀ ಅಂಗಳದಲ್ಲಿ ಬೋಳು ಬೋಳಾಗಿ ಬಿದ್ದಿದ್ದ ಆ ಯಃಕಶ್ಚಿತ್ ಹುಳ ಬಿಚ್ಚುತ್ತಿದ್ದದ್ದು ಮಾತ್ರ ಕೆಲವು ನೆನಪುಗಳನ್ನು...

ಸತ್ತವರ ನೆನಪು; ಸಾಯದೇ ಬದುಕಿದವರ ನೆನಪು; ಬದುಕಿಯೂ ಸತ್ತವರ ನೆನಪು; ಸತ್ತೂ ಬದುಕಿದವರ ನೆನಪು... ಒಟ್ಟಿನಲ್ಲಿ ನೆನಪುಗಳು...

ಅಂಗಳದಲ್ಲಿ ಹದವಾಗಿ ಹರವಿಕೊಳ್ಳುತ್ತಿದ್ದ ಸೂರ್ಯನ ಹೊಂಬಣ್ಣದಲ್ಲಿ ಇದ್ದಕ್ಕಿದ್ದಂತೇ ಆಕಾರ ತಾಳಿ, ಬಣ್ಣ ಬದಲಾಯಿಸಿ, ಪುಟಿಯುವ ಉತ್ಸಾಹದಲ್ಲಿ ಒಮ್ಮೆ ಮೇಲೇರಿ ಜಿಗಿದು, ಮತ್ತೆ ಚದುರಿ, ಚೆಲ್ಲಾಪಿಲ್ಲಿಯಾಗಿ ಉದುರಿಹೋಗುತ್ತಿದ್ದದ್ದು ನೆನಪುಗಳಲ್ಲಿನ ನೆನಪುಗಳು...

ಕತ್ತಲಲ್ಲಿ ಆಕಾರತಾಳಿ ಮೂಡಿಬರುವ ಹಾಗೆ ಮೊದಲು ಮೂಡಿಬಂದಿದ್ದು ಮಳೆ. ಮಳೆಯೋ ಮಳೆ. ಚಂಡಮಾರುತದ ಭಾರೀ ಮಳೆ. ಎದುರಿನ ಇದೇ ನಗರ ಅಲ್ಲೋಲಕಲ್ಲೋಲವಾಗುವ ಹಾಗೆ ಸಮುದ್ರದ ನೀರು ಉಕ್ಕೇರಿ ನೊರೆನೊರೆಯಾಗಿ ಕಾರಿಕೊಳ್ಳುತ್ತಾ, ದಂಡೆಯ ಎದುರಿನ ಫ್ಲಾಟ್‌ಗಳನ್ನೆಲ್ಲಾ ಬಡಿದೂ, ಬಡಿದೂ ಹಿಂಸರಿಯುತ್ತಾ, ಪ್ರತಿಬಾರಿಯ ಸ್ಪರ್ಶಕ್ಕೂ ಇಷ್ಟಿಷ್ಟೇ ಉಪ್ಪುನೀರನ್ನು ಕೆಳ ಅಂತಸ್ತಿನ ಮನೆಗಳಲ್ಲಿ ಶೇಖರಿಸಿ, ಅಂತಹ ಮನೆಗಳಲ್ಲಿ ವಾಸಿಸುವವರ ಆತಂಕ ಹೆಚ್ಚಿಸಿ, ಮೇಲಂತಸ್ತಿನವರ ಜೀವವನ್ನು ಹಿಡಿ ಮುಷ್ಟಿಯಲ್ಲಿ ಹಿಡಿದು ಅಲ್ಲಾಡಿಸುತ್ತಿರುವಾಗಲೇ ಚಕ್ಕನೇ ಕವಿದುಕೊಂಡಿದ್ದು ಅಂಧಕಾರ!

ಸುರಿಯುವ ಮಳೆಗೆ ಓಲಾಡುತ್ತಿರುವ ಫ್ಲಾಟ್‌ಗಳಲ್ಲಿ ರಾತ್ರಿಯಿಡೀ ನಿದ್ದೆಯೂ ಇರದೇ, ಕನಸೂ ಬೀಳದೇ, ತುಟಿ ಪಿಟಕ್ ಎನ್ನದೇ ಜೀವ ಕೈಯಲ್ಲಿ ಹಿಡಿದು ಮುದ್ದೆಯಾಗಿ ಮೂಲೆಯಲ್ಲಿ ಕುಳಿತಿರುವಾಗಲೇ ಸುರಿದ ಒಂದು ಕತ್ತಲಿಗೆ,

ಮುಚ್ಚಿದ್ದ ಬಾಗಿಲಹಿಂದೆ ಎದ್ದಿದ್ದ ಒಂದು ಪ್ರಪಂಚದಲ್ಲಿ ಕತೆ ತನ್ನಷ್ಟಕ್ಕೇ ಬಿಚ್ಚಿಕೊಳ್ಳುತ್ತಿತ್ತು...!

ಸರಾಗವಾಗಿ ಹರಿದು, ಮಾರುದ್ದದಲ್ಲಿ ಬೆಳೆದು, ಸರಸರ ಸಾಗಿಹೋಗುತ್ತಿದ್ದ ಕತೆಯನ್ನು ದಢನೇ ಹಿಡಿದು ಅಲುಗಿಸಿದ್ದು ಎದುರಿನ ಈ ಸಾವು! ಕತೆಗೆ ಪೂರಕವಾಗಿ ಸಾವು ಬಂತೋ, ಸಾವಿಗೆ ಪೂರಕವಾಗಿ ಕತೆ ಮೂಡುತ್ತಿದೆಯೋ ಹೇಳುವುದು ಕಷ್ಟ. ಆದರೆ ಕತೆಯ ಕಣ್ಣಳತೆಯೊಳಗೇ ಸಾಷ್ಟಾಂಗ ಮಲಗಿದ್ದ ಆ ಸಾವಿಗೆ ಜೀವವಂತೂ ಇರಲಿಲ್ಲ. ನಿಜ. ಅಲ್ಲದೇ ಹೆಣಕ್ಕೆ ಜೀವ ಇರಲೂ ಸಾಧ್ಯವಿರಲಿಲ್ಲವಲ್ಲ! ಆದರೆ ಹಾಗೆ ಸಾಷ್ಟಾಂಗ ಮಲಗದೇ ಅಲ್ಲಿ ಓಡಿಯಾಡುತ್ತಿದ್ದ ಅನೇಕರ ದೇಹದೊಳಗೂ ಜೀವ ಇತ್ತೋ, ಇಲ್ಲವೋ! ಏಕೆಂದರೆ ಸಾವಿನಲ್ಲಿ ಅದ್ದಿಟ್ಟ ಆ ದೇಹ ಜೀವದಿಂದ ಇದ್ದಂತೆಯೂ, ಜೋರಾಗಿ ಉಸಿರಾಡುತ್ತಾ ಓಡಿಯಾಡುತ್ತಿರುವವರು ಸತ್ತ ಪ್ರೇತದಂತೆಯೂ ಕಾಣಿಸುತ್ತಿದ್ದಂತಹ ಕತ್ತಲದು.

ಎದುರಿಗೇ ನಿರ್ಜೀವವಾಗಿ ಬಿದ್ದುಕೊಂಡಿದ್ದ ಆ ದೇಹವನ್ನು, ಯಾರೋ ಹೊಡೆದು ಕೆಳಗುರುಳಿಸಿದ್ದರಿಂದ, ಸದ್ಯ ಪಾಲಿಥಿನ್ ಕವರಿನೊಳಗೆ ಬಿಗಿಯಾಗಿ ಸುತ್ತಿಸಿಕೊಂಡಿದ್ದ ಆ

ಹೆಣಕ್ಕೆ ಕೈಯಿತ್ತೋ, ಕಾಲಿತ್ತೋ, ರುಂಡ ಮಾತ್ರವಿದ್ದು, ಮುಂಡ ನಾಪತ್ತೆಯಾಗಿತ್ತೋ, ಕತ್ತಲಲ್ಲಿ ಹೇಳುವುದಾದರೂ ಹೇಗೆ? ಆದರೆ ಸತ್ತ ಆ ಹೆಣದ ಮೂಗಿನ ಮೇಲೆ ಎರಡು ಜೀವಂತ ನೊಣಗಳು ಹಾರಾಡುತ್ತಾ, ಅಂದಿನ ರಾತ್ರಿಯ ಸಲ್ಲಾಪಕ್ಕೆ ತಮ್ಮ ಇನಿದನಿಯ ಇಂಪನ್ನು ಕೂಡಿಸುತ್ತಿದ್ದವು...

ಝುಂಯೀ. ಝುಂಯೀ... ಝುಂಯೀ...

ನೀರವ ಕತ್ತಲಲ್ಲಿ ಸಿಳ್ಳಿನಂತೆ ಸೀಳಿಕೊಂಡು ಬರುವ ಈ ಧ್ವನಿಯೆಲ್ಲಾ ಎಷ್ಟು ಚಿರಪರಿಚಿತ. ನಿಮ್ಮ ಕಿವಿಯ ಬಳಿಯೇ ಮೊಳಗಿದ ಹಾಗೆ; ನಿಮ್ಮ ಕಣ್ಣೆದುರೇ ನೊಣಗಳು ಹಾರಾಡಿದ ಹಾಗೆ; ನಿಮ್ಮ ಹೃದಯಕ್ಕೆ ತಾಗುವಂತೆ, ಸತ್ತವನ ಹೆಣದಿಂದ ಸಣ್ಣ ನಿಟ್ಟುಸಿರು ಸಾವಕಾಶವಾಗಿ ಹರಿದು, ನಿಮ್ಮತ್ತಲೇ ತೇಲಿ ಬಂದಹಾಗೆ...

ಯಾರ್‍ಯಾರೋ ಬರುತ್ತಿದ್ದರು; ಮತ್ಯಾರ್‍ಯಾರೋ ಹೊರಟುಹೋಗುತ್ತಿದ್ದರು. ಕಪ್ಪಿನಿಂದ ಮುಖಗಳು ಸರಿಯಾಗಿ ಕಾಣಿಸುತ್ತಿರಲಿಲ್ಲ. ಹಾಗೆ ನೋಡಿದರೆ ಅಲ್ಲೇನೂ ಅಂತಹ ದಟ್ಟ ಜನ ಸಂದಣಿ ಇರಲೇ ಇಲ್ಲ. ಪ್ರಾಯಶಃ ಸತ್ತವ ನೇನಾದರೂ ನಾಮಾಂಕಿತ ಸಿನಿಮಾ ಸ್ಟಾರೋ, ಲೇಖಕನೋ, ಬುದ್ಧಿಜೀವಿಯೋ ಕಡೆಗೆ ಲೋಟ-ತಟ್ಟೆ-ಸೌಟು ಎತ್ತುವ ಟಿವಿ ಪ್ರೊಡಕ್ಷನ್ ಬಾಯಾದರೂ ಆಗಿದ್ದಿದ್ದರೆ ದೂರದಲ್ಲಿ ಕುಳಿತವರ ಕಣ್ಣಿಗೆ ನೊಣಗಳು ಕಾಣದಷ್ಟಾದರೂ ಜನರು ಸೇರುತ್ತಿದ್ದದ್ದು ಅಕ್ಷರಶಃ ನಿಜವೆನ್ನುವುದಾದರೆ, ಅಲ್ಲಿ ಅಷ್ಟು ಇರಲಿಲ್ಲ ಎಂದೇ ಹೇಳಬೇಕು.

ನೀಟಾಗಿ ಕುರ್ಚಿ, ಟೇಬಲ್ ಜೋಡಿಸಿಟ್ಟಿದ್ದ ಗಾರೆ ಎದ್ದ ಅಂಗಳದಲ್ಲಿ ಕಾಣಿಸುತ್ತಿದ್ದದ್ದು ಕಪ್ಪು ಮೆತ್ತಿಟ್ಟುಕೊಂಡಿದ್ದ ಕರಿ ಅಂಗಳದ ನೆರಳು... ಅಲ್ಲಲ್ಲಿ ಒಂದೆರಡು ಅರೆಬರೆ ಮುಖಗಳು. ಸಾಷ್ಟಾಂಗ ಮಲಗಿದ್ದ ಹೆಣ... ಅದರ ಮೂಗಿನೊಳಗಿನ ಎರಡು ಜೀವಂತ ನೊಣಗಳು...



ಗೋಡೆಗೆ ಅಂಟಿಕೊಂಡಂತೇ ಒಂದು ಸಣ್ಣ ಕಿಟಕಿ. ಪ್ರಾಯಶಃ ಬೆಳಕಿಂಡಿ ಇರಬೇಕು. ಅಜ್ಜಿಯಂದಿರು ಹೇಳುವ ಕತೆಗಳಲ್ಲಿ ಬರುವಂತಹ ಬೆಳಕಿಂಡಿ. ಕಾಗಕ್ಕಾ, ಗುಬ್ಬಕ್ಕಾಗಳು ತಮ್ಮ ಕೊಕ್ಕು ಮಾತ್ರ ಒಳತೂರಬಹುದಾದಂತಹ ಬೆಳಕಿಂಡಿ.

ಅಂತಹ ಬೆಳಕಿಂಡಿಯಾಚೆ ಉದ್ದಾನುದ್ದಕ್ಕೂ ಹರಡಿರುವ ವಿಸ್ತಾರವಾದ ಪ್ರಪಂಚದಲ್ಲಿ ಮಾಡಲೇನೂ ತಿಳಿಯದೇ ಸುಮ್ಮನೇ ಹಣಕಿದರೆ, ಉದೋ ಅಂತ ಮಳೆ ಸುರಿಯುತ್ತಿತ್ತು.

'ನಿಮ್ಮಪ್ಪ ಸತ್ತಾಗ ಚಪ್ಪರದಂಗಳದ ಕಂಬಗಳು ಕಾಣದಷ್ಟು ಮಳೆಯೋ ಮಳೆ...'

ಕಣ್ಣು ನೆಟ್ಟ ಮಳೆಯಲ್ಲಿ ಕತೆ ಹುಟ್ಟುತ್ತಿತ್ತು!

ಹೆಣ ಮಲಗಿಸಲು ಅಂಗಳದಲ್ಲಿ ಜಾಗವೇ ಇರಲಿಲ್ಲ. ನಾಲ್ಕು ಆಳುಗಳು ಅಯ್ಯನ ಚಟ್ಟವನ್ನು ಹೆಗಲ ಮೇಲೆ ಹೊತ್ತು, ನೀರಿರದ ಜೆಟ್ಟಗಿನ ಜಾಗಕ್ಕಾಗಿ ಇಡೀ ದಿನ ಮನೆಯೆಲ್ಲಾ ಸುತ್ತಿಬಂದರು. ಕಡೆಗೆ ಮುಸ್ಸಂಜೆಯಲ್ಲಿ ಬಚ್ಚಲೊಲೆಯ ದಂಡೆಯಲ್ಲಿ ಹೆಣ ಬಿಸಿ ಮಾಡಿ ಸುಡಬೇಕಾಯಿತು ಹೊರಗೆ ಚಳಿಯೋ ಚಳಿ. ಮಳೆಯಲ್ಲಿ ನೆನೆಯುತ್ತಾ, ರೆಂಜದ ಮರದ ಕೆಳಗ ನಿಂತು ನೋಡಿದ್ದ, ಆ ಒದ್ದೆ ಹೆಣದ ಮೆರವಣಿಗೆಯೇ ನಿಮ್ಮಪ್ಪಂದು...'

ನೆನಪುಗಳನ್ನು ಯಾರೋ ಬಿಚ್ಚುತ್ತಿದ್ದರು. ಬಿಚ್ಚುತ್ತಿದ್ದವರು ಯಾರು ಎಂದು ಹುಡುಕಿದರೆ, ಕಾಣಲು ಆ ಕತ್ತಲಲ್ಲಿ ಯಾರಾದರೂ ಕಂಡರೆ ತಾನೆ? ಕಂಡರೂ ಬಿಚ್ಚುವಂತಹ ನೆನಪು ಇರುವುದಾದರೂ ಯಾರಿಗೆ ಎಂದು ಕೇಳುವುದಾದರೂ ಹೇಗೆ? ತಿಳಿದಿದ್ದರೆ ಕೇಳಿ, ಅವರಿಗೂ ಇಂತಹ ನೆನಪುಗಳಿದ್ದಿದ್ದರೆ, ಇನ್ನೊಬ್ಬರ ನೆನಪುಗಳಲ್ಲಾದರೂ ಸತ್ತವರನ್ನು ಜೀವಂತಗೊಳಿಸಬಹುದಿತ್ತು.

ಆದರೆ ಅಲ್ಲಿದ್ದಷ್ಟು ಕತ್ತಲಿಗೆ ಸುರಿಯುವ ಮಳೆ ಮಾತ್ರ. ಮಳೆಯಲ್ಲಿ ನೆನೆದೂ, ನೆನೆದೂ ಹಿಡಿಯಾಗಿ ಇಳಿವ ನೆನಪೂ ಇಡಿಯಾಗಿ ಮೂಡಿ ಬರುತ್ತಿರಲಿಲ್ಲ. ಆಕಾಶ ಸೀಳಿ ಹೊಳೆಯಿಸಿದ ಕೋಲುಮಿಂಚು, ಅಂತರಂಗದಲ್ಲಿ ಅವಿತು ಕುಳಿತ ಹಲವಾರನ್ನು ಹೊರಚೆಲ್ಲಿ, ಕ್ಷಣಮಾತ್ರ ಮಿಂಚಿಸಿ ಮರೆಯಾಗುವ ಅನೇಕರ ಅರೆಬರೆ ಮುಖಗಳು ಅವು. ಅದು ಬಿಚ್ಚುವ ಇಂತಹ ನೆನಪುಗಳು ಕತ್ತಲ ಆಳದಿಂದ ಬಂದಿದ್ದೋ, ಅಲ್ಲವೋ ಯಾರಿಗೆ ಗೊತ್ತು? ನೆನಪಿಗೆ ರಾತ್ರಿ ಎನಿಸಿದ್ದು ಇತರರಿಗೆ ಹಗಲಾಗಿರಬಹುದು. ಬಹುಶಃ ಹಗಲು-ರಾತ್ರಿ; ರಾತ್ರಿ-ಹಗಲು. ಇಂತಹ ಜಂಥೆಗೆ ಬಿದ್ದಂತಹ ಗೊಂದಲದ ಒಂದು ಕಪ್ಪದು.

ಆಕಾಶದಲ್ಲಿ ಮಿನುಗಿದ್ದು, ಸತ್ತು ನಕ್ಷತ್ರಗಳಾದವರು ಬದುಕಿರುವವರಿಗೆ ತೋರುವ ತಮ್ಮ ಮಿಣುಕುದೀಪವೇ ಅಥವಾ ಹಾಡಹಗಲಲ್ಲಿ ಮಿರಮಿರ ಮಿಂಚುವ ಅಸಂಖ್ಯ ಜನಕೋಟಿಯ ಕರಿಮಂಡೆಯೇ...

ಮಗ್ಗುಲಲ್ಲಿ ಯಾರೋ ಪಿಸಿಪಿಸಿ ಮಾತನಾಡುತ್ತಿದ್ದರು. ತುಟಿಗೆ ಲಿಪ್‌ಸ್ಟಿಕ್ ಬಳಿದ ಸಾಕಷ್ಟು ದಪ್ಪಗಿನ ಹೆಂಗಸು, ಬೆಳ್ಳಗೆ ಎತ್ತರಕ್ಕೆ ಇರುವ ಮತ್ತೊಂದು ಹೆಂಗಸು.

"... ಸತ್ತವರ ಆತ್ಮಕ್ಕೆ ತೃಪ್ತಿಯಾಗಬೇಕು. ಸರಿಯಾದ ವೈಕುಂಠ ನೆರವೇರಿಸಬೇಕು. ಸರಿಯಾಗಿ ಸತ್ತವರಿಗೇ ಇಂತಹದನ್ನೆಲ್ಲಾ ಮಾಡುತ್ತಾರೆ. ಇನ್ನು ಇಂತವರನ್ನು ಕೇಳಬೇಕೇ? ಅದೇನೇನು ಆಸೆಗಳು, ಅತೃಪ್ತಿಗಳು ಹಾಗೇ ಉಳಿದು, ಅರ್ಧಕ್ಕೇ ಸತ್ತಿದಾರೋ...?"

ನಂತರ ಹಾರಾಡಿದ್ದು ಮತ್ತೆ ಅದೇ ನೊಣಗಳು. ಝುಂಯೀ... ಝುಂಯೀ.... ಝುಂಯೀ...

ಛೇ ಪಾಪ! ಹೆಣಕ್ಕೆ ಬದುಕಿದವರ ಅದ್ಭುತ ಸಮಸ್ಯೆಗಳಿಗೆ ಪರಿಹಾರ ಸೂಚಿಸಲು ತಿಳಿದಿರುವುದಾದರೂ ಹೇಗೆ? ಅಲ್ಲೇನಿದ್ದರೂ ಉಳಿದಿರುವುದು ನಿರುತ್ತರ. ಪ್ರಾಯಶಃ ಅದರ ನಿರುತ್ತರದ ಮೌನವನ್ನು ಬೇರೆಯವರು ಭರ್ತಿ ಮಾಡಬೇಕಾಗಿದ್ದಂತಹ ಖಾಲಿ ಜಾಗ. ಹಾಗಾಗಿ ಉತ್ತರವಿಲ್ಲದ ಆ ಖಾಲಿ ಜಾಗವನ್ನು ಭರ್ತಿ ಮಾಡುವ ಹವಣಿಕೆಯಲ್ಲಿ ಓಡಿಯಾಡುತ್ತಿದ್ದವರೂ ಇದ್ದರಲ್ಲಿ. ಅದಕ್ಕೋ ಏನೋ, ಅವರು ಭರ್ತಿ ಮಾಡಬೇಕಾಗಿದ್ದ ಆ ಖಾಲಿ ಜಾಗದಲ್ಲಿ ಹಲವಾರು ಬಿಂದುಗಳು ಮೂಡಿದ್ದವು. ಒಂದು ಬಿಂದುವಿನ ಜೊತೆ ಸೇರಬಹುದಾದಂತಹ ಅಂತಹದೇ ಅನೇಕ, ಅಸಂಖ್ಯ ಬಿಂದುಗಳು... ಸೊನ್ನೆಗಳ ಆ ನಿರಾಕಾರದ ಶೂನ್ಯದಲ್ಲಿ ಲೊಚಗುಟ್ಟುವ ಇಂತಹ ಧ್ವನಿಗಳು, ಅಂತಹ ಕಡೆಗಳಲ್ಲಿ ಹುಟ್ಟುವುದೂ ಸಹಜವೇ. ಇಲ್ಲದಿದ್ದರೆ ಬದುಕಿದ್ದಕ್ಕೆ ಏನು ಪುರಾವೆ?

ಆನಂತರ ಬೆಳಕಿಂಡಿಯಾಚೆಗಿನ ವಿಸ್ತಾರವಾದ ಪ್ರಪಂಚದಲ್ಲಿ ಗುಡುಗಿದ ಒಂದು ಗುಡುಗು, ತನ್ನ ಮಗ್ಗುಲಿಗೇ ಸಾವಕಾಶವಾಗಿ ಶುಭ್ರ ಕೋಲುಮಿಂಚನ್ನು ಮಿನುಗಿಸಿ, ಕತ್ತಲಿಗೆ ಕಾಣದ ಬೆಳಕಿನ ಪ್ರಪಂಚವನ್ನು ಕ್ಷಣ ಕುಣಿಸಿ ಮರೆಯಾಯಿತು.

'... ಅಂಗಳದಲ್ಲಿ ನೀರು ತೊಟ್ಟಿಕ್ಕುತ್ತಿತ್ತು. ಬಚ್ಚಲೊಲೆಯಲ್ಲಿ ಹೆಣ ಕಾಸಿದ್ದರಿಂದ ಆನಂತರ ಹಂಡೆಯಲ್ಲಿ ಕುದಿಯುವ ನೀರಿಗೆಲ್ಲಾ ವಾಸನೆ ಅಂಟಿಕೊಂಡಿತು. ಸತ್ತ ಮನುಷ್ಯರ ಹೆಣಕ್ಕೆ ಬೆಂಕಿ ಇಟ್ಟಾಗಿನ ವಾಸನೆ... ಆ ವಾಸನೆಯನ್ನು ಅತಿಯಾಗಿ ಆಘ್ರಾಣಿಸಿದರೆ ಒಂದು ಚಿರಪರಿಚಿತ ವಾಸನೆ ಮೂಗಿಗೆ ಅಡರುತ್ತಿತ್ತು...

... ಅದೇ ನಿಮ್ಮಪ್ಪನ ಮೈಯ ಬೆವರ ವಾಸನೆ...'

ಆಗ ನಡುಗಿದ್ದು ಕತೆಯೊಳಗಿನ ಧ್ವನಿಯೇ, ಸುರಿಯುವ ಮಳೆಯ ಗುಡುಗಿಗೆ ಭೂಮಿಯೇ ತಿಳಿಯದು. ಏಕೆಂದರೆ ಮತ್ತೆಂದೂ ಧ್ವನಿ ಹಾಗೆ ಕಂಪಿಸಲೇ ಇಲ್ಲ.

ಯಾರೋ ಹೆಣ ಎತ್ತುತ್ತಿದ್ದರು. ಒಬ್ಬ ಆಜಾನುಬಾಹು ಮನುಷ್ಯನ ದೇಹ. ಪಾಲಿಥಿನ್ ಕವರಿನೊಳಗೆ ಕೇವಲ ಒಂದು ಹಿಡಿ ಮುಷ್ಟಿಯಷ್ಟು ಗಾತ್ರಕ್ಕೆ ಇಳಿದುಹೋಗಿತ್ತು. ಆದರೂ ಅದೊಂದು ಹೆಣಭಾರ ಎಂಬಂತೆ ಎತ್ತಿ ಚಟ್ಟಕ್ಕೆ ಹೇರುತ್ತಿದ್ದರು.

ಝುಂಯೀ... ಝುಂಯೀ... ಝುಂಯೀ...

ಸದ್ದು ಮಾಡುತ್ತಿದ್ದ ನೊಣಗಳು ತಕ್ಷಣ ಗೊಂದಲಗೊಂಡಂತೆ ಎಲ್ಲೆಂದರಲ್ಲಿ ಹಾರತೊಡಗಿದವು. ಆ ಎರಡು ನೊಣಗಳು ಮೇಲೆ-ಕೆಳಗೆ

ಜಿಗಿದು, ಕುಣಿದು, ಹಾರಿ ಜೀವವಿದ್ದವರ ಮೇಲೆ, ಇಲ್ಲದವರ ಮೇಲೆ ಎಂದು, ಅಲ್ಲಿದ್ದ ಮೂರು-ಮತ್ತೊಂದು ಜನರಲ್ಲಿ ಯಾರನ್ನೂ ಬಿಡದೇ, ಎಲ್ಲರ ಮೇಲೂ ಕ್ಷಣ ಕುಳಿತು, ಕ್ರಮೇಣ ತಮ್ಮ ಎಂದಿನ ಸ್ಥಿತಿಗೇ ಹಿಂತಿರುಗಿ, ಅದಾಗಷ್ಟೇ ಹೆಣ ಎತ್ತಿ ಖಾಲಿ ಬಿದ್ದ ಅಂಗಳದ ಅದದೇ ಜಾಗಗಳಲ್ಲಿ ಹಾರಾಡುತ್ತಾ, ಆಗೊಮ್ಮೆ-ಈಗೊಮ್ಮೆ ನೆಲ ಮೂಸಿ ಮೂಸಿ ನೋಡುತ್ತಾ, ತಾವು ಮರೆತ ಹಾಡನ್ನು ಮತ್ತೆ ಆರಂಭಿಸಿದ್ದವು...

ಝುಂಯೀ... ಝುಂಯೀ... ಝುಂಯೀ...

'... ತೊಟ್ಟಿಲು ತೂಗುತ್ತಿತ್ತು. ಒಂದು ಆಕಳಿಕೆ ಹಾಕಿ ಏಳುವುದರೊಳಗೇ ಮಕ್ಕಳು ದೊಡ್ಡವರಾಗಿ, ಮೊಮ್ಮಕ್ಕಳು ಹುಟ್ಟಿ, ಮರಿಮಕ್ಕಳೂ ಅಂಬೆಗಾಲಿಕ್ಕುತ್ತಿದ್ದವು, ನೋಡು...

... ಹುಣ್ಣಿಮೆ ಚಂದಿರನಂತಹ ಮಗು. ಹಾಲುಗೆನ್ನೆಗಳಲ್ಲಿ ಗುಳಿಗಳು ಎರಡು.'

ಯಾರೋ ಲೊಚಲೊಚ ಮುದ್ದಿಡುತ್ತಾ, ಪಕಪಕ ನಕ್ಕ ಸದ್ದು.

ಹೆಣ ಹೊತ್ತು ಮೆರವಣಿಗೆ ಸಾಗುತ್ತಿತ್ತು. ಹೊರಗೋ ಮಳೆಯೋ ಮಳೆ. ಆಕಾಶ ಒಂದೇ ಸಲಕ್ಕೆ ಸಂಪೂರ್ಣ ಕರಗಿ ಮಗುಚಿ ಬೀಳುವಂತೆ ಏಕತಾನದಲ್ಲಿ ಸುರಿಯುತ್ತಿರುವ ಮಳೆ. ಅದೆಷ್ಟು ದಿನಗಳಿಂದ ಮಳೆ ಸುರಿಯುತ್ತಿತ್ತು, ಯಾರಾದರೂ ಕೇಳಿದರೇ? ಏಕೆಂದರೆ ಧ್ವನಿ ಎಂದಿನಂತೆ ಕಿವಿಯ ಬಳಿ ಸ್ಪಷ್ಟವಾಗಿ ಮೂಡಿಬರದೇ, ಎಲ್ಲೋ ದೂರದಿಂದ ತೇಲಿ ಬಂದಂತೆ ಇತ್ತು. ಮುಖ ಬೇರೆ ಕಾಣಿಸದ ಹಾಗೆ ಕವಿದುಕೊಂಡಿರುವ ಕತ್ತಲು. ಎಂದಿನಂತೆ ಪ್ರಪಂಚ ತನ್ನನ್ನು ತಾನೇ ಮೋಸಗೊಳಿಸಿಕೊಳ್ಳುವಂತೆ ಮುಸುಕು ಹೊದ್ದು, ನಿರ್ಲಿಪ್ತವಾಗಿ ಕಣ್ಣು ಮುಚ್ಚಿ ಕುಳಿತಂತಹ ಕಾಡುಗತ್ತಲು.

ಚಟ್ಟ ಯಾರೋ ಕೆಳಗಿಳಿಸಿದ ಸದ್ದು. ಅಗ್ನಿ ಒಲೆಯ ಬಾಯಿ ತೆರೆದು ಹೆಣ ದೂಡಿದ್ದೇ, ಅದು ಸಟ್ಟನೇ ಬೆಂಕಿಯನ್ನು ಎಳೆದುಕೊಂಡ ರಭಸಕ್ಕೆ ಮೊದಲು ನೊಣಗಳು ಕಾಣಿಸಲಿಲ್ಲ... ನಂತರ ಉರಿಯುತ್ತಿರುವ ಕೆನ್ನಾಲಿಗೆಯ ಜ್ವಾಲೆಯಲ್ಲಿ ಹೊರಗಿನ ಮಳೆಯೂ ಕಾಣಿಸಲಿಲ್ಲ...

ಯಾರೋ ಹೊರಗೀಗ ಕತ್ತಲು ಎನ್ನುತ್ತಿದ್ದರು; ಮತ್ಯಾರೋ ಹೊರಗೀಗ ಬೆಳಕು ಎನ್ನುತ್ತಿದ್ದರು; ಪ್ರಾಯಶಃ ಪ್ರಪಂಚ ಜ್ಞಾನವನ್ನು ತುಂಬಿಕೊಂಡಿರುವ ನೀವೇ ಇರಬೇಕು. ಆ ಧ್ವನಿ ಆಗಾಗ, 'ಬೆಳಕೀಗ ಏಳು, ಕತ್ತಲೀಗ ಮಲಗು' ಎಂದು ಎಚ್ಚರಿಸುತ್ತಿತ್ತು.

ಆದರೆ ಕತ್ತಲು-ಬೆಳಕಿಗೆ ವಿಶೇಷ ಅರ್ಥ ಹಚ್ಚುವ ಆ ಪ್ರಪಂಚ, ಮಳೆಯ ಆಚೆಗೆ ಎಲ್ಲೋ ತೇಲಿಹೋಗುತ್ತಿತ್ತು. ಸಮುದ್ರದಡದ ಆ ಊರು, ಸುರಿಯುತ್ತಲೇ ಇರುವ ಭಾರೀ ಮಳೆಗೆ ಮತ್ತೊಂದು ಸಮುದ್ರವಾಗಿ ಪರಿವರ್ತಿತಗೊಳ್ಳುತ್ತಿರುವಂತೆ ಎಲ್ಲೆಂದರಲ್ಲಿ ನುಗ್ಗಿ ಬರುತ್ತಿದ್ದದ್ದು ನೀರು. ನೀರೋ ನೀರು... ಆಗ, ಮಳೆಯ ಸದ್ದಿನೊಳಗಿನ ಜೀವದಂತೆ ಮೂಡಿಬಂದಿದ್ದು, ಒಂದು ಕನಸು...!



ಹೊರಗೆ ಸುರಿಯುವ ಮಳೆಗೆ ಕಣ್ಣು ನೆಟ್ಟು ನನ್ನ ಮನೆಯ ಬಾಲ್ಕನಿಯಲ್ಲಿ ಕುಳಿತಿದ್ದೆ ನಾನು. ನಮ್ಮ ಅಪಾರ್ಟ್‌ಮೆಂಟಿನ ಕೆಳಅಂತಸ್ತಿಗೆ ಆಗಲೇ ನೀರು ನುಗ್ಗಿ, ಹೊರ ಪ್ರಪಂಚಕ್ಕೆ ಯಾವ ಸಂಬಂಧವೂ ಇಲ್ಲದಂತೆ ತಗ್ಗಾದ ಜೌಗು ಪ್ರದೇಶದಲ್ಲಿದ್ದ ನಮ್ಮ ಕಟ್ಟಡ, ಬದುಕಿದವರ ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾದ ದ್ವೀಪದಂತೆ ಸುತ್ತುವರಿದ ಅಸಾಧ್ಯ ನೀರಿನ ಆವೃತ್ತದ ಮಧ್ಯೆ, ಅರ್ಥಂಬರ್ಥ ಮಾತ್ರ ಗೋಚರಿಸುತ್ತಾ ಓಲಾಡುತ್ತಿತ್ತು... ನೀರಿನೊಳಗೆ ಮುಳುಗುತ್ತಿರುವವರು ಕುತ್ತಿಗೆ, ಎರಡು ಕೈಗಳನ್ನು ಮೇಲೆತ್ತಿ, ಅಸಹಾಯಕರಾಗಿ, ಸಹಾಯಕ್ಕೆ ಯಾಚಿಸುವವರಂತೆ, ಅಗಾಧ ಕಪ್ಪಿನ ನಡುವೆ ಮತ್ತಷ್ಟು ಕಪ್ಪು

ಬಳಿದುಕೊಂಡು ನಿಂತಿದ್ದ ಅಂತಹ ಅಪಾರ್ಟ್‌ಮೆಂಟಿನ ಒಂದು ಮನೆಯೊಳಗಿನ ಬಾಲ್ಕನಿಯಲ್ಲಿ ನಾ ಕುಳಿತಿದ್ದೆ.

ಹೊರಗೆ ಮಳೆ ಸುರಿಯುತ್ತಲೇ ಇತ್ತು; ಕನಸು-ಎಚ್ಚರದ ನಡುವಿನ ಅಂತರ ತಿಳಿಯದಂತೆ. ಗುಡುಗು-ಸಿಡಿಲು ಒಂದೂ ಇರದೇ ಶೃತಿಬದ್ಧವಾದ, ಅದೇ ಏಕತಾನದ ಆಕಾಶವೇ ಹರಿದು ಚಿಂದಿಯಾಗಿ ಕರಗಿ, ಧರೆಗಿಳಿಯುತ್ತಿರುವಂತಹ, ದೋ ಎಂದು ಸುರಿಯುತ್ತಿರುವ ಮಳೆ. ಕತ್ತಲೆಂದರೆ ಕತ್ತಲು. ಲಕ್ಷಾನುಗಟ್ಟಲೆ ಜೀವಿಗಳ ಮಿಡಿತ, ತನ್ನ ಕೈಯ ಹಿಡಿಮುಷ್ಟಿಯಲ್ಲಿ ಹಿಡಿದಿಟ್ಟುಕೊಂಡಿದ್ದ ಒಂದು ಮಹಾನಗರ, ಸುರಿಯುವ ಮಳೆಯ ಕತ್ತಲ ಸಾಮ್ರಾಜ್ಯದಲ್ಲೆಲ್ಲೋ ತನ್ನ ಹಾದಿ ಕಳೆದುಕೊಳ್ಳುತ್ತಿತ್ತು... ಮಗ್ಗುಲಲ್ಲಿ ಮಲಗಿದವರನ್ನು ಪ್ರತ್ಯಕ್ಷ ಮುಟ್ಟಿ ನೋಡದ ಹೊರತೂ, ಕಣ್ಣಿಗೆ ಗೋಚರಿಸುವುದೇ ಸಾಧ್ಯವಿರಲಿಲ್ಲ.

ಆಗ, ಅದಾಗ, ಯಾವ ಸದ್ದೂ ಕೇಳದ ಮಳೆಯ ಆಧಿಪತ್ಯದಲ್ಲಿ ಮುಳುಗಿಹೋಗಿರುವ ಒಂದು ಪ್ರಪಂಚವನ್ನು ಎಚ್ಚರಿಸುವಂತೆ ಮೂಡಿ ಬಂದಿದ್ದು ಆ ಸದ್ದು;

ಝುಂಯೀ... ಝುಂಯೀ... ಝುಂಯೀ...

ಸದ್ದಿನಂತರಂಗದಾಳದಿಂದ ಆಗಷ್ಟೇ ಜೀವ ಪಡೆದು, ಮೇಲೇರಿ, ಒಂದು ಕತ್ತಲ ಕಪ್ಪಲ್ಲಿ ಸ್ಪಷ್ಟವಾಗುವ ಹಾತೂರಿಕೆಯಲ್ಲಿ ಹಾರಾಡುತ್ತಾ, ಮೆಲುಧ್ವನಿಯಲ್ಲಿ ಹಾಡುತ್ತಿದ್ದ ಎರಡು ನೊಣಗಳು.

ನಾ ಸಟ್ಟನೇ ಎದ್ದಿದ್ದೆ-ಕನಸಿನಲೆಂಬಂತೆ. ಹೊರಗಿನ ಬಾಗಿಲನ್ನು ಯಾರೋ ಬಡಿಯುತ್ತಿದ್ದರು.

ನಾ ಎದ್ದೆ! ಕತ್ತಲಲ್ಲೇ ಹಾಲಿಗೆ ಬಂದೆ. ಬಾಗಿಲ ಕಿಂಡಿಯಲ್ಲಿ ಹಣಿಕಿ, ನಿರ್ದಿಷ್ಟ ಕೋನದಲ್ಲಿ ಮೂಡಿದ ಹೊರ ಪ್ರಪಂಚದ ಕತ್ತಲ ರಾಶಿಯಲ್ಲಿ ಹುಡುಕಿದೆ.

ಮೊದಲು ಏನೂ ಕಾಣಲಿಲ್ಲ. ಅನೇಕ ದಿನಗಳಿಂದ ಕತ್ತಲಿಗೆ ಕಣ್ಣು ಹೊಂದಿಹೋದ್ದರಿಂದ, ಕೊರೆಯುವ ಶುಭ್ರ ಬೆಳಕು ಮುಂಚೆಯೇ ಇದ್ದುದ್ದೋ, ಆಮೇಲೆ ಮೂಡಿ ಬಂದದ್ದೋ ತಿಳಿಯಲಿಲ್ಲ. ಬೆಳಕಿಗೆ ಕಣ್ಣು ಹೊಂದುತ್ತಿದ್ದ ಹಾಗೇ ಕಂಡಿದ್ದು- ಹೊರ ಜಗತ್ತಿನಲ್ಲಿ ತೇಲುತ್ತಿರುವ, ಸುತ್ತಾ ಕಿರೀಟದಂತೆ ಪ್ರಭಾವಳಿ ಇದ್ದ ಒಂದು ರಕ್ತಸಿಕ್ತ ಮುಖ!

"...ಅರೇ! ಅದು ನಿಮ್ಮ ಮುಖದ ಹಾಗೇ ಇದೆ...!"

ಕತ್ತಲಲ್ಲಿ ಸಟ್ಟನೇ ಎಚ್ಚರಾಗಿ, ಮಗ್ಗುಲಲ್ಲಿ ಮಲಗಿದ್ದ ಇವರನ್ನು ಎಬ್ಬಿಸಿ, "ನನಗೊಂದು ವಿಚಿತ್ರ ಕನಸು ಬಿತ್ತು!" ಎಂದೆ.

ಕಣ್ಣುಜ್ಜಿಕೊಳ್ಳುತ್ತಾ ಎದ್ದ ಇವರು, ಆಕಳಿಸಿ, "ಅರೇ! ನಂಗೂ ಅದೇ ಕನಸು ಬಿತ್ತು, ನೋಡು..." ಅಂದರು.

ಆಗ, ಕಿಟಕಿಯಾಚೆ ಸುರಿವ ಮಳೆಗೆ ಕಣ್ಣು ನೆಟ್ಟು ಕುಳಿತ ನನ್ನಮ್ಮ ಕಾಣಿಸಿದರು.

'ಕಡೆಗೂ ಮಳೆಯಲ್ಲೇ ಹೆಣ ಸುಟ್ಟುಬಿಟ್ಟರು. ಒದ್ದೆ ಹೆಣ ಬೇರೆ. ಆಳುಗಳು, ಅರ್ಧಂಬರ್ಧ ಸುಟ್ಟು ಉಳಿದ ಆ ಹೆಣದ ಭಾಗಗಳನ್ನು ಮನೆಗೆ ತರುತ್ತಲೇ ಇದ್ದರು. ಒಲೆದಂಡೆಯಲ್ಲಿ ಕಾಸೀ... ಕಾಸೀ... ಕಾಸೀ... ಹೆಣ ಸುಟ್ಟು ಮುಗೀತೂಂತ ಆಗಲೇ ಇಲ್ಲ ನೋಡು...', ಅವಳು ಹೇಳುತ್ತಿದ್ದಳು.

ನಂತರ ಕವಿದಿದ್ದು ವಿಲಕ್ಷಣ ಮೌನ. ಹೊರಗೆ ಕತ್ತಲೋ ಕತ್ತಲು. ಮಳೆಯೋ ಮಳೆ.

ಸಮುದ್ರ ದಡದ ಎಲ್ಲರ ದಿವ್ಯ ನಿರ್ಲಕ್ಷ್ಯದ ದ್ವೀಪದಂತಹ ನಮ್ಮ ಅಪಾರ್ಟ್‌ಮೆಂಟು ಇಗೋ ತೇಲುತ್ತಿದೆ... ಬೀಸುತ್ತಿರುವ ಚಂಡಮಾರುತದ ಗಾಳಿಗೆ ಒಮ್ಮೆ ಆ ಕಡೆ, ಮತ್ತೊಮ್ಮೆ ಈ ಕಡೆಗೆ ಓಲಾಡುತ್ತಿದೆ... ಬೇರು ಸಮೇತ ಕಿತ್ತುಬಂದ ಅದು, ಎಲ್ಲೂ ಗಟ್ಟಿ ಜಾಗವಿಲ್ಲದ, ನೀರೋ ನೀರಿನಿಂದ ಆವೃತಗೊಂಡ, ಉಕ್ಕಿ ಹರಿಯುವ ಸಮುದ್ರದಂಡೆಯ ಇಳಿಜಾರಿನಲ್ಲಿನ ಮರಳ ಈ ಊರಿನಲ್ಲಿ ಎಲ್ಲಾದರೂ ತನ್ನ ಬೇರನ್ನು ಊರಲೇ ಬೇಕೆಂಬ ಹಟದಿಂದ ಸಟ್ಟನೆದ್ದು ಬಿರುಗಾಳಿಯಲ್ಲಿ

ಮುಸ್ಸಂಜೆಗಳು ತವಣಿಸುತ್ತಾ ಕಾಲೆತ್ತುತ್ತಿದೆ... ಕಾಲೆತ್ತುತ್ತಿದೆ... ಇಗೋ ಕಾಲೆತ್ತಿ...

ನಾ ಕಿವಿಗಳೆರಡನ್ನೂ ಬಲವಾಗಿ ಮುಚ್ಚಿಕೊಂಡು, ಗಟ್ಟಿಯಾಗಿ ಕಣ್ಣು ಮುಚ್ಚಿದ. ಇನ್ನೊಂದು ಕ್ಷಣದಲ್ಲಿ, ಚಂಡಮಾರುತದ ಬಿರುಗಾಳಿಗೆ, ಬೇರಿಲ್ಲದ ನಮ್ಮ ಅಪಾರ್ಟ್‌ಮೆಂಟ್ ಎತ್ತಲೋ ಹಾರಿ... ಉರುಳಿಬಿದ್ದು, ಚೂರು ಚೂರಾಗಿ...

ಅಗೋ ಒಡೆದ ಚೂರು ಕಿವಿಗೆ ಬೀಳುತ್ತದೆ; ಧಡ್‌ಧಡಾರ್ ಎಂದು ಗುಡುಗಿ, ಎರಡು ಹೋಳಾಗಿ ನಿಲ್ಲುತ್ತದೆ. ಹಾಗೆ ಹೋಳಾಗಿ ನಿಂತ ಕಟ್ಟಡದ ಒಂದು ಭಾಗ ಆ ಕಡೆ; ಮತ್ತೊಂದು ಭಾಗ ಈ ಕಡೆ; ಮಧ್ಯ ಕಂದರ. ಬಾಯಿ ತೆರೆದು ಅಗಲ-ಅಗಲವಾಗುತ್ತಿರುವ ಆ ಕಂದರದ ನಡುವಿನಿಂದ ಬದುಕಿ ಉಳಿದವರು ಎದ್ದು ಮೇಲೆ ಬರುತ್ತಿದ್ದಾರೆ... ಮೆಟ್ಟಿಲು ಹತ್ತಿ ಬಾಗಿಲು ತಟ್ಟುತ್ತಿದ್ದಾರೆ..

ಇಗೋ...!

ತಟ್..! ತಟ್...! ತಟ್....!

ಬಾಗಿಲು ಬಡಿದ ಸದ್ದು! ನಂತರ ನಿಶ್ಯಬ್ದ. ಮೌನದ ಆಳದಿಂದ ಮೂಡಿಬಂದಂತೆ ಬಂದಿದ್ದು, ಎಂದಿನ ಅದೇ ಚಿರಪರಿಚಿತ ಸದ್ದು...!

ಝುಂಯೀ... ಝುಂಯೀ... ಝುಂಯೀ...

ನಾ ಸಟ್ಟನೇ ಎದ್ದೆ...! ಬಾಗಿಲಿಗೆ ಓಡಿದೆ...!

ಬಾಗಿಲ ಕಿಂಡಿಯಲ್ಲಿ ಹಣಿಕಿ, ನಿರ್ದಿಷ್ಟ ಕೋನದಲ್ಲಿ ಮೂಡಿದ ಹೊರ ಪ್ರಪಂಚದ ಕತ್ತಲರಾಶಿಯಲ್ಲಿ ಹುಡುಕಿದೆ...

ಬಾಗಿಲಾಚೆ ತನ್ನಷ್ಟಕ್ಕೆ ತಾನೇ ಬಿಚ್ಚಿಕೊಳ್ಳುತ್ತಿದ್ದ ಒಂದು ಪ್ರಪಂಚದಲ್ಲಿ ತೇಲಿಹೋಗುತ್ತಿತ್ತು, ಅದೇ ರಕ್ತಸಿಕ್ತ ಮುಖ!

'ಏನು ಸುಡುಗಾಡು ಮಳೆ...! ಹೆಣವಾದರೂ ಸುಡುತ್ತಾ ನೋಡು... ಒಲೆಯ ಬಾಯಿಗೆ ದೂಡಿದ ಹಾಗೂ ಹೊರಗೇ ಬರುತ್ತಿದೆ, ಒದ್ದೆ ಹೆಣದ ಹಣೆಬರಹವೇ ಇಷ್ಟು...'

ಹಿಂದೆಯೇ ನಿಂತ ಅಮ್ಮ ಹೇಳುತ್ತಿದ್ದಳು.

'ಹೀಗೆ ಹೆಣ ಸುಟ್ಟರೆ, ಆತ್ಮ ಸಲೀಸಾಗಿ ಮೇಲೆ ತೇಲಿ ಹೋಗುತ್ತಾ, ಮತ್ತೆಂತಾ! ಹಾದಿ ತಪ್ಪಿ ಇಲ್ಲೇ ಸುತ್ತುತ್ತಿರುತ್ತೆ... ಮಳೆಗೆ ನೆಂದೂ, ನೆಂದೂ ಚಳಿಗೆ ಹೇಗೆ ನಡುಗುತ್ತಿದೆ... ಕೊಡೆ ಹಿಡೀಬೇಕೆನ್ನೂ ಜ್ಞಾನವಾದರೂ ಉಂಟಾ...? ಮಗೂ, ಆ ಕೊಡೆ ಒಂಚೂರು ತಾಮ್ಮಾ...!'

ಕೊಡೆ ಬಂತು! ನನ್ನಮ್ಮ ಕೊಡೆ ಹಿಡಿದು ಅಂಗಳದಲ್ಲಿ ನಿಂತಿದ್ದಳು. ನಂತರ ಮಸುಕು... ಮಸುಕು... ಆಮೇಲೆ ಎಲ್ಲವೂ ಕತ್ತಲು... ಕತ್ತಲ ಅಂಧಕಾರದಲ್ಲಿ ಸುರಿಯುತ್ತಿದ್ದದ್ದು ಒಂದೇ... ಅದೇ ಮಳೆ!

ಮಳೆಯೇ...?

ಹೌದು! ನಂತರ ದೀರ್ಘಮೌನ. ದೀರ್ಘ ಮೌನದಾಳದಲ್ಲಿ ಉಳಿದಿದ್ದು 'ನೀವು ನಂಬುವುದಾದರೆ...' ಇಂತಹ ಸಣ್ಣಪುಟ್ಟ ಕತೆಗಳಷ್ಟೇ... ಹಾಗಾಗಿ ಇದೂ ನಿಮ್ಮ ಕತೆಯೇ...

# ಅಟೆನ್ಷನ್ ಪ್ಲೀಸ್ !

**ಕಾಗದದ ದೋಣಿ** : ಖಾಸಗಿಯಾಗಿದ್ದುಕೊಂಡೂ ಇತರರಿಗೆ ನೆರವಾಗಬಲ್ಲ, ಕ್ಷೀಣಿಸುತ್ತಿರುವ ಸಂಬಂಧಗಳನ್ನು, ಕೌಟುಂಬಿಕತೆಯನ್ನು ಮರಳಿ ಚಿಗುರಿಸಬಲ್ಲ ಒಕ್ಕಣಿಕೆಯ ಕಾಗದಗಳಿಗೆ ಸ್ವಾಗತ. ಇದು one way traffic ಪ್ರೇಮಾಲಾಪದ ಕುಂಯ್ ಕುಂಯ್ ರಾಗದ ಅಂಕಣ ಖಂಡಿತ ಅಲ್ಲ. ದಯವಿಟ್ಟು ಗಮನಿಸಿ.



: ನೀವು ಓದಿದ, ನೋಡಿದ, ಇಷ್ಟಪಟ್ಟ ಕಾದಂಬರಿ, ನಾಟಕ, ಸಿನಿಮಾ, ದೃಷ್ಟಾಂತಗಳ ಒಂದು ಪುಟದ ಸಾರಾಂಶ ರೂಪ. ವಿಮರ್ಶೆ, ವರ್ಣನೆ ಬಿಟ್ಟು ಕತೆಯ ಸಾರವನ್ನೇ ಚುಟುಕಾಗಿ ಹೇಳಿ. ಸಿನಿಮಾ ನೋಡಿಬಂದ ಮಕ್ಕಳು ಗೆಳೆಯರಿಗೆ ಹೇಳುತ್ತಾರಲ್ಲ ಹಾಗೆ.

**ಸ್ಫೂರ್ತಿ ದೇವತೆ** : ನಿಮ್ಮನ್ನು ಗಾಢವಾಗಿ ಪ್ರಭಾವಿಸಿದ ಪಾತ್ರ, ಸಂಗತಿ, ವ್ಯಕ್ತಿಗಳ ಕುರಿತು, ಪ್ರಭಾವಿಸಿದ ಬಗೆಯ ಕುರಿತು ಒಂದು ಪುಟ ಬರೆಯಿರಿ. ಅದು ಇತರರಿಗೂ ಸ್ಫೂರ್ತಿದಾಯಕವಾಗಬಲ್ಲದು.

**ಭಾವ ಬಿಂದು** : ಚಿಂತನಶೀಲ, ಭಾವೋದ್ದೀಪಕ ಶಬ್ದಚಿತ್ರಗಳು, ಕತೆ-ಕವಿತೆಗಳ ಕಕ್ಷೆಗೆ ಬಾರದ ಪುಟ್ಟ ಕಾವ್ಯಮಯ ಸಂವೇದನಾಶೀಲ ಲಹರಿಗಳಿಗೆ ಈ ಪುಟ ಮೀಸಲು.

**ಮಧುವನ** : ಐದು ಪುಟ ಮೀರದ ನವಿರಾದ ಲಲಿತ ಪ್ರಬಂಧ, ವ್ಯಕ್ತಿಚಿತ್ರ, ಸ್ಮೃತಿ ಚಿತ್ರ, ವೈನೋದಿಕ ನಿಬಂಧಗಳಿಗೆ ಸ್ವಾಗತ.

**ಮಂಟಪ** : ಸಾಹಿತ್ಯಿಕ, ಸಾಂಸ್ಕೃತಿಕ ಹೊಸ ಹೊಳಹುಗಳಿಗೆ, ಸಂವಾದಕ್ಕೆ ಮುಕ್ತವಾದ ಅವಕಾಶ. ಸ್ಪಷ್ಟ, ನಿಖರ ಬರಹ ಮೂರು ಪುಟ ಮೀರದಿರಲಿ.

**ಕವಿ ಸಮಯ** : ನುಡಿಗಟ್ಟು, ನೋಟ, ಪ್ರತಿಮೆ, ಪರಿಣಾಮಗಳಲ್ಲಿ ಕವಿಯ ವೈಶಿಷ್ಟ್ಯ, ವೈವಿಧ್ಯ ತೋರುವ ಪ್ರಾತಿನಿಧಿಕ-ಐದಾರು ಪದ್ಯಗಳನ್ನು ಕಳಿಸಬೇಕು.

**ಕತೆ** : ಎಳೆಂಟು ಪುಟ ಮೀರದಂತಿರಲಿ. ಓದಿಸಿಕೊಂಡುಹೋಗುವಂತಿರಲಿ.

> ಬರಹದ ಜೊತೆ ಭಾವಚಿತ್ರವಿರಲಿ. ಸ್ವವಿಳಾಸದ ಅಂಚೆ ಕಾರ್ಡು ಇದ್ದರೆ ಸ್ವೀಕೃತಿ-ಅಸ್ವೀಕೃತಿಯ ಬಗ್ಗೆ ತಿಳಿಸಲು ಅನುಕೂಲ.

## ಪ್ರತಿ ಓದುಗನಲ್ಲೊಬ್ಬ ಬರಹಗಾರ
## ಪ್ರತಿ ಬರಹಗಾರನಲ್ಲೊಬ್ಬ ಓದುಗ
## ಇಬ್ಬರನ್ನೂ ಉದ್ದೀಪಿಸಲೆಂದೇ ನಮ್ಮ ಪುಟಗಳು

ನಮ್ಮ ವಿಳಾಸ: 'ಭಾವನಾ' ನಂ. 38, ಎ.ಎಂ. ರಸ್ತೆ, ಕಲಾಸಿಪಾಳ್ಯಂ ನ್ಯೂ ಎಕ್ಸ್‌ಟೆನ್‌ಷನ್, ಬೆಂಗಳೂರು - 2

ವಿಶ್ವ ಭಾರತಿ - 20



# ಕ್ಲಾರೀಸ್ ಲೀಸ್ಪೆಕ್ತರ್

# ಪ್ರೀತಿ

ಕನ್ನಡಕ್ಕೆ: ಮಲ್ಲಿಕಾರ್ಜುನ ಹಿರೇಮಠ

ಶಂಕರ ಪಾಟೀಲ

ಖರೀದಿಸಿದ ಸಾಮಾನುಗಳಿಂದ ಪಿಟಿಗರಿಯುವ ತನ್ನ ಹೊಸ ಹೆಣಿಗೆಯ ಚೀಲ ಹಿಡಿದು ಅನ್ನಾ ಪ್ರಯಾಸದಿಂದ ಟ್ರ್ಯಾಮು ಏರಿದಳು. ಅದನ್ನು ತೊಡೆಯ ಮೇಲಿಟ್ಟುಕೊಂಡು ಕೂಡುತ್ತಿರುವಂತೆ ಟ್ರ್ಯಾಮು ಹೊರಟಿತು. ತನ್ನ ಸೀಟಿನಲ್ಲಿ ಹಿಂದಕ್ಕೆ ಸರಿದು ಆರಾಮಾಗಿ ಕೂಡಲು ಪ್ರಯತ್ನಿಸುತ್ತ, ನೆಮ್ಮದಿಯ ಉಸಿರು ಬಿಟ್ಟಳು.

ಮುದ್ದಿನ ಮಕ್ಕಳಿರುವುದರಿಂದ ಖಂಡಿತ ತನಗೆ ಸಮಾಧಾನ, ಸಂತೋಷಗಳಿವೆ ಅಂತ ಅಂದುಕೊಂಡಳು. ಅವರು ದೊಡ್ಡವರಾಗ್ತಾ ಈಗ ತಾವೇ ಜಳಕ ಮಾಡಿಕೊಳ್ಳುತ್ತಾರೆ. ಆದರೆ ಕೆಲವೊಮ್ಮೆ ತಮ್ಮ ತುಂಟತನಗಳಿಂದ ತನ್ನ ಇನ್ನೂ ಹೆಚ್ಚಿನ ಸಮಯವನ್ನೂ ಬೇಡುತ್ತಾರೆ. ವಿಶಾಲವಾದ ಅಡಿಗೆಮನೆಯಲ್ಲಿ ಭಸ್‌ಗುಡುವ ಸ್ಟೋವ್ ಇದೆ. ವಿಪರೀತ ಧಗೆಯ ಅಪಾರ್ಟ್‌ಮೆಂಟ್. ಕಂತುಗಳಲ್ಲಿ ಅದಕ್ಕೆ ಹಣ ಸಂದಾಯ ಮಾಡುತ್ತ ಬಂದಿದ್ದಾರೆ. ತಾನೇ ತಯಾರಿಸಿದ ಕರ್ಟನ್‌ದೊಂದಿಗೆ ಗಾಳಿ ಆಗಾಗ ಚೆಲ್ಲಾಟವಾಡುವುದನ್ನೂ ನೆನಪಿಸ್ತಾ, ತಾನು ಇಷ್ಟಪಟ್ಟಲ್ಲಿ, ಹಣೆಯ ಮೇಲೆ ಹರಡಿದ ಬೆವರೊರೆಸಿಕೊಂಡು ಪ್ರಶಾಂತ ದಿಗಂತ ಕುರಿತೂ ಧ್ಯಾನಿಸಬಹುದು. ಒಬ್ಬ ರೈತನಂತೆ ತನ್ನ ಕೈಯಾರೆ ಬೀಜಗಳನ್ನು ಊರಿದ್ದಳು. ಹೌದು, ಮತ್ತಾರೂ ಅಲ್ಲ, ತಾನೇ ಅವನ್ನು ಊರಿದ್ದು. ಈಗ ಅವು ಗಿಡಗಳಾಗಿ ಬೆಳೆಯುತ್ತಿವೆ. ಇಲೆಕ್ಟ್ರಿಸಿಟಿಯ ಮನುಷ್ಯನೊಂದಿಗೆ ಆಕೆಯ ಚುರುಕು ಸಂಭಾಷಣೆಗಳು ಬೆಳೆಯುತ್ತಿವೆ. ಟ್ಯಾಂಕಿನಲ್ಲಿ ನೀರು ಬೀಳುತ್ತ ಬೆಳೆಯುತ್ತಿದೆ, ಮಕ್ಕಳು ಬೆಳೆಯುತ್ತಿವೆ, ಆಹಾರ ಪದಾರ್ಥಗಳಿಂದ ಟೇಬಲ್ ಬೆಳೆಯುತ್ತಿದೆ, ಗಂಡ ದಿನಪತ್ರಿಕೆ ಹಿಡಿದು, ಹಸಿದು, ಮುಗುಳ್ನಗುತ್ತ ಟೇಬಲ್ಲಿನತ್ತ ಬರುತ್ತಾನೆ, ಇಡೀ ಬ್ಲಾಕ್‌ದಲ್ಲಿ ಹುಡುಗಿಯರ ಹಾಡಿನ ಧ್ವನಿ ಪ್ರತಿಧ್ವನಿಯಾಗಿ ಕಿರಿಕಿರಿಯಾಗುತ್ತದೆ. ಅನ್ನಾ, ಸಮಾಧಾನದಿಂದ ತನ್ನ ಪುಟ್ಟ, ಸಶಕ್ತ ಕೈಯಿಟ್ಟಲ್ಲೆಲ್ಲ ಜೀವಶಕ್ತಿಯನ್ನೇ ಹರಿಸಿದ್ದಾಳೆ. ಮಧ್ಯಾಹ್ನದ ಕೆಲಹೊತ್ತು ಆಕೆಗೆ ಕಠಿಣ ಕಾಲ ಎನ್ನಬೇಕು. ಮತ್ತೆ ತಾಸೊಪ್ಪತ್ತಿನ ನಂತರ ಆಕೆ ಬೆಳೆಯಿಸಿದ ಗಿಡಗಳು ಆಕೆಯ ಕಡೆ ನಗೆ ಬೀರುತ್ತವೆ. ತನ್ನ ಶಕ್ತಿ ಯಾತಕ್ಕೂ ಬೇಡಾದಾಗ ಆಕೆ ಕಳವಳಕ್ಕೀಡಾಗುತ್ತಾಳೆ. ಮತ್ತೆ ಆಕೆ ಈ ಹಿಂದಿನಕ್ಕಿಂತ ಹೆಚ್ಚು ಗಟ್ಟಿಯಾಗಿ, ದೇಹವನ್ನು ತುಸು ಗಡಸಾಗಿಸಿ, ಮಕ್ಕಳ ಬ್ಲೌಸುಗಳನ್ನು ಕಟ್ ಮಾಡುವ ಪರಿ ಗಮನಿಸುವಂತಹದ್ದು. ಅವಳ ಅಸ್ಪಷ್ಟ ಕಲಾತ್ಮಕ ಹಂಬಲಗಳೆಲ್ಲ ಕೆಲ ಸಲ ಹುರಿಗೊಂಡು, ಆಕೆಯ ದಿನಗಳನ್ನು ಸಾರ್ಥಕ ಹಾಗೂ ಸುಂದರಗೊಳಿಸಿವೆ. ಅವಳ ಅಲಂಕಾರದ ಅಭಿರುಚಿ ಬೆಳೆಯುತ್ತ, ಅಲ್ಲಿಯ ಅವ್ಯವಸ್ಥೆಯನ್ನು ಹೊಡೆದುಹಾಕಿದೆ. ಪ್ರತಿಯೊಂದನ್ನೂ ಪರಿಪೂರ್ಣಗೊಳಿಸುವ ಸಾಮರ್ಥ್ಯ ತನಗಿದೆಯೆಂದು ಆಕೆ ಕಂಡುಕೊಂಡಿದ್ದಾಳೆ. ಪ್ರತಿ ವಸ್ತುವಿಗೂ ಸುಮಧುರ ನೋಟ ಕೊಡಲು ಸಾಧ್ಯ, ಮನುಷ್ಯ ಬದುಕನ್ನು ನಿರ್ಮಿಸಲು ಸಾಧ್ಯ ಅಂತ ಆಕೆ ಭಾವಿಸಿದ್ದಾಳೆ.

ಅನ್ನಾ, ಆಳದಲ್ಲಿ ಭದ್ರ ಬೇರುಗಳಿರಬೇಕಾದ ಅಗತ್ಯವನ್ನು ಮನಗಂಡಿದ್ದಳು. ಆಶ್ಚರ್ಯಕರವಾಗಿ, ಮನೆ ಅಂಥ ಭಾವನೆ ಮೂಡಿಸಿತ್ತು. ಅವಳು ತನ್ನ ಯಾತನೆಯ ದಾರಿಗುಂಟ, ಹೆಣ್ಣಿನ ದೈವವನ್ನು ರೂಪಿಸಿಕೊಂಡಿದ್ದಳು, ಅದನ್ನು ತಾನೇ ಶೋಧಿಸಿಕೊಂಡಷ್ಟು ಸಲೀಸಾಗಿ ಅದರೊಂದಿಗೆ ಹೊಂದಿಕೊಂಡಿದ್ದಳು. ಅವಳು

ಮದುವೆಯಾದ ವ್ಯಕ್ತಿ ನಿಜವಾದ ಮನುಷ್ಯನಾಗಿದ್ದ, ಅವಳು ಹೆತ್ತ ಮಕ್ಕಳು ನಿಜವಾದ ಮಕ್ಕಳಾಗಿದ್ದರು. ಈಗ ತನ್ನ ಹಿಂದಿನ ತಾರುಣ್ಯವು, ತನ್ನ ಹಿಂದಿನ ಕಾಯಿಲೆಯಂತೆಯೇ ಆಕೆಗೆ ಅನ್ಯ ಎನಿಸಿತು. ಅವಳು ಕ್ರಮೇಣ ಸಂತೋಷರಹಿತವಾಗಿಯೂ ಜೀವನವನ್ನು ನಡೆಯಿಸಬಹುದೆಂಬ ಸತ್ಯವನ್ನು ಕಂಡುಕೊಂಡಿದ್ದಳು. ವೈಯಕ್ತಿಕ ಸುಖ, ಸಂತೋಷ ತೊರೆಯುತ್ತ, ಸತತ ಪರಿಶ್ರಮ, ಪಟ್ಟು ಹಿಡಿದ ದುಡಿಮೆ, ನೆಮ್ಮದಿ-ಇವುಗಳನ್ನುಳಿಸಿಕೊಂಡಿರುವ ಅಗೋಚರವಾದ, ಅಸಂಖ್ಯ ದುಡಿಮೆಗಾರರ ಸಾಲಿಗೆ ಆಕೆ ಸೇರಿದ್ದಳು. ತನ್ನದೇ ಮನೆಯನ್ನು ಆಕೆ ಪಡೆಯುವ ಮೊದಲು ಅದು ತನಗೆಂದೂ ನಿಲುಕಲಾರದ್ದೆನಿಸಿಬಿಟ್ಟಿತ್ತು: ಅದು ದೊರೆತಾಗ, ಆ ಗೊಂದಲದ



ಬ್ರೆಜಿಲ್ ದೇಶದ ಪೋರ್ಚುಗೀಸ್ ಭಾಷೆಯ ಲೇಖಕಿ ಕ್ಲಾರೀಸ್ ಲೀಸ್ಪೆಕ್ಟರ್ (1925-1977) ರಷ್ಯಾದ ಉಕ್ರೇನಿನಲ್ಲಿ ಬಡ ಕುಟುಂಬವೊಂದರಲ್ಲಿ ಹುಟ್ಟಿದಳು. 1937ರಲ್ಲಿ ಈಕೆಯ ತಂದೆ-ತಾಯಿ ರೈಯೋ ದಿ ಜನೈರೋಗೆ ಹೋಗಿ ನೆಲಸಿದರು. ಅಲ್ಲಿ ಸೆಕೆಂಡರಿ ಶಾಲೆಯಲ್ಲಿ ಓದುತ್ತಿರುವಾಗಲೇ ಕ್ಲಾರೀಸ್‌ಳ ಮೊದಲ ಕತೆ ಪ್ರಕಟವಾಯಿತು. 1943ರಲ್ಲಿ ತನ್ನ ಸಹಪಾಠಿಯೊಬ್ಬನ ಜೊತೆ ವಿವಾಹ. ಮರುವರ್ಷ ಈಕೆಯ ಮೊದಲ ಕಾದಂಬರಿ 'ನಿಯರ್ ಟು ದಿ ವೈಲ್ಡ್ ಹಾರ್ಟ್' ಪ್ರಕಟಣೆ. ನಂತರದ 16 ವರ್ಷ ಬ್ರೆಜಿಲಿನ ವಿದೇಶಾಂಗ ಸೇವೆಯಲ್ಲಿದ್ದ ತನ್ನ ಗಂಡನ ಜೊತೆ ಇಟಲಿ, ಸ್ವಿಟ್ಜರ್‌ಲ್ಯಾಂಡ್, ಅಮೇರಿಕಗಳಲ್ಲಿ ಸುತ್ತಾಡಿದಳು. 1959ರಲ್ಲಿ ತನ್ನ ವಿವಾಹ ಬಂಧನ ಮುರಿದು ಬಿದ್ದದ್ದೇ, ಇಬ್ಬರು ಮಕ್ಕಳೊಡನೆ ಮತ್ತೆ ರೈಯೋ ದಿ ಜನೈರೋಗೆ ಹಿಂತಿರುಗಿದಳು. ಅದೇ ವರ್ಷ ಇವಳ ಪ್ರಸಿದ್ಧ ಕಥಾಸಂಕಲನ, 'ಫ್ಯಾಮಿಲಿ ಟೈಸ್' ಪ್ರಕಟವಾಯಿತು. 1961ರಲ್ಲಿ ಹೊರಬಂದ 'ಆಪಲ್ ಇನ್ ದಿ ಡಾರ್ಕ್' ಕಾದಂಬರಿ ಈಕೆಯ ಅನನ್ಯ ಶೈಲಿಗೆ, ದಾರ್ಶನಿಕ ಮನೋದೃಷ್ಟಿಗೆ ಕನ್ನಡಿ ಹಿಡಿಯಿತು.

ಕ್ಲಾರೀಸ್ ತನ್ನ ಕಡೆಯ ದಿನಗಳಲ್ಲಿ ಕ್ಯಾನ್ಸರ್ ರೋಗಕ್ಕೆ ಗುರಿಯಾಗಿ, ಒಂದು ಸಾರ್ವಜನಿಕ ಆಸ್ಪತ್ರೆಯಲ್ಲಿ ಸತ್ತಳು. ಇಂಗ್ಲಿಷಿಗೆ ಭಾಷಾಂತರಗೊಂಡಿರುವ ಈಕೆಯ ಕೃತಿಗಳೆಂದರೆ, 'ದಿ ಫಾರಿನ್ ಲೀಜನ್' (ಕತೆಗಳು), 'ದಿ ಪ್ಯಾಶನ್ ಅಕಾರ್ಡಿಂಗ್ ಟು ಜಿ. ಎಚ್' ಮತ್ತು 'ದಿ ಅವರ್ ಆಫ್ ದಿ ಸ್ಟಾರ್' (ಕಾದಂಬರಿಗಳು). ಬಯಸಿ ಆರಿಸಿಕೊಂಡು, ಕಟ್ಟೆಚ್ಚರದಿಂದ ಪೋಷಿಸಿಕೊಂಡು ಬಂದ ಸಾವಧಾನದ (complaisant) ಸ್ಥಿತಿಯನ್ನು ಅಲ್ಲೋಲಕಲ್ಲೋಲಗೊಳಿಸುವ ಬಾಳಿನ ಭೀಕರತೆಯನ್ನು ಸೂಕ್ಷ್ಮವಾಗಿ ತೆರೆದಿಡುವ ಈ ಕತೆ, ತನ್ನ ಬಹುಮುಖೀ ಗ್ರಹಿಕೆಗಳಿಂದ ಮನಸೆಳೆಯುತ್ತದೆ. ಈ ಕತೆಯಲ್ಲಿ ಮಿಡಿಯುವ ಜೀವಲೋಕದ ನೂರಾರು ಸ್ವರಗಳು ತಮ್ಮ ನಿಶ್ಶಬ್ದದಿಂದಲೇ ನಮ್ಮನ್ನು ಕಲಕುವಂತಿದೆ.

'ಅಮೀನಪುರದ ಸಂತೆ' ಕಥಾ ಸಂಗ್ರಹದ ಮೂಲಕ ವಿಶಿಷ್ಟ ಕತೆಗಾರರೆನಿಸಿಕೊಂಡಿರುವ, ಹುನಗುಂದದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿರುವ ಮಲ್ಲಿಕಾರ್ಜುನ ಹಿರೇಮಠ ಮೂಲದ ತೀವ್ರತೆ ಮುಕ್ಕಾಗದಂತೆ ಈ ಕತೆಯನ್ನು ಕನ್ನಡಕ್ಕೆ ತಂದಿದ್ದಾರೆ.

ಪರವಶತೆಯು ಅಸಹನೀಯ ಸಂತೋಷ ದೊಂದಿಗೆ ತಳಕು ಹಾಕಿಕೊಂಡಿತ್ತು. ಅದಕ್ಕೆ ಪ್ರತಿಯಾಗಿ, ಕೊನೆಗೆ ತನಗೆ ಗ್ರಹಿಸಲು ಸಾಧ್ಯವಾದ ಪ್ರೌಢ ಜೀವನವನ್ನು ರೂಪಿಸಿಕೊಂಡಳು. ಆಕೆ ಇದನ್ನೇ ಬಯಸಿದ್ದು ಹಾಗೂ ಆರಿಸಿಕೊಂಡಿದ್ದು.

ಸೂರ್ಯ ನೆತ್ತಿಯ ಮೇಲೆ ಬಂದಾಗ, ಮನೆ ಮಂದಿ ಎಲ್ಲ ತಮ್ಮ ತಮ್ಮ ಕೆಲಸ ಬೊಗಸೆಗಳಿಗಂತ ಹೊರಹೋಗಿರಲಿಲ್ಲ. ಮನೆ ಖಾಲಿಯಾಗಿ, ಅವಳ ಅಗತ್ಯ ಅದಕ್ಕಿಲ್ಲದಾಗ-ಅಪರಾಹ್ನದ ಈ ಅಪಾಯಕಾರಿ ಅವಧಿಯಲ್ಲಿ-ಅವಳ ಮುಂಜಾಗರೂ ಕತೆಗಳು ಚುರುಕಾಗುತ್ತಿದ್ದವು. ತಿಕ್ಕಿ ಒರೆಸಿದ ಫರ್ನೀಚರನ್ನು ನೋಡುತ್ತಿರಲು, ಆಕೆಯ ಹೃದಯ ಭಯದಿಂದ ತುಸು ಮುದುಡಿಕೊಂಡಂತೆನಿಸುತ್ತಿತ್ತು. ಆದರೆ ಅವಳು ಬದುಕಿನಲ್ಲಿ ಭಯವಿಹ್ವಲಗೊಂಡಿರಲು ಅವ ಕಾಶವೇ ಇರಲಿಲ್ಲ. ಕೌಟುಂಬಿಕ ಹೋರಾಟ ಗಳಿಂದ ಗಳಿಸಿಕೊಂಡ ಜಾಣತನದಿಂದ ಭಯ ಗಳನ್ನು ದಮನ ಮಾಡಿಕೊಳ್ಳಲೂ ಅವಳಿಗೆ ಶಕ್ಯವಾಗಿತ್ತು. ಸಹಜ, ಆಗ ಆಕೆ ತನ್ನ ಮನೆ ಹಾಗೂ ಕುಟುಂಬದ ಪಾಲನೆ ಪೋಷಣೆಗಾಗಿ ಷಾಪಿಂಗಿಗೆ ಅಥವಾ ಸಾಮಾನುಗಳ ರಿಪೇರಿಗೆ ಮನೆಯಿಂದ ಹೊರ ಹೋಗುತ್ತಿದ್ದಳು. ಆಕೆ ಮರಳಿದಾಗ ಆಗಲೇ ಮಧ್ಯಾಹ್ನದ ಇಳಿಹೊತ್ತು. ತರುವಾಯ, ಶಾಲೆಯಿಂದ ಹಿಂತಿರುಗಿದ ಮಕ್ಕಳು, ಸಂಜೆ ಕತ್ತಲಾಗುವವರೆಗೂ, ಸಮಾಧಾನ ಹಾಗೂ ಸಂಭ್ರಮಗಳಿಂದ, ಆಕೆಯ ಲಾಲನೆ ಪಾಲನೆಯಲ್ಲಿರುತ್ತಿದ್ದವು. ಮುಂಜಾನೆ, ಮನೆಗೆಲಸಗಳನ್ನು ತೆಪ್ಪಗೆ ಪೂರೈಸಲು ಬೇಗನೇ ಏಳುತ್ತಿದ್ದಳು. ಪಶ್ಚಾತ್ತಾಪಗೊಂಡು ಮರಳುವ ವ್ಯಕ್ತಿಯ ತರಹ, ಫರ್ನೀಚರ್ ಮತ್ತೆ ಧೂಳು ಮಯವಾಗಿ ಕಣ್ಣಿಗೆ ಬೀಳುತ್ತಿದ್ದವು. ಅವಳಂತೂ, ನೆಲದೊಳಗಿನ ಮೃದುವಾದ ಬೇರುಗಳಂತೆ ನಿಗೂಢವಾಗಿ ರೂಪಿತವಾಗಿದ್ದಳು. ಒಬ್ಬ ಅನಾಮಿಕಳಾಗಿ ಜೀವನವನ್ನು ಪೋಷಿಸುದ್ದಳು. ಬದುಕು ಹೀಗೆ ಆಕೆಗೆ ಹಿತವಾಗಿತ್ತು. ಆಕೆ ಬಯಸಿ, ಆರಿಸಿಕೊಂಡಿದ್ದು ಇದನ್ನೇ.

ಹಳಿಗಳ ಮೇಲೆ ಟ್ರ್ಯಾಮು ತೂಗಾಡುತ್ತ ಮುಖ್ಯ ರಸ್ತೆಯ ಕಡೆ ಹೊರಳಿತು. ಒಮ್ಮೆಲೇ ಗಾಳಿ ಹೆಚ್ಚು ಆರ್ದ್ರವಾಯಿತು; ಮಧ್ಯಾಹ್ನದ ತಾಪ ಕಳೆದು, ಅನಿಶ್ಚಿತ ಕಾಲದ ಕೊನೆಯೂ ಆಯಿತೆಂಬ ಘೋಷಣೆ ಮಾಡಿದಂತಿತ್ತು. ಅನ್ನಾ ನೆಮ್ಮದಿಯಿಂದ ಉಸಿರು ಹಾಕಿದಳು. ಅವಳ ಆಳವಾದ ಸ್ವೀಕೃತ ಮನೋಭಾವ ಆಕೆಗೆ ಸ್ತ್ರೀತ್ವದ ಲಕ್ಷಣ ತಂದುಕೊಟ್ಟಿತ್ತು.

ಟ್ರ್ಯಾಮು ನಿಧಾನವಾಗುತ್ತಾ ಒಮ್ಮೆಲೆ ಗಕ್ಕನೆ ನಿಂತಿತು. ಇನ್ನು ಹ್ಯುಮೈಟಾ ಬರುವವರೆಗೆ ಆರಾಮಾಗಿ ಕೂಡಬಹುದೆಂದುಕೊಂಡಳು. ನಿಲ್ದಾಣದಲ್ಲಿ ಒಮ್ಮೆಲೆ ಆಕೆಯ ಲಕ್ಷ್ಯ, ಅಲ್ಲಿ ನಿಂತಿರುವ ಒಬ್ಬ ಮನುಷ್ಯನ ಕಡೆ ಹೊರಳಿತು. ಇತರರು ಹಾಗೂ ಆತನ ನಡುವಿನ ವ್ಯತ್ಯಾಸ ಎಂದರೆ ಆತ ಕೈ ಮುಂಚಾಚಿ ಕದಲದೆ ನಿಂತಿದ್ದ. ಆತ ಕುರುಡ.

ಅನ್ನಾ ಅವನನ್ನು ಅಪನಂಬಿಕೆಯಿಂದ ನೋಡುತ್ತ ಕೂಡುವ ಕಾರಣವಾದರೂ ಏನು? ಆಕೆಗೆ ಏನೋ ತಲ್ಲಣಗೊಳಿಸಿತ್ತು. ಆಕೆ ಕಂಡದ್ದೇನೆಂದರೆ, ಆ ಕುರುಡ ಚ್ಯುಯಿಂಗ್ ಗಮ್ ಮೆಲ್ಲುತ್ತಿದ್ದ... ಕುರುಡ ಗಮ್ ಮೆಲ್ಲುತ್ತಿದ್ದ. ಒಂದು ಕ್ಷಣ, ತನ್ನ ಸೋದರರು ಊಟಕ್ಕೆ ಬರುವವರಿದ್ದಾರೆಂದು ನೆನೆದಾಗ ಅವಳ ಹೃದಯ ಡವಗುಟ್ಟಿತು. ಮುಂದೆ ಬಾಗಿ, ತದೇಕಚಿತ್ತಳಾಗಿ ಆ ಕುರುಡನನ್ನು ನೋಡಿದಳು-ದೃಷ್ಟಿಗೆ ದೃಷ್ಟಿ ಮರಳಿಸಲು ಸಾಧ್ಯವಾಗದ ಯಾವುದೋ ವಸ್ತುವನ್ನು ನೋಡುತ್ತಿರುವ ತರಹ. ಆರಾಮಾಗಿ ಕಣ್ತೆರೆದು ನಿಂತ ಆತ ಮಂದಬೆಳಕಿನಲ್ಲಿ ಗಮ್ ಮೆಲ್ಲುತ್ತಿದ್ದ. ಮೆಲ್ಲುತ್ತಿದ್ದ ಆತನ ಮುಖದ ಹಾವಭಾವದಿಂದ ಆತ ಮುಗುಳ್ನಗುತ್ತಿರುವಂತೆ ತೋರಿದ; ಮುಗುಳ್ನಗೆ ಮೂಡುವುದು ಮಾಯವಾಗುವುದಕ್ಕಾಗಿ, ಮತ್ತೆ ಮೂಡುವುದಕ್ಕಾಗಿ

ಎನ್ನುವ ರೀತಿಯಲ್ಲಿ. ಅವನು ಅವಳಿಗೆ ಅಪಮಾನ ಮಾಡಿರುವ ತರಹ ಅವಳು ಅವನ ಕಡೆ ದಿಟ್ಟಿಸಿ ನೋಡಿದಳು. ಯಾರಾದರೂ ನೋಡಿದವರು ಆಕೆ ಅಸೂಯೆಯಿಂದ ಅವನನ್ನು ನಿರೀಕ್ಷಿಸುತ್ತಿದ್ದಳು ಎನ್ನಬಹುದಿತ್ತು. ಅವಳು ಬಾಗುತ್ತ, ಮುಂಬಾಗುತ್ತ, ಅವನನ್ನು ದಿಟ್ಟಿಸಿ ನೋಡುತ್ತಲೇ ಇದ್ದಳು-ಟ್ರ್ಯಾಮು ಥಟ್ಟನೆ ನೂಕಿ ಒಮ್ಮಿಂದೊಮ್ಮೆಲೆ ಅವಳನ್ನು ಸೀಟಿನಲ್ಲಿ ಹಿಂದಕ್ಕೆ ತಳ್ಳುವವರೆಗೂ. ತೊಡೆಯ ಮೇಲಿದ್ದ ಭಾರವಾದ ಹೆಣಿಗೆಯ ಬ್ಯಾಗು ಕೆಳಗೆ ಉರುಳಿಬಿತ್ತು. ಅನ್ನಾ ಅರಚಿದಳು; ಏನಾಯಿತೊ ಎಂದು ದಿಗಿಲುಗೊಂಡು ಕಂಡಕ್ಟರ್ ಸಿಗ್ನಲ್ ಕೊಟ್ಟ, ಟ್ರ್ಯಾಮು ಗಕ್ಕನೆ ನಿಂತಿತು. ಸಹಪ್ರಯಾಣಿಕರು ಆಶ್ಚರ್ಯಚಕಿತರಾಗಿ ನೋಡಿದರು. ತನ್ನ ಷಾಪಿಂಗಿನ ಸಾಮಾನುಗಳನ್ನು ಆರಿಸಲಾಗದೆ ಅಸಹಾಯಕತೆಯಿಂದ ಅನ್ನಾ ನೆಟ್ಟಗೆ ಕುಂತಳು; ಅವಳ ಮುಖ ಒಮ್ಮೆಲೆ ನಿಸ್ತೇಜಗೊಂಡಿತ್ತು. ಎಂದೋ ಮರೆತಂತಿದ್ದ ಮುಖಭಾವ, ಈಗ ಅಸಹ್ಯವಾಗಿ ಮತ್ತೆ ಮರುಕಳಿಸಿತ್ತು; ಅದು ಅನಿರೀಕ್ಷಿತ ಹಾಗೂ ಅನಿರ್ವಚನೀಯವಾಗಿತ್ತು. ದಿನಪತ್ರಿಕೆ ಮಾರುವ ನೀಗ್ರೋ ಹುಡುಗ, ಸಾಮಾನು ಆರಿಸಿ, ತುಂಬಿದ ಬ್ಯಾಗನ್ನು ಆಕೆಗೆ ಕೊಡುತ್ತ ಮುಗುಳ್ನಕ್ಕ. ಪೇಪರಿನಲ್ಲಿ ಸುತ್ತಿದ್ದ ಮೊಟ್ಟೆಗಳು ಒಡೆದಿದ್ದವು. ಮೊಟ್ಟೆಯ ಅಂಟುಲೋಳೆ ಬ್ಯಾಗಿನ ಎಳೆಗಳಿಂದ ತೊಟ್ಟಿಕ್ಕುತ್ತಿತ್ತು. ಕುರುಡ ಮೆಲ್ಲುವುದನ್ನು ನಿಲ್ಲಿಸಿ, ಏನಾಯಿತೆಂದು ತಿಳಿಯಲು ವ್ಯರ್ಥ ಪ್ರಯತ್ನಿಸುತ್ತ, ತನ್ನ ನಡುಗುವ ಕೈಗಳನ್ನು ಮುಂಚಾಚಿದ್ದ. ಮೊಟ್ಟೆಯ ಪಾಕೀಟನ್ನು ತನ್ನ ಬ್ಯಾಗಿನಿಂದ ಆಕೆ ಹೊರತೆಗೆದಾಗ ಪ್ರಯಾಣಿಕರು ಮುಗುಳ್ನಕ್ಕರು. ಕಂಡಕ್ಟರ್ ಎರಡನೇ ಸಿಗ್ನಲ್ ಕೊಟ್ಟಾಗ ಟ್ರ್ಯಾಮು ದಡಗ್ಗೆಂದು ತೂಗಿ ಚಲಿಸತೊಡಗಿತು.

ಕೆಲ ನಿಮಿಷಗಳ ನಂತರ ಪ್ರಯಾಣಿಕರಾರೂ ಆಕೆಯನ್ನು ದಿಟ್ಟಿಸಲಿಲ್ಲ. ಟ್ರ್ಯಾಮು ಹಳಿಗಳ ಮೇಲೆ ಗಡಗಡ ಸದ್ದು ಮಾಡುತ್ತಿತ್ತು. ಗಮ್ ಮೆಲ್ಲುತ್ತ ನಿಂತಿದ್ದ ಕುರುಡ ಹಿಂದಕ್ಕೆ ಉಳಿದ. ಆದರೆ ನಷ್ಟವಂತೂ ಆಗಿಬಿಟ್ಟಿತ್ತು.

ಹೆಣಿಗೆಯ ಬ್ಯಾಗು ಆಕೆಯ ಬೆರಳುಗಳಿಗೆ ಒರಟಾಗಿ ಹತ್ತಿತು. ಹೆಣೆದಾಗಿನ ಮೃದುತ್ವ ಹಾಗೂ ಆಪ್ತತೆ ಈಗಿರಲಿಲ್ಲ, ಟ್ರ್ಯಾಮಿನಲ್ಲಿ ಅದರ ಎಳೆ ಹರಿದುಬಿಟ್ಟದ್ದರಿಂದ ಅವಳಿಗೆ ಬ್ಯಾಗು ತನ್ನ ಅರ್ಥ ಕಳೆದುಕೊಂಡುಬಿಟ್ಟಿತ್ತು. ತೊಡೆಯ ಮೇಲಿದ್ದ ಸಾಮಾನು ತಗೊಂಡು ಈಗೇನು ಮಾಡಬೇಕು ಆಕೆಗೆ ತಿಳಿಯಲಿಲ್ಲ. ಒಂದು ವಿಚಿತ್ರ ಸಂಗೀತದಂತೆ ಆಕೆಯ ಸುತ್ತ ಪುನಃ ಪ್ರಪಂಚ ತೆರೆದುಕೊಂಡಿತು. ನಷ್ಟವಂತೂ ಸಂಭವಿಸಿಬಿಟ್ಟಿತ್ತು. ಆದರೆ ಯಾಕೆ? ಈ ಜಗದಲ್ಲಿ ಕುರುಡರಿರುತ್ತಾರೆಂಬುದನ್ನೇ ಆಕೆ ಮರೆತಿದ್ದಳೆ? ಮರುಕ ಆಕೆಗೆ ಉಸಿರುಗಟ್ಟಿಸಿತು. ಉಸಿರಾಟ ಜಡವಾಯಿತು. ಈ ಪ್ರಸಂಗಪೂರ್ವದಲ್ಲಿ ಯಥಾವತ್ತಾಗಿದ್ದ ವಸ್ತುಗಳು, ಈಗ ಅಪಾಯಕಾರಿ, ವಿಪತ್ಕಾರಿ ಹಾಗೂ ವಿನಾಶಕಾರಿ ಎನಿಸಿದವು. ಪ್ರಪಂಚ ಮತ್ತೆ ಅವಳಿಗೆ ದುಃಸ್ವಪ್ನ



ವಾಯಿತು. ಎಷ್ಟೋ ವರ್ಷಗಳು ತಪ್ಪಿಹೋದವು, ಮೊಟ್ಟೆಯ ಹಳದಿ ಲೋಳೆ ಜಿನುಗುತ್ತಿತ್ತು. ತನ್ನ ದಿನಗಳಿಂದಲೇ ಗಡಿಪಾರಾದ ಆಕೆ, ಬೀದಿಯ ಜನವಂತೂ ದಾಳಿಗೆ ತುತ್ತಾಗಬಲ್ಲರು ಎಂದು ಭಾವಿಸಿದಳು; ಕಾರಣ, ಕತ್ತಲೆಯ ಮೇಲ್ಪದರಿನಲ್ಲಿ ಮಾತ್ರ ಅವರು ತೋಲ ಕಾಯ್ದುಕೊಳ್ಳಬಲ್ಲರು-ಒಂದು ಕ್ಷಣ, ಅವರೆಲ್ಲ ಗೊತ್ತುಗುರಿಯ ಕಲ್ಪನೆಯನ್ನೇ ಕಳಕೊಂಡವರು ಎಂದು ಅನಿಸಿತು. ಯಾವ ನೀತಿ ನಿಯಮಗಳೂ ಈಗ ಉಳಿದಿಲ್ಲ ಎಂಬ ಅನಿರೀಕ್ಷಿತ ಗ್ರಹಿಕೆಯಿಂದಾಗಿ ಅನ್ನಾ ತನ್ನೆದುರಿನ ಸೀಟನ್ನು ಗಟ್ಟಿಯಾಗಿ ಹಿಡಿದುಕೊಂಡಳು; ಓರಣವಾಗಿ, ಜತನವಾಗಿದ್ದ ಸಾಮಾನುಗಳು ಯಾವುದೇ ಕ್ಷಣ ಉರುಳಿಬಿಟ್ಟಂತೆ ತಾನೂ ಉರುಳಿಬಿಡಬಹುದೆಂಬ ಆತಂಕ ಇದ್ದಂತಿತ್ತು.

ಕೊನೆಗೂ ಅವಳು ಅಂದುಕೊಂಡಿದ್ದ ಉತ್ಕಟ ಸ್ಥಿತಿ ಬಂದೇಬಿಟ್ಟಿತು. ಅದರ ಆಗಮನದ ಸಂಕೇತ ಎಂದರೆ, ಆಕೆ ತೀವ್ರ ಆಸಕ್ತಿಯಿಂದ ನೋವು ಹಾಗೂ ಭೀತಿಗೆ ಕಾರಣವಾಗಬಲ್ಲ ಸಂಗತಿಗಳನ್ನು ಪುನಃ ಗಮನಿಸತೊಡಗಿದ್ದಳು. ಉಷ್ಣತೆ ಅಸಹನೀಯವಾಗಿತ್ತು; ಪ್ರತಿಯೊಂದು ವಸ್ತುವೂ ಹೆಚ್ಚು ದೃಢವಾದ ಧ್ವನಿಯನ್ನು ಹಾಗೂ ಹೊಸ ಶಕ್ತಿಯನ್ನು ಪಡೆದುಕೊಂಡಿತ್ತು. ರುವಾ ವಾಲಂಟರೊಯಿಸ್ ದಾ ಪ್ಯಾಟ್ರಿಯಾದಲ್ಲಿ ಬಂಡಾಯ ಸಮೀಪಿಸಿದಂತಿತ್ತು; ಗಟಾರುಗಳು ಒಣಗಿದ್ದವು. ಹವೆ, ಧೂಳಿನಿಂದ ಕೂಡಿತ್ತು. ಗಮ್ ಮೆಲ್ಲುತ್ತಿದ್ದ ಕುರುಡ, ಪ್ರಪಂಚವನ್ನು ನಿಗೂಢ ಸಂಭ್ರಮಗಳೊಳಗೆ ತಳ್ಳಿದ್ದ, ಪ್ರತಿಯೊಬ್ಬ ಸಬಲ ವ್ಯಕ್ತಿಯೂ ಕುರುಡನಿಗೆ ಕರುಣೆ ತೋರಲಾರನೇನೋ ಎನಿಸಿತು. ಅವರ ಶಕ್ತಿ, ಸಾಮರ್ಥ್ಯಗಳೇ ಆಕೆಗೆ ದಿಗಿಲುಂಟು ಮಾಡಿದವು. ಅವಳ ಪಕ್ಕದಲ್ಲಿ ನೀಲಿ ಉಡುಪಿನ ಒಬ್ಬ ಮಹಿಳೆ ಕೂತಿದ್ದಳು; ಅವಳ ಮುಖದ ಭಾವ ಆಕೆ ತನ್ನ ನೋಟವನ್ನು ಬೇರೆಡೆಗೆ ಹೊರಳಿಸುವಂತೆ ಮಾಡಿತು. ಕಾಲುಹಾದಿಯಲ್ಲಿದ್ದ ತಾಯಿ, ತನ್ನ ಪುಟ್ಟ ಮಗನ ಮೈದಡವುತ್ತಿದ್ದಳು. ಪ್ರೇಮಿಗಳಿಬ್ಬರು ಕೈ ಕೈ ಹಿಡಿದು ಮುಗುಳ್ನಗುತ್ತಿದ್ದರು... ಆ ಕುರುಡ? ಅನ್ನಾ ಅವನಿಗೆ ಕರುಣೆ ತೋರುತ್ತಿದ್ದಂತೆ ಆ ಕರುಣೆಯೇ ಆಕೆಯನ್ನು ಸಂಕಟಕ್ಕೀಡು ಮಾಡಿತ್ತು.

ಆಕೆ ಜಾಣತನದಿಂದ ಜೀವನವನ್ನು ಸಂತೈಸಿಕೊಂಡುಬಂದಿದ್ದಳು; ಭಾರೀ ಬದಲಾವಣೆಗಳಿಂದ ತಪ್ಪಿಸಿಕೊಳ್ಳಲು ಎಲ್ಲ ಕಾಳಜಿ ವಹಿಸಿದ್ದಳು. ಪ್ರತಿಯೊಬ್ಬನನ್ನು ಇನ್ನೊಬ್ಬನಿಂದ ಪ್ರತ್ಯೇಕಿಸಿ ನೋಡುವ ಸಮಾಧಾನದ ತಿಳುವಳಿಕೆಯನ್ನು ನಿರ್ಮಿಸಿಕೊಂಡಿದ್ದಳು. ಅವಳು ತನ್ನ ಉಡುಪುಗಳನ್ನು ನಿತ್ಯದ ಬದುಕಿಗೆ ಒಗ್ಗುವಂತೆ ಸ್ಪಷ್ಟವಾಗಿ ರೂಪಿಸಿದ್ದಳು. ದಿನಪತ್ರಿಕೆಯಿಂದ ತನಗೆ ಬೇಕಾದ ಚಲನಚಿತ್ರವನ್ನು ಆರಿಸಿಕೊಳ್ಳುತ್ತಿದ್ದಳು-ಪ್ರತಿ ದಿನವನ್ನೂ, ಹಿಂದಿನ ದಿನದಂತೆಯೇ ಸರಾಗವಾಗಿ ಕಳೆಯುವಂತೆ ಆಕೆ ಯೋಜಿಸಿದ್ದಳು. ಆದರೆ ಗಮ್ ಮೆಲ್ಲುತ್ತಿದ್ದ ಕುರುಡ ಇದನ್ನೆಲ್ಲ ಹಾಳುಮಾಡತೊಡಗಿದ್ದ. ಆಕೆ ತಾನು ತೋರುತ್ತಿದ್ದ ಕರುಣೆಯಿಂದಾಗಿ ಬದುಕು ಜಿಗುಪ್ಸೆಯಿಂದ ತುಂಬಿಬಿಟ್ಟಿದೆ ಅಂತ ಭಾವಿಸಿದಳು.

ತಾನಿಳಿಯಬೇಕಾಗಿದ್ದ ಸ್ಟಾಪ್ ಯಾವಾಗಲೋ ದಾಟಿಬಿಟ್ಟಿರುವುದನ್ನೂ ಅನ್ನಾ ಈಗ ಅರಿತಳು. ಅವಳ ದುರ್ಬಲತೆಯ ಸ್ಥಿತಿಯಲ್ಲಿ ಈಗ ಪ್ರತಿಯೊಂದೂ ಭೀತಿ ಹುಟ್ಟಿಸುತ್ತಿತ್ತು. ಟ್ರ್ಯಾಮು ಇಳಿದಾಗ ಅವಳ ಕಾಲುಗಳು ನಡುಗುತ್ತಿದ್ದವು. ಮೊಟ್ಟೆಯಿಂದ ಹೊಲಸಾದ ಹೆಣಿಗೆಯ ಬ್ಯಾಗನ್ನು ಗಟ್ಟಿಯಾಗಿ ಅವಚಿಕೊಂಡು ಸುತ್ತ ನೋಡಿದಳು. ಒಂದು ಕ್ಷಣ ಆಕೆಗೆ ನೆಲೆಯೇ ತಪ್ಪಿದಂತೆನಿಸಿತು. ಆಕೆಗೆ ತಾನು ನಡುರಾತ್ರಿಯ ಕಗ್ಗತ್ತಲಿನಲ್ಲಿ ಇಳಿದಂತೆನಿಸಿತು.

ಎತ್ತರದ ಹಳದಿ ಗೋಡೆಗಳ ನಡುವೆ ಉದ್ದ ದಾರಿಯಿತ್ತು. ತನ್ನ ಸುತ್ತಲನ್ನು ಗುರುತಿಸಲು

ವ್ಯರ್ಥ ಪ್ರಯತ್ನಿಸುತ್ತಿದ್ದಂತೆ, ಅವಳ ಹೃದಯ ಭಯದಿಂದ ಬಡಿದುಕೊಳ್ಳತೊಡಗಿತು. ಆದರೆ ಅವಳು ಈ ಮೊದಲು ಕಂಡುಕೊಂಡಿದ್ದ ಜೀವನ ಮತ್ತೆ ಮಿಡಿಯತೊಡಗಿದಾಗ ಸೌಮ್ಯ ಹಾಗೂ ನಿಗೂಢ ಗಾಳಿ ಅವಳ ಮುಖದಡವಿತು. ಶಾಂತವಾಗಿ ಗೋಡೆ ನಿರೀಕ್ಷಿಸುತ್ತ ಕೊನೆಗೆ ಅದನ್ನು ಗುರುತಿಸಿದಳು. ಮುಳ್ಳುಕಂಟಿಯಗುಂಟ ಸಾಗಿ, ಸಸ್ಯ ವಿಜ್ಞಾನದ ಉದ್ಯಾನದ ಗೇಟಿನ ಮೂಲಕ ಬಂದಳು.

ಪ್ರಯಾಸದಿಂದ ಸಾಲು-ತಾಳೆಗರಿಗಳ ನಡುವಿನ ಮುಖ್ಯ ರಸ್ತೆಯಲ್ಲಿ ನಡೆದಳು. ಉದ್ಯಾನದಲ್ಲಿ ಯಾರೂ ಇರಲಿಲ್ಲ. ತನ್ನ ಸಾಮಾನು ನೆಲದ ಮೇಲಿಟ್ಟು ಪಕ್ಕದ ಕಾಲುದಾರಿಯ ಬೆಂಚಿನಲ್ಲಿ ಕೂತಳು; ಕೆಲಹೊತ್ತು ಅಲ್ಲೇ ಕೂತುಕೊಂಡಳು.

ಕಾಡು ಅವಳನ್ನು ಸಂತೈಸಿದಂತೆನಿಸಿತು. ಅಲ್ಲಿ ಆವರಿಸಿದ್ದ ಮೌನ ಅವಳ ಉಸಿರಾಟವನ್ನು ನಿಯಂತ್ರಿಸಿ, ಇಂದ್ರಿಯಗಳನ್ನು ಶಾಂತ ಗೊಳಿಸಿತು.

ದೂರದಿಂದ, ಸಾಲುಮರಗಳ ಹಾದಿ ಯುದ್ದಕ್ಕೂ ದೃಷ್ಟಿ ಹರಿಸಿದಾಗ, ಸಂಜೆ ದುಂಡಾಗಿ ನಿರಭ್ರವಾಗಿರುವುದನ್ನು ಕಂಡಳು. ಆದರೆ ಗಿಡಗಳ ಟೊಂಗೆಗಳ ನೆರಳುಗಳು ಪಕ್ಕದ ಕಾಲುದಾರಿಯನ್ನು ವ್ಯಾಪಿಸಿದ್ದವು.

ಅವಳು ತನ್ನ ಸುತ್ತಲಿನ ಪ್ರಶಾಂತ ಕಲರವ, ಗಿಡಮರಗಳ ಪರಿಮಳ, ಹರಿದಾಡುವ ಬಳ್ಳಿಗಳ ಸಮಾಗಮ ಗ್ರಹಿಸಿದಳು. ಇಡೀ ಉದ್ಯಾನ ಸಂಜೆಯ ಅತ್ಯಂತ ಕ್ಷಣಭಂಗುರ ಗಳಿಗೆಗಳಿಂದಾಗಿ ಖಂಡ ಖಂಡವಾಗಿತ್ತು. ತನ್ನ ಆವರಿಸಿರುವ ಈ ಮಂಪರು ಎಲ್ಲಿಂದ ಬಂತು? ಪಕ್ಷಿಗಳ ಹಾಗೂ ಜೇನುಹುಳಗಳ ಝೇಂಕಾರದಿಂದ ಪ್ರೇರಿತವಾಗಿರಬೇಕು. ಪ್ರತಿಯೊಂದೂ ಆಕೆಗೆ ಬಹಳ ವಿಚಿತ್ರವಾಗಿ, ನಯ ನಾಜೂಕಾಗಿ, ಮಹತ್ತಾಗಿ ತೋರಿತು.



ಏನೋ ಮೆತ್ತಗೆ, ಆಪ್ತವಾಗಿ ಚಲಿಸಿದ ತರಹ ಆಗಿ ಆಕೆ ಅಚ್ಚರಿಗೊಂಡು ಲಗುಬಗೆಯಿಂದ ಸುತ್ತ ಕಣ್ಣಾಡಿಸಿದಳು. ಏನೂ ಚಲಿಸಿದಂತೆ ಕಾಣಲಿಲ್ಲ. ಆದರೆ ಮುಖ್ಯ ದಾರಿಯಲ್ಲಿ ಒಂದು ದೊಡ್ಡ ಬೆಕ್ಕು ಅಲುಗದೆ ಕುಂತಿತ್ತು. ಅದರ ತುಪ್ಪಳ ಮೃದು ವಾಗಿತ್ತು, ಬಳಿಕ ನಿಧಾನ ನಡೆದು ಮಾಯವಾಯಿತು.

ಆತಂಕದಿಂದ ಅವಳು ತನ್ನ ಸುತ್ತ ನೋಡಿದಳು. ಗಿಡಗಳ ಟೊಂಗೆಗಳು ಅಲ್ಲಾಡಿದಂತೆ ನೆಲದ ಮೇಲೆ ಬಿದ್ದ ಅವುಗಳ ನೆರಳುಗಳೂ ಅಲ್ಲಾಡಿದವು. ಗುಬ್ಬಿಯೊಂದು ಮಣ್ಣಲ್ಲಿ ಹುಡುಕಾಟ ನಡೆಯಿಸಿತ್ತು. ಒಮ್ಮೆಲೆ, ಗಾಬರಿಯಿಂದ ಸೈನ್ಯದ ತಂಗುದಾಣದಲ್ಲಿ ತಾನು ಬಂದುಬಿದ್ದಿರುವೆನೆಂದು ಆಕೆ ಭಾವಿಸಿದಳು, ಉದ್ಯಾನದಲ್ಲಿ ರಹಸ್ಯ ಚಟುವಟಿಕೆಗಳು ನಡೆದಿರುವುದನ್ನು ತೀವ್ರವಾಗಿ ಗ್ರಹಿಸಿದಳು.




ಗಿಡಗಳಲ್ಲಿ ಹಣ್ಣುಗಳು ಕಂದುಬಣ್ಣಕ್ಕೆ ತಿರುಗಿ ಜೇನಿನಂತೆ ಮಧುರವಾಗಿದ್ದವು. ಕೊಳೆಬಿದ್ದ ಸಣ್ಣ ಸಣ್ಣ ಮಿದುಳುಗಳ ತರಹ ಸುರ್ರುಳಿ ಸುತ್ತಿದ ಒಣಗಿದ ಹಣ್ಣುಗಳು ನೆಲದ ಮೇಲೆ ಬಿದ್ದಿದ್ದವು. ಬೆಂಚು, ಗಿಡದ ಕೆನ್ನೀಲಿಯ ರಸದಿಂದ ಹೊಲ ಸಾಗಿತ್ತು. ನೀರು ಒಂದೇ ಸಮನೆ ಜುಳುಜುಳು ಸದ್ದು ಮಾಡುತ್ತಿತ್ತು. ಕಾಂಡದ ಮೇಲೆ ಸಮೃದ್ಧವಾಗಿ ಪರಾವಲಂಬಿ ಸಸ್ಯಗಳ ಹೀರು ಬೇರುಗಳು ತಂತಾವೇ ಬಿಗಿದುಕೊಂಡಿದ್ದವು. ಈ ಒರಟು ಪ್ರಪಂಚ ಪ್ರಶಾಂತವಾಗೇ ಇತ್ತು. ಹತ್ಯೆ ಆಳವಾಗಿ ನಡೆದಿತ್ತು. ಸಾವು ನಮ್ಮ ಕಲ್ಪನೆಯ ತರಹ ಸಂಭವಿಸಿರಲಿಲ್ಲ.

ಇದೊಂದು ಕಾಲ್ಪನಿಕ ಪ್ರಪಂಚದ ರೀತಿ ಇದ್ದರೂ, ಇದನ್ನು ಹಲ್ಲುಗಳಿಂದ ಜಗಿದು ತಿನ್ನಬಹುದಿತ್ತು; ಇದು ಡಾಲಿಯ ಮತ್ತು ಟ್ಯುಲಿಪ್ ಹೂಗಿಡಗಳ ಸಮೃದ್ಧ ಪ್ರಪಂಚ. ಕಾಂಡಗಳನ್ನು ಎಲೆಯಿಂದ ಆವೃತವಾದ ಪರಾವಲಂಬಿ ಜೀವಿಗಳು ವ್ಯಾಪಿಸಿದ್ದವು, ಅವು ನಯವಾಗಿ ಹಿಡಿದು ಅಪ್ಪಿದ್ದವು.

ಶರಣಾಗುವ ಮೊದಲು ಒಂದು ರೀತಿ ವಿರೋಧ ನಡೆದಿದ್ದನ್ನೂ ಗಮನಿಸಿದಳು; ಅದು ಮೋಹಕ ಎನಿಸಿತು. ಅಸ್ಟ್ವಾ ಜಿಗುಪ್ಸೆಗೊಂಡಳು. ಆದರೆ ಆ ದೃಶ್ಯ ಮೋಹಕ ವಾಗಿತ್ತು.

ಗಿಡಗಳು ಭಾರಗೊಂಡಿದ್ದವು; ಬಿದ್ದು ಕೊಳೆಯುವಷ್ಟು. ಈ ಪ್ರಪಂಚ ಶ್ರೀಮಂತ ವಾದದ್ದು. ಆದರೂ ಮಕ್ಕಳು, ದೊಡ್ಡವರು ಹಸಿವೆಯಿಂದ ಬಳಲುತ್ತಿದ್ದಾರೆಂದು ಆಲೋಚಿಸು ತ್ತಿದ್ದಂತೆ ಆಕೆಗೆ, ಒಂಟಿ ಬಸಿರು ಹೆಣ್ಣಿನ ತರಹ, ಗಂಟಲಲದಲ್ಲಿ ಓಕರಿಕೆ ಬಂದಂತಾಯಿತು. ಈ ಉದ್ಯಾನ ಕಲಿಸುವ ಪಾಠ ಒಂದಿಷ್ಟು ಬೇರೆಯೇ ಆಗಿತ್ತು. ಆ ಕುರುಡ ಅವಳನ್ನು ಇಲ್ಲಿಗೆ ಕರೆತಂದಿದ್ದ. ನೀರಲ್ಲಿ ದೈತ್ಯ ಲಿಲಿ ಹೂಗಳು ತೇಲಾಡುತ್ತಿದ್ದವು; ಈ ಗಾಢ, ಮೋಹಕ ಪ್ರಪಂಚದ ತುದಿಯಲ್ಲಿ ನಿಂತು ತಲ್ಲಣಿಸಿದಳು. ಹುಲ್ಲಲ್ಲಿ ಹರಡಿದ್ದ ಪುಟ್ಟ ಹೂಗಳು ಹಳದಿ ಇಲ್ಲಾ ಎಳೆಗೆಂಪು ಇರದೆ ಕೇಸರಿ ಹಾಗೂ ಚಿನ್ನದ ಬಣ್ಣ ಪಡೆದಿದ್ದವು. ಅವುಗಳ ವಿನಾಶ ಗಾಢವಾಗಿತ್ತು, ಪರಿಮಳಯುಕ್ತವಾಗಿತ್ತು. ಈ ಎಲ್ಲ ಹಿಂಸೆಯ ಚಟುವಟಿಕೆಗಳನ್ನು ಗಮನಿಸುತ್ತಿದ್ದಂತೆಯೇ, ಹೆಚ್ಚು ಸಂಸ್ಕಾರಗೊಂಡ ಪ್ರಪಂಚದಿಂದ ಹಾರಿ ಬಂದ ಜೇನುಹುಳಗಳ ಹಿಂಡು ಅವಳ ತಲೆಸುತ್ತ ಆವರಿಸಿ ದವು. ತಂಗಾಳಿ ಹೂಗಳೊಳಗೆ ಹೊಕ್ಕಿತು. ಅದರ ಪರಿಮಳವನ್ನು ಆಘ್ರಾಣಿಸಿದ್ದಕ್ಕಿಂತ ಹೆಚ್ಚಿಗೆ ಅದನ್ನು ಕಲ್ಪಿಸಿಕೊಂಡಳು. ಅವಳು ನರಕದ ಬಗ್ಗೆ ಭಯಗೊಂಡಷ್ಟು, ಉದ್ಯಾನ ಸುಂದರವಾಗಿ ಕಂಡಿತು.

ಆಗಲೇ ಕತ್ತಲು ಕವಿಯುವುದರಲ್ಲಿತ್ತು; ಪ್ರತಿ ವಸ್ತುವೂ ಸಂಪೂರಿತವಾಗಿ ಭಾರವಾಗಿತ್ತು; ಅಳಿಲು ಕತ್ತಲಲ್ಲಿ ಜಿಗಿದಾಡಿತ್ತು, ತನ್ನ ಕಾಲ ಕೆಳಗಿನ ನೆಲ ಆಕೆಗೆ ಮೆತ್ತಗನಿಸಿತು. ಖುಷಿಯಿಂದ ಅದರ ವಾಸನೆ ಮೂಸಿದಳು. ಆದರೆ ಅದು ಒಮ್ಮೆಲೆ ಮೋಹಕವೂ, ಅಸಹ್ಯಕರವೂ ಆಗಿತ್ತು.

ಅವಳಿಗೆ ಮಕ್ಕಳ ನೆನಪಾಗಿ ತಪ್ಪಿತಸ್ಥ ಭಾವನೆ ಮೂಡಿತು. ನೋವಿನಿಂದ ಉಸಿರು ಹಾಕುತ್ತ ಮನೆಯ ಕಡೆ ಸೀದಾ ಹೊರಟಳು. ಆಕೆ ತನ್ನ ಕಟ್ಟನ್ನು ಗಟ್ಟಿಯಾಗಿ ಹಿಡಿದುಕೊಂಡು, ಪಕ್ಕದ ಕತ್ತಲೆಯ ಕಾಲುದಾರಿ ಹಿಡಿದು ಸಾಲುಮರದ ಮುಖ್ಯರಸ್ತೆಗೆ ಬಂದಳು. ಈಗ ಓಡುವಷ್ಟು ವೇಗವಾಗಿ ನಡೆದಿದ್ದಳು. ಅವಳ ಸುತ್ತಲಿನ ಉದ್ಯಾನ ಈಗ ಆಕೆಗೆ ಏಕಾಕಿಯಾಗಿ, ಅವೈಯಕ್ತಿಕ ಸ್ವರೂಪ ಪಡೆದಿತ್ತು. ಕೀಲಿ ಹಾಕಿದ ಗೇಟಿನ ಬಳಿ ಬಂದು, ಒರಟು ಕಟ್ಟಿಗೆಯನ್ನು ಗಟ್ಟಿ ಹಿಡಿದು ಅಲುಗಾಡಿಸುತ್ತ ನಿಂತಳು. ವಾಚ್‌ಮನ್ ತನಗೆ ಆಕೆ ಬಂದದ್ದು ಹೇಗೆ ತಿಳಿಯಲಿಲ್ಲವೋ ಎಂದು ಆತಂಕಪಟ್ಟುಕೊಂಡಂತೆ ಕಂಡ.

ಕಟ್ಟಡದ ಪ್ರವೇಶ ದ್ವಾರದವರೆಗೆ ಬಂದು ಮುಟ್ಟಿದಾಗ ಆಕೆ ಕುಸಿದು ಬೀಳುವಂತಾಗಿದ್ದಳು. ಹೆಣಿಗೆಯ ಬ್ಯಾಗು ಹಿಡಿದು ಎಲಿವೇಟರ್‌ವರೆಗೆ ಬಂದಾಗ ಆಕೆಯ ಹೃದಯ ಎದೆಯಲ್ಲಿ ಡವಗುಡುತ್ತಿತ್ತು-ಆಕೆಗೆ ಏನಾಗುತ್ತಿತ್ತು? ಕುರುಡ ನಿಗ ತೋರಿದ ಅವಳ ಅನುಕಂಪವು ಭಯ ಹಾಗೂ ವೇದನೆಗಳನ್ನುಂಟುಮಾಡಿತು. ಆದರೆ ಮಲಿನಗೊಂಡು ನಾಶಗೊಳ್ಳುವ ಈ ಪ್ರಪಂಚ ಅವಳದೇ. ಫ್ಲ್ಯಾಟ್‌ನ ಬಾಗಿಲು ತೆರೆದಳು. ಚಚ್ಚೌಕಾರದ ದೊಡ್ಡ ಕೋಣೆ ಅದು; ಲ್ಯಾಂಪು ಪ್ರಕಾಶಮಾನವಾಗಿ ಬೆಳಗಿತು, ಪಾಲೀಶು ಗೊಂಡ ಬಾಗಿಲ ಹಿಡಿಗಳು ಹೊಳೆದವು, ಕಿಡಕಿಯ ಕಾಜುಗಳು ಹೊಳೆದವು. ಇದು ಯಾವ ಹೊಸ ಪ್ರದೇಶ? ಒಂದು ಕ್ಷಣ ಆಕೆ ಈವರೆಗ ಕಳೆದಿದ್ದ ಹಿತವಾದ್ದ ಜೀವನ ಉನ್ಮಾದಾವಸ್ಥೆ ಮುಟ್ಟಿದಂತಿತ್ತು, ನೀಳಕಾಲಿನ, ಅವಳ ಮುಖ ವನ್ನೇ ಹೋಲುವ ಅವಳ ಪುಟ್ಟ ಮಗ ಅವಳನ್ನು ಅಪ್ಪಿಕೊಳ್ಳಲು ಓಡಿ ಬಂದ. ದುಗುಡ ಹಾಗೂ ಭಯಗಳಿಂದ ಅವನನ್ನು ತನ್ನ ಎದೆಗವಚಿ ಕೊಂಡಳು. ನಡುಗುತ್ತ ತಂತಾನೇ ರಕ್ಷಿಸಿ ಕೊಂಡಳು. ಜೀವನ ಭೇದ್ಯವಾದದ್ದು. ಅವಳು ಈ ಪ್ರಪಂಚವನ್ನು ಪ್ರೀತಿಸಿದಳು, ಇಲ್ಲಿ

ಸೃಷ್ಟಿಗೊಂಡ ಎಲ್ಲ ವಸ್ತುಗಳನ್ನೂ ಪ್ರೀತಿಸಿದಳು, ಜಿಗುಪ್ಸೆಗೊಳ್ಳುತ್ತಲೇ ಪ್ರೀತಿಸಿದಳು. ಸಿಂಪಿಗಳ ಸೆಳೆತಕ್ಕೆ ಪಕ್ಕಾಗಿರುವಾಗಲೇ, ವಾಸ್ತವ ತಿವಿದು ಜಿಗುಪ್ಸೆಯ ಮನೋಭಾವ ತಾಳಿದಳು. ಆಕೆ ತನ್ನ ಮಗನನ್ನು ಅಪ್ಪಿಕೊಂಡಳು-ಆತನಿಗೆ ನೋವಾಗು ವಷ್ಟು. ಯಾವುದೋ ಅನಿಷ್ಟ-ಆ ಕುರುಡ ಇಲ್ಲಾ ಆ ಸಸ್ಯವಿಜ್ಞಾನದ ಉದ್ಯಾನ-ತನ್ನ ಗಾಢ ವಾತ್ಸಲ್ಯದ ಮಗನಿಗೆ ತಾಕಬಾರದೆಂದು ಅವನನ್ನು ಗಟ್ಟಿಯಾಗಿ ಹಿಡಿದುಕೊಂಡಳು. ವಿಶ್ವಾಸದ ದೈತ್ಯ ಶಕ್ತಿ ಅವಳನ್ನು ಮತ್ತೆ ಸೆರೆಹಿಡಿಯಿತು.

'ಜೀವನ ಭೀಕರವಾಗಿದೆಯಪ್ಪಾ' ಅಂತ ತನ್ನ ಮಗನಿಗೆ ಸಣ್ಣ ದನಿಯಲ್ಲಿ ದುರ್ಬಲವಾಗಿ ಹೇಳಿದಳು. ಕುರುಡನ ಕರೆಗೆ ಆಕೆ ಓಗೊಟ್ಟಿದ್ದರೆ ಏನು ಮಾಡಬಹುದಿತ್ತು? ಅವಳೊಬ್ಬಳೇ ಹೋಗಿಬಿಡಬೇಕಾಗಿತ್ತು... ಕೆಲವು ಬಡ ಹಾಗೂ ಸಿರಿವಂತ ಸ್ಥಳಗಳಿಗೆ ಆಕೆಯ ಅಗತ್ಯ ಇತ್ತು; ಅವಳಿಗೂ ಅವು ಅಗತ್ಯವಾಗಿದ್ದವು. 'ನನಗೆ ಭಯ ಆಗ್ತಿದೆ' ಅಂದುಕೊಂಡಳು. ಅವಳಿಗೆ ತನ್ನ ತೋಳುಗಳ ನಡುವಿದ್ದ ಮಗುವಿನ ಎಲುಬುಗಳು ತಾಕಿದಂತೆನಿಸಿತು; ಮಗು ಅಂಜಿಕೊಂಡು ಅಳುವುದನ್ನು ಆಲಿಸಿದಳು.

'ಅಪ್ಪಾ' ಅಂತ ಮಗು ಕರೆಯಿತು. ಅವನನ್ನು ದೂರ ಸರಿಸಿ, ಅವನ ಮುಖ ಲಕ್ಷ್ಯಗೊಟ್ಟು ನೋಡಿದಳು; ಅವಳ ಹೃದಯ ಉಡುಗಿತು.

''ನಿನ್ನಪ್ಪ ನಿನ್ನನ್ನು ಮರಿಯೋದು ಬ್ಯಾಡಪ್ಪಾ'' ಅಂದಳು. ಅವಳ ಅಪ್ಪುಗೆ ಸಡಿಲುಗೊಂಡಂತೆ, ಅವ ಪಾರಾಗಿ, ಕೋಣೆಯ ಬಾಗಿಲತನಕ ಓಡಿ, ಅಲ್ಲಿಂದ ಆಕೆಯನ್ನು ಹೆಚ್ಚು ಸುರಕ್ಷಿತವಾಗಿ ನಿರೀಕ್ಷಿಸಿದ. ಅವನ ನೋಟ ಆಕೆ ಈವರೆಗೆ ಪಡೆದ ನಿರೀಕ್ಷಣೆಗಳಲ್ಲೇ ಅತ್ಯಂತ ಕೆಟ್ಟದ್ದಾಗಿತ್ತು. ಅವಳ ಗಲ್ಲಗಳಿಗೆ ಕಾದ ರಕ್ತ ಉಕ್ಕಿಬಂತು.

ಅವಳು ಕುರ್ಚಿಯಲ್ಲಿ ಕುಸಿದು ಕೂತಳು. ಸಾಮಾನುಗಳ ಹೆಣಿಗೆಯ ಬ್ಯಾಗನ್ನು ಇನ್ನೂ ಬೆರಳಲ್ಲಿ ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಆಕೆ ನಾಚಿಕೆಪಟ್ಟುಕೊಳ್ಳುವಂತಹದ್ದೇನಿತ್ತು? ಪಾರಾಗುವ ದಾರಿಯೇ ಇರಲಿಲ್ಲ. ಆಕೆ ನಿರ್ಮಿಸಿಕೊಂಡಿದ್ದ ತನ್ನ ದಿನಗಳ ಮೇಲಿನ ಗಟ್ಟಿ ಪದರು ಈಗ ಒಡೆದಿತ್ತು. ಅದರೊಳಗಿಂದ ನೀರು ಚಿಮ್ಮಿ ಬರುತ್ತಿತ್ತು. ಸಿಂಪಿಗಳೆದುರು ನಿಂತಳು. ತನ್ನ ಗಮನವನ್ನು ಆಕೆ ಬೇರೆ ಕಡೆ ಹೊರಳಿಸಬೇಕಾದ ಅಗತ್ಯ ಇರಲಿಲ್ಲ. ಆಕೆ ನಾಚಿಕೊಳ್ಳು ವಂತಹದ್ದೇನಿತ್ತು? ಖಂಡಿತ, ಆಕೆ ವ್ಯಕ್ತಪಡಿಸಿದ್ದು ಅನುಕಂಪ ಮಾತ್ರ ಆಗಿರಲಿಲ್ಲ. ಅದಕ್ಕಿಂತ ಮಿಗಿಲಾಗಿತ್ತು. ಅವಳ ಹೃದಯ ಬದುಕಲೇ ಬೇಕೆಂಬ ಕೆಟ್ಟ ಹಠದಿಂದ ತುಂಬಿಬಂದಿತ್ತು.

ಆಕೆ ತಾನು ಕುರುಡನ ಪರ ಇದ್ದಳೆ ಅಥವಾ ಸೊಂಪಾಗಿ ಬೆಳೆದ ಗಿಡಬಳ್ಳಿಗಳ ಪರ ಇದ್ದಳೆ-ಅದು ಅವಳಿಗೂ ತಿಳಿದಿರಲಿಲ್ಲ. ಆ ಮನುಷ್ಯ ಈಗ ಅಷ್ಟಷ್ಟೆ ಅವಳಿಂದ ದೂರಾಗಿದ್ದ. ಆಕೆ ತನ್ನ ಸಂಕಟದ ಸಮಯದಲ್ಲಿ ಅವನ ಕಣ್ಣುಗಳಿಗೆ ಗಾಯ ಮಾಡಿದವರ ಕಡೆ ಹೊರಳಿದ್ದಳು. ಎತ್ತರದ, ಪ್ರಶಾಂತವಾದ, ಸಸ್ಯವಿಜ್ಞಾನದ ಉದ್ಯಾನ ಆಕೆಗೆ ಹೊಸ ಅರಿವು ಮೂಡಿಸಿತ್ತು. ಪ್ರಪಂಚದ ಬಲಿಷ್ಠ ಭಾಗಕ್ಕೆ ತಾನು ಸೇರಿದವ ಳೆಂದು ಭಯದಿಂದಲೇ ಕಂಡುಕೊಂಡಳು; ತನ್ನ ಭಯಂಕರ ಅನುಕಂಪವನ್ನೂ ಆಕೆ ಏನೆಂದು ಕರೆಯಬೇಕು? ತನ್ನ ಸೋದರನಲ್ಲದ ಒಬ್ಬ ಕುಷ್ಠ ರೋಗಿಯನ್ನು ಆಕೆ ಮುದ್ದಿಸಲು ಸಾಧ್ಯವಿತ್ತೆ? 'ಕುರುಡ, ನನ್ನದೇ ಅತ್ಯಂತ ಕೆಟ್ಟಭಾಗಕ್ಕೆ ನನ್ನನ್ನು ಎಳೆದಿದ್ದಾನೆ' ಅಂತ ಯೋಚಿಸಿದಳು, ಆಶ್ಚರ್ಯ ದಿಂದ. ಯಾವ ಭಿಕಾರಿಯೂ ತನ್ನ ಸುಡುವ ಕೈಗಳಿಂದ ನೀರು ಕುಡಿಯಲಾರನೆನ್ನುತ್ತ, ಆಕೆ ತನಷ್ಟಕ್ಕೇ ತಾನು ಬಹಿಷ್ಕೃತಳು ಅಂತ ಭಾವಿಸಿದಳು. ''ಓ! ಮನುಷ್ಯನಾಗೋದಕ್ಕಿಂತ ಸಂತನಾಗೋದು ಸುಲಭ! ಅಯ್ಯೋ ದೇವರೆ, ನನ್ನ ಹೃದಯದಾಳದಿಂದ ಪುಟಿದೆದ್ದ ಕರುಣೆ ನಿಜ ಅಲ್ಲವೆ?'' ಆದರೆ ಅದು ಸಿಂಹದ ಕರುಣೆ ಯಾಗಿತ್ತು.

'ಕುರುಡ ಬಯಸೋದು ಭಾಳ ಸಣ್ಣ ಪ್ರೀತಿ ಮಾತ್ರ' ಅಂತ ಆಕೆಯ ಅರಿವಿಗೆ ಬಂದಾಗ ಅವಳು ಅವಮಾನಪಟ್ಟುಕೊಂಡಳು. ನಡುಗುತ್ತಲೇ, 'ಹೀಗ್ಯಾಕೆ?' ಎಂಬುದನ್ನೂ ಕಂಡುಕೊಂಡಳು. ಚಂದ್ರನ ಬೆಳಕು ತೋಳ-ಮನುಷ್ಯನನ್ನು ಕರೆದಂತೆ ಸಸ್ಯವಿಜ್ಞಾನದ ಉದ್ಯಾನ ಅವಳನ್ನು ಕರೆಯಿತು. ''ಓ! ಆದ್ರೆ, ನಾನು ಕುರುಡನನ್ನೂ ಪ್ರೀತಿಸಿದೆ'', ಕಣ್ಣಾಲಿಗಳಲ್ಲಿ ನೀರು ತರುತ್ತ ಆಲೋಚಿಸಿದಳು. ಹೀಗೆ ಭಾವುಕಳಾಗಿ ಚರ್ಚ್‌ಗೆ ಹೋಗುವುದು ಸರಿಯಲ್ಲ ಅನಿಸಿತು. ''ನನಗ್ಯಾಕೋ ಭಯ ಆಗ್ತಿದೆ'', ಆಕೆ ರೂಮಿನಲ್ಲಿ ಒಬ್ಬಳೇ ಪಿಸುಗುಟ್ಟಿದಳು. ಎದ್ದು, ಅಡಿಗೆಮನೆಯಲ್ಲಿ ಅಡಿಗೆ ಮಾಡುತ್ತಿದ್ದ ಪರಿಚಾರಿಕೆಗೆ ನೆರವಾಗಲು ಹೊರಟಳು.

ಆದರೆ ಚಳಿಗಾಲದ ಚಳಿಯಂತೆ ಬದುಕು ಅವಳಿಗೆ ನಡುಗು ತಂದಿತು. ದೂರದಲ್ಲಿ ಶಾಲೆಯ ಗಂಟೆ ಒಂದೇ ಸಮನೇ ಬಾರಿಸುತ್ತಿತ್ತು. ಸ್ಟೋವಿನ ತಳದ ಸುತ್ತ ಇರುವ ಧೂಳು ಸಣ್ಣ ಭೀತಿಯ ಎಳೆಗಳಾಗಿ ಹರಡಿಕೊಂಡಿತ್ತು; ಅಲ್ಲಿ ಸಣ್ಣ ಜೇಡಬಲೆ ಇರುವುದನ್ನು ಗಮನಿಸಿದಳು. ಹೂದಾನಿಯಲ್ಲಿಯ ನೀರನ್ನು ಬದಲಾಯಿಸಲು ಅವಳು ಅದನ್ನು ಎತ್ತಿದಾಗ, ತಂತಾನೇ ಆಕೆಯ ಕೈಗೆ ಶರಣಾಗುವ ಹೂವಿನ ಭೀತಿ ತಿಳಿದು ಆಕೆಗೆ ಅಸಹ್ಯ ಹಾಗೂ ಜಿಗುಪ್ಸೆ ಎನಿಸಿತು. ಅಡಿಗೆ ಮನೆಯಲ್ಲಿ ಕೂಡ ಅಂಥದೇ ರಹಸ್ಯಮಯ ಚಟುವಟಿಕೆ ಮುಂದುವರಿದಿತ್ತು. ಕಸದ ಬುಟ್ಟಿಯ ಸಮೀಪ, ಆಕೆ ತನ್ನ ಪಾದದಡಿ ಒಂದು ಇರುವೆ ತುಳಿದಳು. ಇರುವೆಯ ಸಣ್ಣ ಕೊಲೆ ಅದು. ಅದರ ಸೂಕ್ಷ್ಮ ದೇಹ ಕಂಪಿಸಿತು. ಹೊಂಡದ ನಿಂತ ನೀರಲ್ಲಿ ನೀರ ಹನಿಗಳುದುರಿದವು.

ಬೇಸಿಗೆಯ ಜೀರುಂಡೆಗಳು, ತಮ್ಮ ಭಯವನ್ನು ತೋಡಿಕೊಳ್ಳಲಾಗದ ಜೀರುಂಡೆಗಳು. ಸುತ್ತ ಮೌನದ, ನಿಧಾನದ ಬೆಂಬಿಡದ ಬದುಕು. ಭಯದ ಮೇಲೆ ಭಯ. ಅವಳು ಅಡಿಗೆ ಮನೆಯಲ್ಲಿ ಮಾಂಸದ ತುಂಡು ಕತ್ತರಿಸುತ್ತ, ತಿರುಳು ಬೆರೆಸುತ್ತ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋದಳು. ಹಿತವಾದ ಬೇಸಿಗೆಯ ಸಂಜೆಯಲ್ಲಿ, ಅವಳ ತಲೆಯ ಸುತ್ತ, ಬೆಳಕಿನ ಸುತ್ತ ಹಾರುವ ಕೀಟಗಳು... ರಾತ್ರಿ, ಕರುಣೆಯು ಮಿಥ್ಯ ಪ್ರೇಮದ ತರಹ ಒರಟಾಗಿತ್ತು. ಅವಳ ಮೊಲೆಗಳ ನಡುವೆ ಬೆವರು ಜಿನುಗುತ್ತಿತ್ತು. ವಿಶ್ವಾಸ ಅವಳನ್ನು ವಿಚ್ಛಿದ್ರಗೊಳಿಸಿತು; ಅವಳ ಕಣ್ಣುಗಳಲ್ಲಿ ಅಗ್ಗಿಷ್ಟಿಕೆಯ ಶಾಖ ಇತ್ತು.

ಆಗ ಗಂಡ ಬಂದ; ಜೊತೆಗೆ ಅವಳ ಸೋದರರು, ಅವರ ಹೆಂಡಂದಿರು ಹಾಗೂ ಅವರ ಮಕ್ಕಳು ಬಂದರು.

ಒಂಬತ್ತನೆಯ ಮಹಡಿಯಲ್ಲಿ, ಎಲ್ಲ ಕಿಡಕಿಗಳನ್ನು ತೆರೆದಿಟ್ಟು, ಅವರು ಊಟ ಮಾಡಿದರು. ಆಕಾಶದ ತಾಪಕ್ಕೆ ವಿಮಾನವೊಂದು ಬೆದರಿ ಗಡಗಡ ನಡುಗಿತು. ಅವಳು ತೀರ ಕಡಿಮೆ ಮೊಟ್ಟೆ ಉಪಯೋಗಿಸಿದ್ದರೂ ಊಟ ಚೆನ್ನಾಗಿತ್ತು. ಮಕ್ಕಳು, ಅವಳ ಸೋದರರ ಮಕ್ಕಳೊಂದಿಗೆ ಜಮಖಾನಾದ ಮೇಲೆ ಆಟವಾಡುತ್ತಲೇ ಇದ್ದರು. ಅದು ಬೇಸಿಗೆಯಾಗಿದ್ದರಿಂದ ಮಕ್ಕಳನ್ನು ಮಲಗಲು ಒತ್ತಾಯಿಸೋದು ವ್ಯರ್ಥವಾಗಿತ್ತು. ಅನ್ನಾ ಒಂದಿಷ್ಟು ಮಂಕಾಗಿದ್ದಳು; ಇತರರೊಂದಿಗೆ ನಯವಾಗಿ ನಕ್ಕಳು.

ಅಂತೂ ಊಟವಾದ ಮೇಲೆ ಮೊದಲ ತಂಗಾಳಿ ರೂಮಿನೊಳಗೆ ಪ್ರವೇಶಿಸಿತು. ದಿನದ ಕೆಲಸದಿಂದ ಬೇಸತ್ತು, ಯಾವ ಅಪಸ್ವರ ಇಲ್ಲದೆ, ಯಾರು ಯಾರಲ್ಲೂ ದೋಷ ಹುಡುಕದೆ, ಬಳಗವೆಲ್ಲ ಸಂತೋಷದಿಂದ ಮೇಜಿನ ಸುತ್ತ ಕೂತಿದ್ದರು. ಮಕ್ಕಳು ಖುಶಿಯಿಂದ ಅವರ ಸುತ್ತಲಿದ್ದರು. ಅನ್ನಾ ಈ ಕ್ಷಣವನ್ನು ಒಂದು ಭೃಂಗದಂತೆ ಸ್ವೀಕರಿಸಿ, ಇದನ್ನು ತನ್ನ ಬೆರಳುಗಳಿಂದ ತಪ್ಪಿಸಿಕೊಳ್ಳಲು ಬಿಡಬಾರದು ಅಂದುಕೊಂಡಳು.

ಅವರೆಲ್ಲ ಹೋದಮೇಲೆ, ಮಕ್ಕಳು ಹಾಸಿಗೆಯಲ್ಲಿದ್ದಾಗ, ಅವಳು ಕೇವಲ ಒಬ್ಬ ಹೆಂಗಳೆಯಾಗಿ ಕಿಡಕಿಯ ಹೊರಗೆ ನೋಡುತ್ತ ಕೂತಳು. ನಗರ ಹಿತವಾಗಿ ನಿದ್ರೆ ಹೋಗಿತ್ತು. ಕುರುಡನಿಂದ ಪಡೆದ ಆಕೆಯ ಅನುಭವ ಆಕೆಯ ಬದುಕನ್ನು ತುಂಬಬಹುದಿತ್ತೆ? ಆಕೆಗೆ ಮತ್ತೆ ವಯಸ್ಸಾಗುವ ಮುಂಚೆ ಆ ಅನುಭವ ಎಷ್ಟು ವರ್ಷ ಉಳಿದೀತು? ಆಕೆ ತುಸು ಹೆಜ್ಜೆ ಇಟ್ಟರೆ ಸಾಕು, ಮಕ್ಕಳ ಮೇಲೇ ಕಾಲು ಇಡಬೇಕಾಗುತ್ತಿತ್ತು. ಆದರೆ ಕೀಟವು ಹೂವಿನಿಂದ ಹೊರಬೀಳುವುದನ್ನು, ಕತ್ತಲಲ್ಲಿ ನೀರ ಮೇಲಿನ ದೈತ್ಯ ಲಿಲಿ ಹೂಗಳು ಸರೋವರದಲ್ಲಿ ತೇಲಾಡುವುದನ್ನು ಆಕೆ, ಒಬ್ಬ ಪ್ರೇಮಿಯ ಅಹಿತ ಮನಸ್ಸಿನಿಂದಲೇ ನಿರೀಕ್ಷಿಸಿ ಒಪ್ಪಿಕೊಂಡ ಹಾಗಿತ್ತು. ಕುರುಡನು ಸಸ್ಯ ಉದ್ಯಾನದ ಹಣ್ಣುಗಳ ನಡುವೆ ತೂಗಾಡುತ್ತಿದ್ದ.

ಸ್ಟೋವು ಜ್ವಾಲೆಯಿಂದ ಸ್ಫೋಟಗೊಂಡು ಮನೆಯೆಲ್ಲ ಹರಡಿಬಿಟ್ಟಿತೆ ಎಂಬ ದುಗುಡದಿಂದ ಅವಳು ಅಡಿಗೆಮನೆಗೆ ಹೋಗಿ ನೋಡಿದರೆ, ಅಲ್ಲಿ ಗಂಡ ಚೆಲ್ಲಿದ ಕಾಫಿ ಎದುರಿಗೆ ನಿಂತಿದ್ದ.



''ಏನಾಯ್ತು?'' ಅಂತ ಆಕೆ ಅಡಿಯಿಂದ ಮುಡಿಯವರೆಗೆ ನಡುಗುತ್ತ ಕೂಗಿದಳು. ಹೆಂಡತಿಯ ಗಾಬರಿಯಿಂದ ಅವನಿಗೆ ದಿಗಿಲಾಯಿತು. ಒಮ್ಮೆಲೆ ಅರ್ಥವಾಗಿ ನಕ್ಕ.

''ಅಂಥದ್ದೇನಿಲ್ಲ, ನಾನು ನಾಜೂಕಿರದ ಮನುಷ್ಯ'' ಅಂದ. ಕಣ್ಣುಗಳ ಕೆಳಗೆ ಕಪ್ಪು ಉಂಗುರುಗಳಿದ್ದ ಆತ ದಣಿದಂತೆ ತೋರಿದ.

ಅನ್ನಾಳ ಮುಖದ ಮೇಲೆ ವಿಚಿತ್ರ ಭಾವ ಮೂಡಿರುವುದನ್ನು ಸೂಕ್ಷ್ಮವಾಗಿ ಗಮನಿಸಿದ. ಆಕೆಯನ್ನು ಮುದ್ದಾಡುತ್ತ ತನ್ನೆಡೆಗೆ ಸೆಳೆದುಕೊಂಡ.

''ನಿಮಗೆ ಯಾವತ್ತೂ, ಏನೂ ಆಗಬಾರದಂತಲೇ ನಾನು ಬಯಸೋದು!'', ಆಕೆ ಹೇಳಿದಳು.

ಆತ ಮುಗುಳ್ನಗುತ್ತ, ''ಸ್ಟೋವಿನ ಸಣ್ಣಪುಟ್ಟ ಸ್ಫೋಟಗಳನ್ನ ನೀನು ತಡೆಯಲಾರೆ'' ಎಂದ. ಆಕೆ ಅವನ ತೋಳುಗಳಲ್ಲಿ ನಿಶ್ಚೇಷ್ಟಿತಳಾದಳು. ಈ ಮಧ್ಯಾಹ್ನ ಪ್ರಶಾಂತತೆ ಸ್ಫೋಟಗೊಂಡಿತ್ತು, ಮನೆಯಲ್ಲಿ ಪ್ರತಿಯೊಂದೂ ಟ್ರಾಜಿ-ಕಾಮೆಡಿಯ ಸ್ಪರ್ಶ ಪಡೆದಿತ್ತು.

''ಈಗ ಮಲಗೋ ಹೊತ್ತು. ಆಗಲೇ ಲೇಟಾಗಿದೆ'' ಅಂದ. ಆಕೆ ಹಿಂದೆ ಹೊರಳಿ ನೋಡದಂತೆ, ಬದುಕಿನ ಅವಘಡಗಳಿಂದ ಪಾರು ಮಾಡಲು, ತನ್ನದಲ್ಲದ ಭಾವಾಭಿನಯದಿಂದ, ಆದರೂ ಸಹಜ ಎಂಬಂತೆ ಆತ, ಹೆಂಡತಿಯ ಕೈ ಹಿಡಿದು ತನ್ನತ್ತ ಎಳೆದುಕೊಂಡ.

ಅನುಕಂಪ ತಂದಿದ್ದ ತಲೆಸುತ್ತು ಈಗ ತೀರಿ ಹೋಗಿತ್ತು. ಅವಳು ಕನ್ನಡಿಯ ಮುಂದೆ ತಲೆಬಾಚಿಕೊಳ್ಳುತ್ತ ನಿಂತಳು. ಪ್ರೀತಿ ಮತ್ತು ಅದು ತಂದೊಡ್ಡಿದ್ದ ಆಪತ್ತು ಎರಡನ್ನೂ ದಾಟಿ ಬಂದಿರುವ ಈ ಕ್ಷಣ, ಅವಳ ಹೃದಯದಲ್ಲಿ ಯಾವ ಪ್ರಪಂಚವೂ ಇರಲಿಲ್ಲ. ಆಕೆ ಹಾಸಿಗೆಗೆ ಹೋಗುತ್ತ, ಮೊಂಬತ್ತಿ ಊದಿದ ತರಹವೇ, ದಿನವಿಡೀ ಉರಿದ ಪುಟ್ಟ ಜ್ವಾಲೆ ನಂದಿಸಿದಳು.






# ಹೊಡೆದದ್ದು ಯಾರು?

ನಾನು ಖಾಸಗಿ ಶಾಲೆಯೊಂದರಲ್ಲಿ ಶಿಕ್ಷಕನಾಗಿ ಕೆಲಸ ಮಾಡುತ್ತಿದ್ದ ಕೊನೆಯ ವರ್ಷ, ಅಂದರೆ ಮೂರನೇ ವರ್ಷ ನಡೆದ ಘಟನೆ ಇದು. ಆ ದಿನ ಅನಿಲ್ ಎಂಬ ವಿದ್ಯಾರ್ಥಿಯ ತಾಯಿ ಬಂದು, ಅವನ ಬಗ್ಗೆ ವಿಚಾರಿಸುತ್ತಾ, 'ನೋಡಿ ಸಾರ್ ಇವ್ನು ಓದೋದೆ ಇಲ್ಲ. ಎಲ್ಲಾ ಸವಲತ್ತು ಕೊಟ್ಟೇದೀವಿ. ಶಾಲೆ ಕೂಡಾ ಆಗಾಗ ತಪ್ಪುಸ್ತಾನೇ ಇರ್ತಾನೆ. ಕಾರಣ ಕೇಳದ್ರೆ ಮೈಗೆ ಹುಷಾರಿಲ್ಲ ಅಂತಾನೆ. ನೀವು ಸ್ವಲ್ಪ ಇವ್ನ ಕಡೆ ಗಮನ ಇಡ್ಬೇಕು' ಅಂತ ಹೇಳಿ ಹೋಗಿದ್ದರು. ಇದಾಗಿ ಎರಡು ದಿನಕ್ಕೆ ಅನಿಲ್ ಮತ್ತೆ ಗೈರು ಹಾಜರಾದ. ಪುನಃ ಶಾಲೆಗೆ ಬಂದಾಗ ವಿಚಾರ ಮಾಡ್ದೆ. ಸಮರ್ಪಕ ಕಾರಣ ಕೊಡ್ಲಿಲ್ಲ. ಸಿಟ್ಟಿನಿಂದ ಎರಡೂ ಕೈಗೆ ಕೋಲಿನಿಂದ ಹೊಡ್ದು ಕೂರಿಸ್ದೆ. ಅಳ್ತಾ ಕೂತ್ಕೊಂಡ.

ಮಾರನೇ ದಿನ ನಾನು ಶಾಲೆಗೆ ಬರೋ ಹೊತ್ಗೆ ಶಾಲೇಲಿ ಏನೋ ಗುಸು-ಗುಸು ನಡೀತಿತ್ತು. ಕೂಡಲೆ ಎಚ್.ಎಂ. ನಂಗೆ ಹೇಳಿಕಳ್ಸಿದ್ರು. ಅಲ್ಲಿಗೆ ಹೋದ್ರೆ ಮುಖ್ಯೋಪಾಧ್ಯಾಯರು ನನ್ನ ಕಂಡ ಕೂಡ್ಲೇ, ''ಅಲ್ರೀ, ನಿಮ್ಗೆ ಮಕ್ಕಳಿಗೆ ಹೋಡೀವಾಗ ಸ್ವಲ್ಪನೂ ತಾಳ್ಮೆ ಇರಲ್ವೇನ್ರೀ? ನಿನ್ನೆ ಅನಿಲ್‌ಗೆ ಪಕ್ಕೆಗೆ ಹೊಡ್ಡಿದೀರಂತೆ, ಅವ್ನಿಗೆ ರಾತ್ರಿ ವಾಂತಿ ಆಗಿ, ಹುಷಾರಿಲ್ದೆ, ಆಸ್ಪತ್ರೆಗೆ ಸೇರ್ಸಿದಾರಂತೆ. ಈಗ ಅವ್ನ ತಂದೆ-ತಾಯಿ ಬರ್ತಾರಂತೆ ಅದೇನ್ ಉತ್ತರ ಹೇಳ್ತೀರೋ ಹೇಳಿ'' ಅಂದರು.

ನಂಗೆ ಆಶ್ಚರ್ಯವಾಯ್ತು. ನಾನು ಅನಿಲ್ ಕೈಗೆ ಮಾತ್ರ ಹೊಡೆದಿದ್ದೆ. ಆದ್ರೆ ಇವ್ರು ಪಕ್ಕೆಗೆ ಹೊಡ್ಡಿದೀನಿ ಅಂತಾ ಹೇಳ್ತಾ ಇದಾರಲ್ಲ ಅಂತ ಯೋಚನೆ ಮಾಡ್ದೆ. ಅಷ್ಟರಲ್ಲಿ ಅವ್ನ ತಾಯಿ ಬಂದ್ರು. ''ಅಲ್ಲ ಸಾರ್, ನಾನು ನಿಮ್ಗೆ ಹೊಡೀರಿ ಅಂದಿದ್ದೀನೋ ನಿಜ. ಆದ್ರೆ, ಹೀಗಾ ಹೊಡಿಯೋದು? ನಮ್ಮ ಹುಡ್ಗಂಗೆ ಏನಾದ್ರೂ ಹೆಚ್ಚು ಕಡಿಮೆ ಆದ್ರೆ, ಆಮೇಲೆ ಬಂದು ನಿಮ್ಮನ್ನ ವಿಚಾರಿಸ್ತೀವಿ'' ಅಂತ ಹೇಳಿ ಹೋದ್ರು. ಆ ಸಮಯದಲ್ಲಿ ಅವ್ರ ಎದುರು, ನಾನು ಹಾಗೆ ಹೊಡೆದಿಲ್ಲ ಅಂತಾ ಎಷ್ಟು ಹೇಳಿದ್ರೂ, ಕೇಳೋ ಸ್ಥಿತೀಲಿ ಅವ್ರಿರ್ಲಿಲ್ಲ. ನಂಗೆ ಯೋಚ್ನೆ ಪ್ರಾರಂಭ ಆಯ್ತು. ನಾನು ಮಾಡ್ದೆ ಇರೋ ತಪ್ಪಿಗೆ ನಂಗ್ಯಾಕೆ ಈ ಶಿಕ್ಷೆ ಅಂತಾ ತಿಳೀಲಿಲ್ಲ.



ನಾನು ಪಾಠ ಮಾಡ್ತಾ ಇದ್ದಿದ್ದು ಮೊದ್ಲೇ ಹಳ್ಳಿ. ವಿಷಯ ಹೆಚ್ಚು ಕಡಿಮೆ ಊರಿನ ಎಲ್ಲಾ ಜನರಿಗೂ ತಿಳ್ದು, ಎಲ್ರೂ ತಮಗೆ ತಿಳಿದಂತೆ ಮಾತಾಡೋರೆ. ಇದೇ ವಿಷಯ ತೆಗೆದುಕೊಂಡು ಪೊಲೀಸ್ ಹತ್ರ ಹೋಗಿದ್ರೂ, ಅನ್ನೋ ವಿಚಾರಾನೂ ಬಂತು. ಅದಕ್ಕೆ ಸರಿಯಾಗಿ, ಅನಿಲ್‌ನ ತಪಾಸಣೆ ಮಾಡಿದ್ದ ಡಾಕ್ಟರ್ ಕೂಡಾ, ಪಕ್ಕೆಗೆ ಹೊಡೆತ ಬಿದ್ದಿರೋದ್ರಿಂದಾನೆ ಹೀಗಾಗಿರೋದು ಅಂತ ಹೇಳಿ ಬಿಟ್ಟಿದ್ರು. ಸಂಜೆ ಹೊತ್ತಿಗೆ ಅನಿಲ್‌ನನ್ನು ಹೆಚ್ಚಿನ ತಪಾಸಣೆ ಮತ್ತು ಚಿಕಿತ್ಸೆಗಾಗಿ ನಗರದ ಪ್ರಸಿದ್ಧ ಆಸ್ಪತ್ರೆಗೆ ಸೇರ್ಸಿದಾರೆ ಅಂತ ಗೊತ್ತಾಯ್ತು. ನಾನಂತೂ ತಣ್ಣಗಾಗಿ ಹೋಗಿದ್ದೆ. ದೇವ್ರೇ ಏನಾದ್ರು ಮಾಡಿ ಆ ಹುಡುಗನ ಆರೋಗ್ಯ ಸರಿಮಾಡಪ್ಪಾ ಅಂತ ಬೇಡಿಕೊಳ್ತಾನೇ ಇದ್ದೆ.

ಮಾರನೇ ದಿನ ಶಾಲೆಗೆ ಪುನಃ ಹೋದಾಗ, ಎಲ್ಲ ಸಹೋದ್ಯೋಗಿಗಳೂ ತಮಗೆ ತಿಳಿದಂತೆ ಈ ಘಟನೆ ವ್ಯಾಖ್ಯಾನಿಸಿದ್ರು. ಅಷ್ಟರಲ್ಲಿ ಯಾರೋ ಅನಿಲ್‌ನ ತಂದೆ ತಾಯಿ ಬರ್ತಾ ಇದಾರೆ ಅಂದ್ರು. ನಾನು ಈಗ ಮತ್ತೇನು ಗ್ರಹಚಾರ ಬಂತಪ್ಪಾ ಅಂತ ನೋಡ್ತಾ ಕುಳಿತೆ.

ಅವರಿಬ್ರೂ ಬಂದವರೆ ಎಚ್.ಎಮ್. ಛೇಂಬರ್ ಹೊಕ್ಕರು. ಸ್ವಲ್ಪ ಹೊತ್ತಿನಲ್ಲೇ ಎಲ್ಲಾ ಶಿಕ್ಷಕ/ ಶಿಕ್ಷಕಿಯರಿಗೂ ಕರೆ ಬಂತು. ನಾನೂ ಒಳಗೆ ಹೋದೆ. ಹೋದ ತಕ್ಷಣ ಅಲ್ಲಿಯ ವಾತಾವರಣವೇ ಬದಲಾಯ್ತು. ಅನಿಲ್‌ನ ತಂದೆ-ತಾಯಿ ಇಬ್ರೂ ನನ್ನ ಕ್ಷಮೆ ಕೋರಿದ್ರು. ನಾನು ಮೂಕಪ್ರೇಕ್ಷಕನಾಗಿದ್ದೆ. ಆಮೇಲೆ ವಿಷಯ ತಿಳಿಸಿದ್ರು. ನಡೆದದ್ದಿಷ್ಟೆ.

ನಾನು ಅವನಿಗೆ ಹೊಡೆದ ದಿನ ಆ ಊರಿನಲ್ಲಿ ಗಣಪತಿ ವಿಸರ್ಜನಾ ಕಾರ್ಯಕ್ರಮ ಇತ್ತು. ಬಾಲ್ಯಸಹಜ ಕುತೂಹಲದಿಂದ ಅದರಲ್ಲಿ ಭಾಗವಹಿಸಲು ಹೋದ ಅನಿಲ್, ಟ್ರಾಕ್ಟರ್ ಮೇಲಿಂದ ಬಿದ್ದು ಪಕ್ಕೆಗೆ ಹೊಡೆತ ತಿಂದಿದ್ದ. ಮನೆಯಲ್ಲಿ ಈ ವಿಷಯ (ಬಿದ್ದದ್ದು) ಹೇಳಿದರೆ ಹೊಡೆಯುತ್ತಾರೆ ಎಂದು, ನಾನು ಹೊಡೆದೆ ಎಂದು ಸುಳ್ಳು ಹೇಳಿದ್ದ. ನಗರದಲ್ಲಿ ಹೆಚ್ಚಿನ ತಪಾಸಣೆ ನಡೆಸಿದ ವೈದ್ಯರು, ಅದು ಕೋಲಿನಿಂದ ಬಿದ್ದ ಹೊಡೆತವಲ್ಲ ಬದಲಿಗೆ ಕಲ್ಲಿನಿಂದ ಬಿದ್ದ ಹೊಡೆತದ ಹಾಗಿದೆ ಎಂದು ಹೇಳಿ, ಅನಿಲ್‌ನನ್ನು ವಿಚಾರಿಸಿದಾಗ, ಅವನು ನಿಜ ಬಾಯ್ಬಿಟ್ಟಿದ್ದ. ಜೊತೆಗೆ ಅವನನ್ನು ಇದೇ ಕಾಲಕ್ಕೆ ಸಮಗ್ರವಾಗಿ ಪರಿಶೀಲಿಸಿದ ವೈದ್ಯರು, ಇದು ಈಗ ಆಗಿರುವ ಗಾಯವಲ್ಲ, ಬದಲಿಗೆ ಅವನಿಗೆ ಬಹಳ ಹಿಂದಿನಿಂದಲೂ ಪಕ್ಕೆಯಲ್ಲಿ ಕಫ ಸೇರಿಕೊಂಡಿರುವ ಕಾರಣ ಈಗ ಅಲ್ಲಿಗೆ ಹೊಡೆತ ಬಿದ್ದು ಅದು ಉಲ್ಬಣವಾಗಿದೆ ಎಂದೂ, ಇನ್ನೂ ಕೆಲವು ದಿನ ಇದರ ಬಗ್ಗೆ ನೀವು ಗಮನಿಸದಿದ್ದಲ್ಲಿ ಅವನ ಜೀವಕ್ಕೆ ಅಪಾಯವಿತ್ತು ಎಂದೂ ತಿಳಿಸಿದರಂತೆ.

ಅಚಾತುರ್ಯದಿಂದ ನನ್ನನ್ನು ಆಪಾದಿಸಿದ್ದ ಅವರೀಗ ಸಂಕೋಚದ ಮುದ್ದೆಗಳಾಗಿದ್ದರು. ಅವರನ್ನು ನಾನು ಕ್ಷಮಿಸಿದ್ದೇನೆ ಎಂದು ಹೇಳುವವರೆಗೂ, ತಾವು ಅಲ್ಲಿಂದ ಕದಲುವುದಿಲ್ಲ ಎಂದು ಕುಳಿತರು. ನಾನು ಅವರಿಗೆ ಸಮಾಧಾನ ಮಾಡಿ, ಅವರ ಮೇಲೆ ಏನೂ ಬೇಸರ ಮಾಡಿಕೊಂಡಿಲ್ಲವೆಂದೂ, ನೀವು ಮಾಡಿದ್ದು ಯಾವುದೇ ತಂದೆ-ತಾಯಿ ತಮ್ಮ ಮಕ್ಕಳ ಬಗ್ಗೆ ತೋರುವ ಕಾಳಜಿಯೇ ಎಂದೂ ಹೇಳಿ ಕಳಿಸಿದೆ. ಈ ಹೊಡೆತದ ನಿಮಿತ್ತದಿಂದ ಆ ಹುಡುಗನ ಪ್ರಾಣ ಉಳಿದ ರೀತಿ ನನಗೊಂದು ಸೋಜಗದ ನೆನಪಾಗಿದೆ. 



ಭದ್ರಾವತಿ

ಜಿ. ಚಂದ್ರಶೇಖರ್



## ಕವಿ ಸಮಯ



ಎಂ.ಆರ್. ಭಗವತಿ

# ಬೆಕ್ಕಿನ ಕಣ್ಣು ಪಾಪೆ

ಬೆಕ್ಕಿನ ಕಣ್ಣು
ಕತ್ತಲಲ್ಲಿ
ಬೆಳಗೆ ಹೊಳೆಯುವಾಗ
ಕತ್ತಲಿಗೆ ಟಾರ್ಚು ಬಿಟ್ಟಹಾಗೆ;
ಕಣ್ಣಿಗೆ ನಕ್ಷತ್ರ ಇಟ್ಟಹಾಗೆ

ಕತ್ತಲು ಹುಟ್ಟಿಸುವ ಬೆದರಿಕೆಯ ಹಾಗೆ
ಸೊಗಸಿನ ಹಾಗೆ
ಚುರುಕಿನ ಕಣ್ಣು ದಿಟ್ಟಿಸುತ್ತೆ

ಹೊಳೆಯುವ ಕಣ್ಣಪಾಪೆ
ಪಾಪೆಯ ಮೇಲಿನ ಕಪ್ಪು ಸುತ್ತು;
ಕತ್ತಲು ಬೆಳಕನ್ನು
ಒಟ್ಟಿಗೇ ಇಟ್ಟುಕೊಂಡಿದೆ ಬೆಕ್ಕು ಒಳಗೆ
ಕವನದ ಹಾಗೆ



# ಪಯಣ

ಬೇರು ಇಳಿಬಿದ್ದ ನೆಲದಲ್ಲಿ
ಕತ್ತಲಾವರಿಸಿದ ಕಣ್ಣು
ಬಾನ ಹಕ್ಕಿಗಳ ಮೆರವಣಿಗೆ
ಮೇನೆ ಹೊರಟಿದೆ ಸಂಜೆಮಲ್ಲಿಗೆಯ ಸಮಯ
ಚಂದ್ರಲೋಕಕೆ ಕರೆದುಕೋ ಪುಟ್ಟಮಗುವೇ

ಯಾವ ಊರಿನ ದಾರಿ, ಎಲ್ಲಿಯದು ಮರುಳೇ
ಯಾವ ಹೊತ್ತಿನಲ್ಲಿ
ನೆನಪು
ಕರೆಯುತ್ತಿದೆ ಮತ್ತೆ ಮತ್ತೆ

ಎಲ್ಲಿ ಹೊರಟಿಹೆ ಮುದ್ದು
ಎಲ್ಲಿದೆಲ್ಲಿಯ ಪಯಣ
ಇನ್ನೂ ಗಾಳಿ ಹುಟ್ಟಿರಲಿಲ್ಲ

ಇರುಳು ಹತ್ತಿದ ಸಮಯ
ಚಂದ್ರಲೋಕಕೆ ನಮ್ಮ ಪಯಣ
ನನ್ನ ಕರೆದುಕೋ ಪುಟ್ಟ ಮಗುವೇ.



ಇಕ್ಬಾಲ್

# ಒಳಗೆ ಅಣ್ಣನಿಲ್ಲ!

1

ಗೇಟು ತೆರೆದಿದೆ, ಯಾರ ಕಾಲ ಸಪ್ಪಳ!
''ಯಾರದು ಒಳಗೆ?''

ತುದಿಗಾಲಲ್ಲಿ ಮನೆಯೆಲ್ಲಾ ಮೂಸಿ
ಹಿತ್ತಿಲಬಾಗಿಲು, ನಡುಮನೆಯ ಗೋಡೆ
ಹಿಂದಿನತೋಟ; ಮುಂದಿನ ಬಾಗಿಲು-ಉದ್ದಕ್ಕೂ ನಿಂತ
ಎತ್ತರದ ನಿಲುವು

ಬರಿಯ ಗೇಟಿನ ಸದ್ದು, ಮನೆ-
ಮನವೆಲ್ಲಾ ಖಾಲಿಖಾಲಿ
'ಯಾರು ಕೇಳಿಕೊಂಡು ಬಂದಿದ್ದಾರೆ?
ಅಣ್ಣನಿಲ್ಲ ಒಳಗೆ!'

2

ನೆನಪು ಸುಡುಬೂದಿ; ಕಣ್ಣ ಬಿಸಿನೀರು
ಸೋಸೀ ಸೋಸೀ ಹೊರಗೆ ಲೀಲಾಜಾಲ;
ಒಳಗೆ ಜಿಟಿಜಿಟಿಮಳೆ!
ಜಡಿಹಿಡಿದ ಮಳೆ ಬಿಡುವುದಿಲ್ಲ;
ಹರಿದ ನೆನಪು ನಿಲ್ಲುವುದಿಲ್ಲ.

ನೀವು ಮಾಡಿದ ಸಿಹಿಯಡಿಗೆ
ಇಂಗಿ ಆವಿಯಾಗಿ
ಎದೆಗೂಳಕ್ಕೆ ಸೇರಿ
ನಲ್ಲಿಯ ನೀರು ಜಳಜಳ!

ಎಲ್ಲಾ ದುಡುದುಡು, ದಡಬಡ ಮಾಡಿ
ದಡದಡನೆ ಹೊರಟೇ ಹೊರಟು...

3

''ಯಾರು? ಯಾರಿದ್ದೀರಿ ಒಳಗೆ?''
'ಮನೆಯೊಳಗೆ ಮನೆಯೊಡೆಯ
ಇದ್ದಾನೋ ಇಲ್ಲವೋ......'



# ಅಜ್ಞಾತ ಹುಡುಗಿಗೆ

ಏನೂ ಹೇಳದೆ ಸುಮ್ಮನೆ ಕೂತು
ನಕ್ಕ ನಗೆ
ಎಲ್ಲವನ್ನೂ ಹೇಳುತ್ತೆ:

ಬಚ್ಚಿಟ್ಟು ಕೂತ ನನಗೆ
ನಿನ್ನದೇ ಧ್ಯಾನ
ಬಚ್ಚಿಡಬೇಡವೇ ಹಾಗೆ, ಒಂದು ನಗುವಲ್ಲೇ ಎಲ್ಲಾ...,

ನೆರೆತ ಹದದ ಕೂದಲು
ಎಂದೋ ಕಾಡಿದ್ದ ಏಕಾಕಿ ನೆರಳು
ಇಂದು
ಮಂಜಾಗಿಸಿತೆ ಕಣ್ಣ

ಕೊಟ್ಟ ಸಾಲ, ಇಟ್ಟ ಪ್ರೀತಿ
ತಣ್ಣನೆಯ ಕೋಪ ಒಳಗಣ್ಣ ನೆಟ್ಟನೀತಿ
ನೆಟ್ಟನೆಟ್ಟಗೇ ಬೆಳೆದು
ಸಹನೆ ಕಟ್ಟೆಯೊಡೆದು
ಬಿಚ್ಚಿಟ್ಟಂತೆ ನದಿ
ಬಿಚ್ಚಿಬಿಡೇ ಎಲ್ಲಾ...

ಭಗವತಿ





## ಚಿತ್ರ

ಸೂರ್ಯ, ನಿನ್ನ ಚಿತ್ರವ ಬಿಡಿಸುವೆ
ಅಪೇಕ್ಷೆ ಕೇಳಿದ್ದೇ ಮೈ ತುಂಬ ಹೊದ್ದ
ಮುಗಿಲ ಶಾಲು.

ಶಾಲು ತೆಗೆಯೋ ಎಂದೆ
ಸಾಲು ಸಾಲು ಮಿಗಿಲು ಸೂರ್ಯರಿದ್ದಾರೆ
ಎಂದ ಈತನೀಗ ನಿಜಕ್ಕೂ
ನಿಜದ ಸೂರ್ಯ.

ಹಿಂಬಾಲಿಸಿದೆ ದುಂಬಾಲಿಸಿದೆ
ಸಮುದ್ರ ಹೊಕ್ಕು ತೆರೆಮರೆಸಿಕೊಂಡ
ಎಲ್ಲಿ ಹೋಗುವೆ ನೀನು ನೋಡುವೆ
ಮುಚ್ಚಿಕೊಂಡಿರುವ ತೆರೆ ತೆರೆಯದೆ



ಬೆಟ್ಟ ದಾರಿಗೆ ಹೋಗಿ ಗುಟ್ಟಾಗಿರಬೇಕು
ಕಷ್ಟದಲಿ ಇರುಳು ಕಳೆಯಬೇಕು
ಮತ್ತೆ ಬೆಳಗಾಮುಂಚೆ ಮೆಟ್ಟಲು ಹತ್ತಿ ಬರುವಾಗ
ಗಪ್ಪಂತ ಗಟ್ಟಿ ಹಿಡಿಯಬೇಕು.

-ಒಲವಿನ ಗ್ರಹಬಲನೆ
ಕೈ ಜೋಡಿಸುವೆ
ಬಯಲಾಗು. ತಂತ್ರ ಅರಿಯೆ
ಮಂತ್ರ ತಿಳಿಯೆ

ಸತ್ಯ ಹೇಳಬೇಕು
ಚಿತ್ರ ಬಿಡಿಸಬೇಕು.

## ಉದಯಕಾಲ

ಸಾಲು ಸಾಲು ಮೆಟ್ಟಲುಗಳು
ಹತ್ತುತಿಲ್ಲ
ಇಳಿಯುತ್ತಿವೆ

ಅಕ್ಷರದಲಿ ಅರ್ಥಗಳು
ಮೂಡುತಿಲ್ಲ
ಮುಳುಗುತಿವೆ

ಭೂಮಿಯಲ್ಲಿ ತಾರೆಗಳು
ಹುಟ್ಟುತ್ತಿಲ್ಲ
ಸಾಯುತಿವೆ

ಕಗ್ಗತ್ತಲ ಬಾನಿನಲ್ಲಿ
ಬೆಳ್ಳಿ
ಎಂತು ಉದಿಸಿದೆ!

ವೈದೇಹಿ





## ಸೋಜಿಗ

ಆಗಸದ ಸೂರ್ಯ
ನನ್ನ ಕೈವಾಚು ಗಾಜಿನೊಳಗೆ
ಹೊಕ್ಕ ಹೇಗೆ ಎಷ್ಟೊತ್ತಿಗೆ
ಹೊಳೆಸುತ್ತಿದ್ದಾನೆ ದುಃಖ
ಹೊಳೆವ ನಗೆ!

## ಸುಡುವ ಕಾಯಕ

ಸೂರ್ಯನಲ್ಲೇ ಕಣ್ಣು ನೆಟ್ಟೆ
ದೃಷ್ಟಿ ಸುಟ್ಟಿತು

ಸೂರ್ಯನಲ್ಲೇ ಮನವ ನೆಟ್ಟೆ
ಕಾಯ ಸುಟ್ಟಿತು

ಸೂರ್ಯನನ್ನೇ ಕರೆದೆ ಕರೆದೆ
ದನಿಯು ಸುಟ್ಟಿತು

ಸೂರ್ಯನಿಗೇ ದೂರು ಕೊಟ್ಟೆ
ಉಸಿರು ಸುಟ್ಟಿತು



ಸುಟ್ಟ ಕರಿಯನೆ ಕದಡಿ ಕುಡಿದೆ
ನಾನು ಎಂಬುವ ನಾನು ಸುಟ್ಟು
ಸುಡುವ ಬೆಳಕಲಿ ಮಿಂದು ಸ್ವತಹ
ಸೂರ್ಯನಾಗಿಹೆನು!

ನಿತ್ಯಮೂಡುತ ನಿತ್ಯಮುಳುಗುತ
ಕಷ್ಟಸುಖಗಳ ಬೆಟ್ಟಕಡಲಲಿ
ನಿತ್ಯ ಸುಡುತಿಹೆನು

## ಯಾಕೆ



ಆದಿತ್ಯನ ಚಿತ್ರ
ಯಾಕೆ ಬಿಡಿಸುವೆ
ಆತ ಹೃದಯ!



## ಮಿಂಚಿಹೋದ ಕಾಲ

ನಾ
ಎದ್ದೇಳುವಷ್ಟರಲಿ
ಸೂರ್ಯ
ಮಧ್ಯಾಹ್ನ ದಾಟಿದ್ದ

## ಅಮ್ಮಮ್ಮಾ...

ಸುಮ್ಮನೆ - ಕುಶಾಲಿಗೆ
ಸೂರ್ಯನನು ಆಯತಾಕಾರವಾಗಿ ಬಿಡಿಸಿಕೊಂಡೆ
ಥಟ್ಟನೆ
ಮಂಗಳ ಬುಧ ಗುರು ಶುಕ್ರ ಶನಿ
ಭೂಮಿಗೆ ಇಡೀ ಭೂಮಿಯೂ ಆಗಸಕ್ಕೆ ಆಗಸವೂ
ಆಯತವಾಗಬೇಕೆ!
ದಿನವೂ ನಿಂತಿತೇಕೆ?!

ಗಡಬಡಿಸಿ ಆತನನ್ನು ಮುಂಚಿನಂತೇ ಬರೆದುಕೊಂಡೆ
ಮಿಂಚಿನಂತೆ ಎಲ್ಲವೂ
ಮುಂಚಿನಂತೇ ಆದುವು!
ದಿನವೂ ಉರುಳತೊಡಗಿತು.
ಅಮ್ಮಮ್ಮಾ
ಬಚಾವು





## ಕಂಡಿದ್ದು ಕೇಳಿದ್ದು

ಮನೆಯೊಳಗೆ ಮರೆಯಾಗಿದ್ದ
ಆಕಾಶ
ಕಾಣಸಿದಾಗ
ಕೇಳಿದ ಸದ್ದು...
ಸ್ನಾನದ್ದು,
ಬಟ್ಟೆ ಒಗೆದದ್ದು,
ಪಾತ್ರೆ ತೊಳದದ್ದು.

ಕಂಡ ದೃಶ್ಯ...
ಹಾಲು ಮಾರಾಟ,
ಪತ್ರಿಕೆ ಹಂಚಾಟ.

ಬೆಳಕಲ್ಲಿ ಮರೆಯಾದ
ಮನೆ
ಕಾಣಿಸಿಕೊಂಡಾಗ

ಕೇಳಿದ ಸದ್ದು...
ಬಾಗಿಲು ಮುಚ್ಚಿದ್ದು,
ಕಂಡ ದೃಶ್ಯ...
ದೀಪ ಆರಿಸಿದ್ದು.

## ಧ್ವನಿ

ಅದರ ಎದೆ ಸಿಗಿದು
ಹಬ್ಬದ ಬಾಗಿಲಿಗೆ
ಕಟ್ಟಿದ್ದಾರೆ ತೋರಣ
ಅದರ ಕೆನ್ನೆ ಸೀಳಿ
ಅನ್ನ-ಸಾರಿಗೆ
ಬೆರೆಸಿದ್ದಾರೆ ಖಾರ-ಲವಣ
ಅದರ ನಾಲಗೆ ಹೋಳು ಮಾಡಿ
ಹಲವು ನಾಲಗೆಗಳ ಬಯಕೆ
ಆಗುತ್ತಿದೆ ಪೂರ್ಣ

ಅದರ ಕಾಲು ಕಿತ್ತು
ಎಷ್ಟೋ ಮನೆಗಳಿಗೆ
ಅಳವಡಿಸಲಾಗುತಿದೆ ಆವರಣ.

ಅದು-ಮಾವಿನ ಮರ
ಆದ್ದರಿಂದ ಕೋಗಿಲೆಗೆ
ಇದುವರೆವಿಗೂ ಸ್ವಂತ ಗೂಡಿಲ್ಲ
ಕೇವಲ ಧ್ವನಿಯೊಂದಿದೆ ಅಷ್ಟೆ



ಸಿ.ವಿ. ಶೇಷಾದ್ರಿ

## ಕಿಟಕಿಯಿಂದ

ಮೆಟ್ಟಿಲು ವಂಚಿತ
ಬೆಟ್ಟಗಳು
ಗೂಡು ವಂಚಿತ
ಮರಗಳು
ಕಾಣುತಿವೆ.



ಚಿತ್ರಗಳು: ಸಿ.ವಿ. ಶೇಷಾದ್ರಿ

# ರಸ್ತೆ ಕಾಮಗಾರಿ

ಮನಸ್ಸು ಮಾಡಿದರೆ ಅವರು
-ಟಾರು ಮಿಶ್ರಿತ ಸಣ್ಣ-ಸಣ್ಣ ಕಲ್ಲು ಚೂರುಗಳ ಹೊತ್ತ ಆ ತಳ್ಳುವ ಗಾಡಿಯಲ್ಲಿ
ತಮ್ಮ ಕಾಲಿಲ್ಲದ, ಕೈಯಿಲ್ಲದ, ಕಣ್ಣಿಲ್ಲದ ನೆಂಟರನ್ನು ಆಸ್ಪತ್ರೆಗೆ ಸಾಗಿಸಬಹುದು

ಮನಸ್ಸು ಮಾಡಿದರೆ ಅವರು-ಈಗ ಕಾಯಿಸುತಿರುವ ಟಾರಿನಿಂದ
ತಮ್ಮ ತಮ್ಮ ಕಗ್ಗತ್ತಲ ಹಳ್ಳಿಗೆ ಬೆಳಕದಾರಿ ಮಾಡಿಕೊಳ್ಳಬಹುದು

ಮನಸ್ಸು ಮಾಡಿದರೆ ಅವರು-ತಮ್ಮ ಸೋರುವ ಮನೆಗಳ ಹೆಂಚುಗಳ
ಸಂದಿಗೆ ಟಾರನ್ನು ಮೆತ್ತಿ ನಿಲ್ಲಿಸಬಹುದು

ಮನಸ್ಸು ಮಾಡಿದರೆ ಅವರು -ದಾರಿ ಮಾಡುವಾಗ ಅಡ್ಡ ಬರುತ್ತಿರುವ
ಮರಗಳ ಕಡಿದು ಸಾಗಿಸುತ್ತಿರುವ ಪಿ.ಡಬ್ಲ್ಯೂ.ಡಿ. ಲಾರಿಗಳಿಗೆ ಅಡ್ಡ ನಿಂತು
ಮರಗಳ ಸಮೇತ ಲಾರಿಗೆ ಬೆಂಕಿಯಿಡಬಹುದು ಅಥವಾ
ದಿಮ್ಮಿಗಳನ್ನು ಮನೆಗೆ ಸಾಗಿಸಿ ಕಿಟಕಿಯೋ, ಬಾಗಿಲೋ, ಕಾಯಿಲೆ
ಹೆಂಡತಿಗೆ ಮಂಚವೋ, ಮಕ್ಕಳಿಗೆ ಆಟದ ಸಾಮಾನೋ... ಮಾಡಿಸಬಹುದು

ತಡೆಯಲು ಬಂದವರನ್ನು ದಿಬ್ಬಗಳಿಂದ ದಬ್ಬಬಹುದು



## ಹೊರಗೆ

ಮರವೊಂದಕ್ಕೆ ಒರಗಿದೆ.
ಇಂದಿನ ಕೊಡಲಿ
ನಾಳೆಯ ಬಾಗಿಲು
ಮಾತಾಡಿದವು

ಬಂಡೆಯೊಂದರ ಮೇಲೆ ಕುಳಿತೆ.
ಇವತ್ತಿನ ಚಪ್ಪಲಿ
ನಾಳೆಯ ವಿಗ್ರಹ
ಮಾತಾಡಿದವು.

ದೇವಸ್ಥಾನಕ್ಕೆ ಹೋದೆ
ಚಪ್ಪಲಿ ಹೊರಗೇ ಇತ್ತು.

ಡಿ. ವಿ. ಶೇಷಾದ್ರಿ ಹೊಳವನಹಳ್ಳಿ.

ವಿಶ್ವ ಭಾರತಿ - 21



## ಹಿಮಾಂಶು ಜೋಶಿ

# ಕಾಲಾಪಾನಿ

ಕನ್ನಡಕ್ಕೆ: ಡಾ. ತಿಪ್ಪೇಸ್ವಾಮಿ

ಆಳವಾದ ನೀರಿನಲ್ಲಿ ಹಸಿರು ಉಪವನಗಳು ತೇಲುತ್ತಿರುವಂತೆ ಭಾಸವಾಗುತ್ತಿದೆ. ದೂರದೂರದವರೆಗೆ ಹರಡಿಕೊಂಡಂತಿರುವ ಚಿಕ್ಕ ಚಿಕ್ಕ ದ್ವೀಪಗಳು. ಕೈ ಹಾಕಿದರೆ ಅವನ್ನು ಮುಟ್ಟಬಹುದೇನೋ ಎಂದನ್ನಿಸುತ್ತೆ.....

ಅವನು ಸೆಟ್ಟ ದೃಷ್ಟಿಯಿಂದ ಇವನ್ನೆಲ್ಲ ನೋಡುತ್ತಿದ್ದಾನೆ. ನೋಡುತ್ತ ಏನೇನನ್ನೆಲ್ಲ ಯೋಚಿಸುತ್ತಿರುತ್ತಾನೆ! ನೆರಳಿನಂತೆ ಎಷ್ಟೋ ಆಕೃತಿಗಳು ಮೂಡುತ್ತವೆ. ಮೂಡಿ ಅಳಿಸಿಹೋಗುತ್ತವೆ-ಶ್ಯಾಮಲ ವರ್ಣದ, ಶ್ವೇತ ವರ್ಣದ ಅದೆಷ್ಟೋ ಚಿತ್ರಗಳು...

ನಿರ್ಜನವಾಗಿರುವ ಈ ದ್ವೀಪಗಳೊಂದಿಗೆ ಒಂದು ಬಗೆಯ ವಿಕ್ಷಿಪ್ತತೆ ಕಾಡುತ್ತಿರುವಂತೆ, ಎಲ್ಲೋ ಒಂದು ಕಡೆ, ತನ್ನದೆನ್ನುವಂಥ ಒಂದು ಸಂಬಂಧ, ಅದೃಶ್ಯವಾದ ಸಂಬಂಧವೂ ಇದೆಯೇನೋ ಎಂದೂ ಅನ್ನಿಸುತ್ತದೆ. ನೆಲದ ಒಂದೊಂದು ಕಣದೊಂದಿಗೂ ಒಂದು ಅವ್ಯಕ್ತವಾದ, ಆಳವಾದ ಆಪ್ತತೆಯಿದೆಯೇನೋ ಎಂಬ ಅನುಭವವಾಗುತ್ತದೆ.

ಒಂದು ದೀರ್ಘ ನಿಟ್ಟುಸಿರುಬಿಟ್ಟು, ಆತ ಕಣ್ಣು ಮುಚ್ಚಿಕೊಳ್ಳುತ್ತಾನೆ. ನಿಜಕ್ಕೂ ಆಗ ಇಲ್ಲಿಯ ವಾತಾವರಣ ಎಷ್ಟು ಭಯಾನಕವಾಗಿರಬಹುದು. ನಿನ್ನೆ ರಾತ್ರಿ, ಬಹಳ ಹೊತ್ತಿನವರೆಗೆ ಅವನು ಕಲ್ಕತ್ತೆಯಿಂದ ಹಡಗುಗಳು ಬಂದು ನಿಲ್ಲುತ್ತಿದ್ದ ಬಂದರಿನ ಬಳಿ ನಿಂತಿದ್ದ. ಒಮ್ಮೆ ಇಂಥಾದ್ದೇ ಹಡಗಿನಲ್ಲಿ... ಒಂದು ದಿನ... ಹೀಗೆಯೇ...

ಅಜ್ಜಿ ಬದುಕಿರುವವರೆಗೆ ನೆನಪು ಮಾಡಿ, ಮಾಡಿಕೊಂಡು ಅದೆಷ್ಟು ಮಾತುಗಳನ್ನು, ಕಣ್ಣಿಂದ ನೋಡಿದ ದೃಶ್ಯಗಳನ್ನು ಹೇಳುತ್ತಿರುವಳೇನೋ ಎಂಬಂತೆ ಹೇಳುತ್ತಿದ್ದಳು.

'ಆಜೀವ ಜೈಲುವಾಸದ ಶಿಕ್ಷೆ ನೀಡುವ ಅಂಡಮಾನ್‌ನಲ್ಲಿ ಆಕಾಶವನ್ನು ಮುಟ್ಟುವಂಥ ಭಯಂಕರ ಕಾಡುಗಳಿವೆಯೋ! ಕಾಡೇ ಕಾಡಂತೆ. ಹಾವು, ಚೇಳು, ವಿಷಪೂರಿತ ಕ್ರಿಮಿ-ಕೀಟಗಳೆಲ್ಲ ತುಂಬಿರುತ್ತವಂತೆ. ಅವು ಕಡಿದವೆಂದರೆ, ಕಡಿಸಿಕೊಂಡ ಮನುಷ್ಯನಿಗೆ ನೀರು ಕೇಳಲು ಸಹ ಆಗುವುದಿಲ್ಲವಂತೆ. ಆ ಕಾಡುಗಳಲ್ಲಿ ಭಯಂಕರ ಕಾಡುಮನುಷ್ಯರಿರುತ್ತಾರಂತೆ. ಬಾಣ-ಭರ್ಜಿ ಎಸೆಯುತ್ತಾರಂತೆ. ಮನುಷ್ಯರನ್ನು ಹುರಿದು ತಿಂತಾರಂತೆ. ಹಾಸಿಗೆಗಳ ಮೇಲೆ, ಛಾವಣಿಯ ತೊಲೆಯ ಮೇಲೆ ಹಾವುಗಳು ಹರಿದಾಡುತ್ತಿರುತ್ತವಂತೆ. ಧೂಳಿನ ಕಣಗಳಂತಿರುವ ಸೂಕ್ಷ್ಮವಾದ ಬಿಳಿ ಇರುವೆಗಳು ಆನೆಗಳನ್ನು ನೋಡುನೋಡುತ್ತಿದ್ದಂತೆ ತಿಂದು ಅರಗಿಸಿಕೊಂಡುಬಿಡುತ್ತವಂತೆ...'

ಏನನ್ನೂ ಓದಿ ಬರೆಯದ ಅಜ್ಜ, ಇಡೀ ಬದುಕಿನಲ್ಲಿ ತನ್ನ ಹಳ್ಳಿಯನ್ನು ಬಿಟ್ಟು ಹೊರಗೆ ಹೋಗಿಲ್ಲದಿದ್ದರೂ, ಈ ಎಲ್ಲ ರೋಮಾಂಚಕ ವಿಷಯಗಳು ಆಕೆಗೆ ಹೇಗೆ ಗೊತ್ತಾದುವು ಎಂಬುದು ತನಗೆ ಗೊತ್ತಿಲ್ಲ. ಜನ ಹೇಳುವ ಪ್ರಕಾರ, ಪಕ್ಕದ ಹಳ್ಳಿಯ ಒಬ್ಬ ಹುಡುಗ ಯಾವಾಗಲೋ ಕಲ್ಕತ್ತಾಗೆ ಓಡಿಹೋಗಿದ್ದ. ಅಲ್ಲಿ ಅವನು ಪೊಲೀಸ್ ಕೆಲ್ಸಕ್ಕೆ ಸೇರಿಕೊಂಡ. ಕೈದಿಗಳನ್ನು ಕರೆದುಕೊಂಡು ಹೋಗುವ, ಬರುವ ಕೆಲಸದ ಮೇಲೆ, ಅವನು ಎರಡು-ಮೂರು ಸಾರಿ ಅಂಡಮಾನ್‌ಗೂ ಹೋಗಿ ಬಂದ. ಬಹುಶಃ ಅವನು ಅಲ್ಲಿಂದ ಬಂದ ಮೇಲೆ ಇದನ್ನೆಲ್ಲ ಅಜ್ಜಿಗೆ ಹೇಳಿರಬಹುದು.

ಅಜ್ಜಿ ಒಮ್ಮೊಮ್ಮೆ ತನ್ನಷ್ಟಕ್ಕೆ ತಾನೇ ಬಡಬಡಾಂತ ಮಾತನಾಡಿಕೊಳ್ತಿದ್ದಳು. ''ಇವರ ನಾಶವಾಗಿ ಹೋಗ! ಈ ಬಿಳಿಯರು ರಾಕ್ಷಸ



ರಂತೆ! ಕೈದಿಗಳ ಬಟ್ಟೆ ಬಿಚ್ಚಿಸಿ ಬೆನ್ನಿನ ಮೇಲೆ ಚಾವಟಿಯಿಂದ ಬಾರಿಸ್ತಾರಂತೆ. ಚರ್ಮ ಸುಲೀತಾರಂತೆ. ಶರೀರವೆಲ್ಲ ರಕ್ತಮಯವಾಗಿ ಬಿಡುತ್ತಂತೆ. ಜೈಲಿನಲ್ಲಿ ಹಗಲು ರಾತ್ರಿ ಕೆಲಸವಂತೆ, ಕೆಲಸವೆಂದರೆ ಬರೀ ಕೆಲಸ. ಆದರೆ ತಿನ್ನಲಿಕ್ಕೆ ಎರಡು ಒಣಗಿದ ರೊಟ್ಟಿಗಳನ್ನೂ ಕೊಡುವುದಿಲ್ಲವಂತೆ... ನಿನ್ನ ತಾತಂಗೆ ಹಸಿವನ್ನು ಬಿಲುಕುಲ್ ತಡೆಯೋಕೆ ಆಗಲ್ಲ ಅಂದ ಮೇಲೆ ಅಲ್ಲಿ ಹ್ಯಾಗಿದ್ದಾರೋ ಏನೋ ಕಣೋ!'', ಅಜ್ಜಿ ಆಕಾಶವನ್ನು ನಿಟ್ಟಿಸಲಾರಂಭಿಸಿದಳು. ''ಟಾರ್ ಪಾಲ್ ಚೂರುಗಳನ್ನು ತೊಟ್ಟುಕೊಳ್ಳೋಕೆ ಕೊಡ್ತಾರಂತೆ. ಖಾಯಿಲೆ ಬಿದ್ದರೆ ಔಷಧಿ- ಗಿಷಧಿ ಏನೂ ಇಲ್ಲವಂತೆ. ಸತ್ತರೆ ಎರಡು ತುಂಡು ಸೌದೆ ಹಾಕಿ ಸುಡ್ತಾರಂತೆ, ಅಂಗೈಯಗಲ ಬಟ್ಟೆಯನ್ನೂ ಹೆಣದ ಮೇಲೆ ಹಾಕಲ್ಲವಂತೆ... ನಿನ್ನ ತಾತ ಆ ಚಳಿಯಲ್ಲಿ ಹ್ಯಾಗೆ ಇರ್ತಾ ಇದ್ದರೋ?'', ಅಜ್ಜಿ ಗಳಗಳನೆ ಅತ್ತುಬಿಡುತ್ತಿದ್ದಳು. ಆಗ ಆಕೆಗೆ ಸಮಾಧಾನವಾಗಲೆಂದು, 'ಅಜ್ಜಿ, ಅಲ್ಲಿ ಚಳಿಯಾಗಲ್ಲ, ವರ್ಷದ ಹನ್ನೆರಡು ತಿಂಗಳು ರಣ ರಣ ಬಿಸಿಲು ಕಾಯ್ತಿರುತ್ತೆ' ಎಂದರೂ ಅವಳು ಇಡೀ ದಿನ ತನ್ನ ಹರಿದ ಸೀರೆಯಂಚಿನಿಂದ ಕಣ್ಣುಗಳನ್ನು ಒರೆಸಿಕೊಳ್ಳುತ್ತಿರುತ್ತಿದ್ದಳು. ತಾನು ಪೂಜೆ ಮಾಡುವ ದೇವತೆಗಳ ಪಕ್ಕದಲ್ಲಿಟ್ಟಿದ್ದ ತಾತನ ಒಂದು ಮಾಸಲು ಫೋಟೋಕ್ಕೆ ದಿನವೂ ಹೂ ಮುಡಿಸುತ್ತಿದ್ದಳು. ಕುಂಕುಮ-ಅಕ್ಷತೆಯನ್ನು ಹಾಕುತ್ತಿದ್ದಳು. ಅವಳು ಬದುಕಿರುವವರೆಗೂ ಇದೇ ಅವಳ ನಿತ್ಯನೇಮವಾಗಿತ್ತು.

''ಹರ್‌ಕಿಶನ್, ಯಾವ್ದಾದರೂ ಪತ್ರಗಿತ್ರ ಬಂತೇನೋ'', ಅವಳು ಇದ್ದಕ್ಕಿದ್ದಂತೆಯೇ ಏನನ್ನೋ ನೆನಪು ಮಾಡಿಕೊಂಡು ಕೇಳುತ್ತಾಳೆ- ''ಅಲ್ಲಿಂದ ವರ್ಷಕ್ಕೊಂದು ಪತ್ರ ಮಾತ್ರ ಕಳಿಸ್ತಾರಂತಲ್ಲ? ಒಂದೇ ಒಂದು ಪತ್ರ! ಪೋಸ್ಟಾಫೀಸಿನವರ ಗಡಿಬಿಡಿಯಲ್ಲಿ ಕಳೆದು ಹೋಯ್ತು ಅಂದ್ರೆ...''

ಅಪ್ಪ ಇದಕ್ಕೆ ಏನು ಉತ್ತರ ಕೊಡ್ತಾ
ಅಮ್ಮನ್ನ ಸುಮ್ಮನಿರು ಅಂತಿದ್ದರು. ಅವರಿಗ
ಏನೂ ಹೊಳೆಯುತ್ತಿರಲಿಲ್ಲ.

ಅಜ್ಜಿಯ ಪ್ರಾಣ ತಾತನಲ್ಲಿ ನೆಲೆಸಿತ್ತು. ತ
ಉಣ್ಣೆ ಮತ್ತು ಕುದುರೆಗಳ ವ್ಯಾಪಾರ ಮಾಡ
ಟಿಬೆಟ್‌ನ ಗಡಿಪ್ರದೇಶಕ್ಕೆ ಹೋಗುತ್ತಿದ್ದಾ
ಅಜ್ಜಿಯ ಎಲ್ಲ ಗಮನ ಉಣ್ಣೆ ಕಂಬಳಿಗಳ ಹಾಗ
ಭೂತಾನ್ ದೇಶದ ಕುದುರೆಗಳನ್ನು ಕೊಳ್ಳುವುದ
ಮಾರುವುದರ ಕಡೆಗಷ್ಟೇ ಇರುತ್ತಿ
ಹಗಲು-ರಾತ್ರಿ ಅವಳು ಉಣ್ಣೆ ಮತ್ತು ಕುದುರೆ
ವಿಷಯವಾಗಿಯೇ ಮಾತನಾಡುತ್ತಿರುತ್ತಿದ್ದ
ಆನಂತರದ ದಿನಗಳಲ್ಲಿ, ತಾತ ಕ್ರಾಂತಿಕ
ಯಾದ ಮೇಲೆ ಆಕೆ ಯೋಚಿಸುವ ವಿಷ
ಗಳೂ ಬದಲಾದುವು.

'ಫರಂಗಿಗಳು ದನದ ಮಾಂಸ ತಿಂತಾರಂ
'ಫರಂಗಿಗಳು ನಮ್ಮ ಧರ್ಮವನ್ನು ಭ್ರಷ್ಟಗೊ
ಸಲು ಏಳು ಸಮುದ್ರಗಳಾಚೆಯಿಂದ ಇಲ್ಲ
ಬಂದಿದ್ದಾರಂತೆ!' 'ಈಗ ಯುದ್ಧವಾಗುತ್ತೆ. ನ
ಧರ್ಮ ಬಿಡುವುದಕ್ಕಿಂತಲೂ ಪ್ರಾಣ ಬಿ
ವುದು ಒಳ್ಳೆಯದು ಕಣೋ'

ಆಗ ಅವನು ಚಿಕ್ಕವನಿದ್ದ. ಅಜ್ಜಿ
ಮಾತುಗಳು ಅರ್ಥವಾಗದಿದ್ದರೂ, ಅಪ್ಸರೆಯ
ಮತ್ತು ರಾಕ್ಷಸರ ಕತೆಗಳಂತೆ ಅವೂ ರೋಚ
ವೆನಿಸುತ್ತಿದ್ದವು.

ಚಳಿಗಾಲದ ಚುಮುಚುಮು ಹೊಂಬಣ್ಣ
ಬಿಸಿಲಿನಲ್ಲಿ ಆತ ಯಾವಾಗಲಾದರೂ ಅಂ
ದಲ್ಲಿ ಕುಳಿತಿದ್ದರೆ ಅಥವಾ ಹಿಮ ಸುರಿದ
ಮನೆಯ ಒಳಗೆ ಕಬ್ಬಿಣದ ಅಗ್ಗಿಷ್ಟಿಕೆಯ
ಕಾಯುತ್ತಿದ್ದ ಬೆಂಕಿಯನ್ನು ಕಾಯಿಸ
ಕುಳಿತನೆಂದರೆ, ಅಜ್ಜಿ ತಾನು ಯಾವುದ
ಲೋಕದಲ್ಲಿ ಕಳೆದುಹೋದವಳಂತೆ ಹೇ
ತ್ತಿದ್ದಳು, ''ನಿನ್ನ ತಾತನಿಗೆ ಆಜೀವ ಜೈಲುವ
ವಾದಾಗ ನನಗೆ ಇಪ್ಪತ್ತು ವರ್ಷ ವಯಸ್ಸು.
ಅಪ್ಪ ಹರಕಿಶನ್ ಕೈಮಗು. ನಿನ್ನ ತಾತ

ಅಂಡಮಾನ್‌ಗೆ ಕರೆದುಕೊಂಡು ಹೋಗುವಾಗ ಕೈಗಳಿಗೆ ಬೇಡಿಗಳನ್ನು ಹಾಕಿದರಲ್ಲ, ಆಗ 'ಭಾರತ್‌ಮಾತಾ ಕೀ ಜೈ' ಜಯಕಾರ ಆಕಾಶದಲ್ಲಿ ಪ್ರತಿಧ್ವನಿಸಿತ್ತು. ಜನ ಎಂಥ ಕೋಲಾಹಲವನ್ನು ಎಬ್ಬಿಸಿದರು!

''ಆದರೆ ಆ ರಾತ್ರಿ ಸ್ಮಶಾನ ಮೌನ ಆವರಿಸಿತ್ತು. ಸುತ್ತಮುತ್ತಲ ಎಲ್ಲ ಹಳ್ಳಿಗಳಲ್ಲಿ ಮನೆಮನೆಗಳಲ್ಲಿ ಎಲ್ಲೂ ಒಲೆ ಹೊತ್ತಲಿಲ್ಲ. ದೇವಸ್ಥಾನದ ಮುಂದಿನ ದೀಪದ ಕಂಬಗಳು ಉರಿಯುತ್ತಿದ್ದುವು. ನೂರಾರು ಜನ ಅದರ ಸುತ್ತ ಕೂತು ಕಾಲಕಳೆಯುತ್ತಿದ್ದರು.''

''ಬೆಳಗ್ಗೆ ಎದ್ದರೆ, ಘಟ್ಟದ ಮೇಲಿನ ಅಂಚೆ ಕಛೇರಿಯನ್ನು ಸುಟ್ಟು ಬೂದಿ ಮಾಡಿದ್ದಾರೆ ಎಂಬ ಸುದ್ದಿ ಬಂತು. ಹೀಗಾದಾಗ ಫರಂಗಿಗಳ ಸೈನ್ಯ ಬಂತು. ಆಗ ಏನೇನಲ್ಲ ಬಲಾತ್ಕಾರ-ಅತ್ಯಾಚಾರಗಳಾದುವು ಅಂದರೆ! ಅದೂ ನಿರಪರಾಧಿಗಳ ಮೇಲೆ! ಜನ ಮನೆ ಮಠ ಬಿಟ್ಟು ಕಾಡು-ಮೇಡು ಗುಹೆ-ಗಹ್ವರಗಳಲ್ಲಿ ಅವಿತುಕೊಂಡರು. ರೊಚ್ಚಿಗೆದ್ದ ಸಿಪಾಯಿಗಳು ಊರಿಗೆ ಊರನ್ನೇ ನಾಶ ಮಾಡಿದರು...''



''ಅವತ್ತಿನ ನಂತರ ನಾನು ನಿತ್ಯ ಎದುರಿಗಿದ್ದ ಎತ್ತರದ ದಿಬ್ಬದವರೆಗೂ ಹೋಗುತ್ತಿದ್ದೆ. ಅಲ್ಲಿ ನಿಂತು ದೂರದವರೆಗೂ ದಾರಿ ಕಾಣುತ್ತಿತ್ತಲ್ಲ, ಅಲ್ಲಿಯವರೆಗೆ ಕಣ್ಣಾಡಿಸಿ ಅವರು ಬರುವ ಹಾದಿಯನ್ನೇ ನಿಟ್ಟಿಸುತ್ತಿದ್ದೆ.''

'ಅಜ್ಜಿ, ತಾತ ಮತ್ತೆ ಯಾವತ್ತೂ ಮರಳಿ ಮನೆಗೆ ಬರಲೇ ಇಲ್ಲವೆ?'

ಈ ಪ್ರಶ್ನೆಗೆ ಅಜ್ಜಿಯ ಸುಕ್ಕುಗಟ್ಟಿದ ಮುದಿ ಮುಖ ಹೇಗೇಗೋ ಆಗಿಬಿಡುತ್ತಿತ್ತು. ಆಕೆಯ ಬತ್ತಿದ ಕಣ್ಣುಗಳಲ್ಲಿ ಒಂದು ವಿಚಿತ್ರ ಬಗೆಯ ವಿರಾಗಭಾವ ಮೂಡುತ್ತಿತ್ತು. ಇಷ್ಟಪಟ್ಟರೂ ಆಕೆಯಿಂದ ಅಳಲಾಗುತ್ತಿರಲಿಲ್ಲ. 'ಕಣ್ಣೀರೇ ಬತ್ತಿಹೋಗಿದೆ ಕಣೋ' ಎಂದನ್ನುತ್ತಿದ್ದಳು.

ತಾತನ ನಿರೀಕ್ಷೆಯಲ್ಲಿ ಬೆಟ್ಟದಂಥ ಕಷ್ಟದ ಬದುಕನ್ನು ಕಳೆದಿದ್ದಳು.

ಆಕೆ ತುಂಬಾ ಮುದುಕಿಯಾದ ಮೇಲೆ, ಲಹರಿಗೊಳಗಾದವಳಂತೆ ಒಮ್ಮೊಮ್ಮೆ ಹೇಳುತ್ತಿದ್ದಳು, ''ಜನ ತಪ್ಪು ಹೇಳ್ತಿದ್ದಾರೋ. ನಿನ್ನ ತಾತ ಇನ್ನೂ ಬದುಕಿದ್ದಾರೆ. ಯಾವಾಗಲಾದರೂ ಫರಂಗಿಗಳ ಕಣ್ತಪ್ಪಿಸಿ ಇಲ್ಲಿಗೆ ಬರ್ತಾರೆ... ನನಗಿವತ್ತೂ ನೆನಪಿದೆ. ನಮ್ಮ ಹರಕಿಶನ್‌ನ ಮದುವೇಲಿ ಅವರನ್ನ ನೆನಪು ಮಾಡಿಕೊಂಡು ನಾನು ಅದೆಷ್ಟು ಅತ್ತೆ ಗೊತ್ತ?''

ದಿಬ್ಬಣದವರನ್ನು ಕಳಿಸಿ, ಆಕೆ ತನ್ನ ಕತ್ತಲೆ ಕೋಣೆಗೆ ಬಂದು ನೋಡ್ತಾಳೆ, ಅವರು, ನೆಲದ ಮೇಲೆ ಹಾಸಿದ್ದ ಉಣ್ಣೆ ಕಂಬಳಿಯ ಮೇಲೆ ಮೊದಲಿನಂತೆ ಬಿಳಿ ಬಟ್ಟೆ ತೊಟ್ಟು ಚಕ್ಕಂಬಕ್ಕು ಹಾಕ್ಕೊಂಡು ಕುಳಿತೌರೆ. 'ಎಷ್ಟು ಹೊತ್ತಿನಿಂದ ನನ್ನನ್ನು ಕಾಯುತ್ತ ಕುಳಿತಿದ್ದಿರೋ ಏನೋ!', ಅಜ್ಜಿ ಕೇಳುತ್ತಾಳೆ.

'ಅರೆ, ನೀ ಯಾಕೆ ಇಷ್ಟು ತಲೆ ಕೆಡಿಸಿಕೊಳ್ತಿ? ಎಲ್ಲ ಸುಸೂತ್ರವಾಗಿ ಆಯ್ತಲ್ಲ? ನಾಳೆ

ಸೊಸೆಯೂ ಬಂದ್ಬಿಡ್ತಾಳೆ. ಮನೇಲಿ ಓಡಾಟ-ನಡೆದಾಟ ಇರುತ್ತೆ.'

ಅಜ್ಜಿ ಇಷ್ಟು ಹೇಳುತ್ತ ಹೇಳುತ್ತ ಬಿಕ್ಕಳಿಸಲಾರಂಭಿಸುತ್ತಿದ್ದಳು. "ನಾನು ಹೊಟ್ಟೆ-ಬಟ್ಟೆ ಕಟ್ಟ ನನ್ನ ಹರಕಿಶನ್‌ನ್ನ ಹ್ಯಾಗೆ ಸಾಕಿದೆ ಅಂತ ನನಗೊಬ್ಬಳಿಗೇ ಗೊತ್ತು. ನೀವು ನಿಮ್ಮ ಪಾಡಿಗೆ ಹೊರಟುಹೋದಿರಿ", ನಾನು ಕೋಪದಲ್ಲಿ ಅವರಿಗೆ ಹೇಳಬೇಕೂಂತಿದ್ದೆ. ಆದರೆ ಹೇಳುವುದಕ್ಕೆ ಮುಂಚೆ ಅವರು ಹೊರಟು ಹೋಗಿದ್ದರು. ಫರಂಗಿಯವರು ಬಂದು ಹಿಡ್ಕೊಂಡು ಹೋಗ್ತಾರೆ ಅನ್ನೋ ಭಯದಿಂದ, ಯಾವಾಗಲಾದರೂ ಬಂದ್ರೆ, ಹೀಗೆಯೇ ಕದ್ದು-ಮುಚ್ಚಿ ಒಂದೆರಡು ಕ್ಷಣಗಳಿಗಾಗಿ ಬರುತ್ತಿದ್ದರು. ಒಂದೊಂದು ಸಾರಿ, ಅರ್ಧರಾತ್ರಿಯಲ್ಲಿ, ನಮ್ಮ ಬಂಜರು ಹೊಲಗಳ ದಿಬ್ಬದ ಮೇಲೆ, ಚಂದ್ರನ ಬೆಳದಿಂಗಳಲ್ಲಿ ನಿಂತಿರುವುದನ್ನು, ಒಮ್ಮೊಮ್ಮೆ ಚೌಕದ ಆ ಕಡೆ, ಮಗದೊಮ್ಮೆ ದೇವಸ್ಥಾನದ ದೊಡ್ಡ ದೊಡ್ಡ ಮೆಟ್ಟಿಲುಗಳ ಮೇಲೆ ಮಂಕಾಗಿ ಕುಳಿತಿರುತ್ತಿದ್ದುದ್ದನ್ನು ನೋಡುತ್ತಿದ್ದೆ. ಯಾವುದಾದರೂ ಕಷ್ಟಬಂದರೆ ಅವರು ಎದುರಿಗೆ ನಿಂತಂಗೆ ಭಾಸವಾಗುತ್ತಿತ್ತು. ತನ್ನ ಮಕ್ಕಳ ಬಗ್ಗೆ ಪ್ರೀತಿ ಯಾರಿಗಿರಲ್ಲ ಹೇಳಿ?"

ಅಜ್ಜಿಯ ಹುಚ್ಚುತನದ ಈ ಮಾತುಗಳನ್ನು ಕೇಳಿ ಅವರು ನಕ್ಕುಬಿಡುತ್ತಿದ್ದರು. "ಅಜ್ಜಿ, ನಿನ್ನ ಮಾತುಗಳಿಗೆ ಕೊನೆ ಮೊದಲಿಲ್ಲ ನೋಡು. ಆಜೀವಪರ್ಯಂತ ನೀಡುವ ಶಿಕ್ಷೆಯ ಅವಧಿಯಲ್ಲಿ ತಾತನ ಕಾಲುಗಳಲ್ಲಿ ಕಬ್ಬಿಣದ ಸರಪಳಿಗಳಿರುತ್ತಿದ್ದುವು ಅಂತ ಅಪ್ಪ ಹೇಳ್ತಿದ್ದರು. ಅಂದಮೇಲೆ ಮುಚ್ಚಿದ ಕೋಣೆಯಿಂದ ಅವರು ಇಲ್ಲಿಗೆ ಹ್ಯಾಗಾದರೂ ಬರುತ್ತಿದ್ದರು ಹೇಳು? ನೀರಿನ ಮೇಲೆ, ಹಡಗಿನಲ್ಲಿ ಬರೋಕನೇ ವಾರ-ಹತ್ತು ದಿನಗಳು ಬೇಕಾಗುತ್ತೆ. ಇದೆಲ್ಲ ನಿನ್ನ ಮನಸ್ಸಿನ ಭ್ರಮೆ ಅಜ್ಜಿ!"

"ಅರೆ, ಈಗ ನಿನ್ನ ಹತ್ತಿರ ಮಾತನಾಡ್ತಿದ್ದೀನಲ್ಲ ಹಾಗೆ ಅವರ ಹತ್ತಿರ ಮಾತನಾಡ್ತೇನೆ. ನನ್ನನ್ನು ಹುಚ್ಚಿ ಅನ್ತಿದ್ದೀಯೇನು ದಡ್ಡ... ದಡ್ಡ..." ಅಜ್ಜಿ ಕೋಪದಿಂದ ಮುನಿ ಕೊಂಡು ಸುಮ್ಮನಾಗಿಬಿಡುತ್ತಿದ್ದಳು.

ಆಗಾಗ ಅವನ ಪಕ್ಕದಲ್ಲಿ ಕುಳಿತ್ಕೊಂ ವಿಕ್ಷಿಪ್ತಳಂತೆ ಹೇಳುತ್ತಿದ್ದುದುಂಟು, "ರಾಮ ನೀನು ದೊಡ್ಡವನಾದ ಮೇಲೆ ನಿನ್ನನ್ನು ಕರ್ಕೊಂ ಅಂಡಮಾನ್‌ಗೆ ಹೋಗ್ತೀನಿ. ಆಮೇಲೆ ಅಲ್ ಇದ್ದುಬಿಡ್ತೀನಿ. ಜತೆಯಲ್ಲಿ ಒಬ್ಬ ಇದ್ದರೆ ದುಃಖ ಭಾರ ಕಡಿಮೆಯಾಗುತ್ತೆ ಅಂತ ಹೇಳ್ತಾರಲ್ಲ..."

ಅವನು ನಕ್ಕುಬಿಡುತ್ತಿದ್ದ...

ಈಗ ಅಜ್ಜಿ ಇಲ್ಲ. ಅಂಡಮಾನ್‌ಗೆ ಬಂ ರುವ ಅವನಿಗೆ, ಅಜ್ಜಿ ತನ್ನ ಜತೆಯಲ್ಲಿಯೇ ನಡೆ ಕೊಂಡು ಇಲ್ಲಿಯವರೆಗೂ ಬಂದಿದ್ದಾಳೇನೋ ಎಂದನ್ನಿಸುತ್ತಿದೆ. ಅದೂ ತಾತನ ಬಟ್ಟೆಬರೆಗಳ ಗಂಟಲ್ಲಿ ಸುತ್ತಿಕೊಂಡು. ಎಲ್ಲರ ಕಣ್ಣು ತಪ್ಪಿಸಿ ಎ ಜೋಪಾನವಾಗಿಟ್ಟಿದ್ದಳು ಆ ಬಟ್ಟೆಗಳನ್ನು.



ಇಲ್ಲಿಗೆ ಬಂದು ಅವನು, ಜೀವಾವ ಶಿಕ್ಷೆಗೊಳಗಾಗಿದ್ದ ದೇಶಭಕ್ತ ಪೂರ್ವಜರ ಸಂಬಂ ಗಳಾದ ಎಷ್ಟೋ ವೃದ್ಧರನ್ನು ಭೇಟಿಯಾದ. ಆದ ದಾಮೋದರ ಎಂಬ ಕೈದಿಯ ವಿಷಯವಾ ಎಲ್ಲಿಂದಲೂ, ಯಾವ ವಿಷಯವೂ ಗೊತ್ತಾ ಲಿಲ್ಲ. ಆತನ ಕೊನೆಯ ದಿನಗಳು ಯಾವ ರೀ ಎಲ್ಲಿ ಕಳೆದವು ಎಂಬ ಸಂಗತಿಯೇ ಗೊತ್ತಾಗಲಿ

ಎರಡನೆಯ ಮಹಾಯುದ್ಧದ ಸಮಯದ ಜಪಾನಿಯರ ಆಧಿಪತ್ಯದ ಸಮಯದ ಸೆಲ್ಯುಲರ್ ಜೈಲಿನ ಎಷ್ಟೋ ಮಹತ್ವದ ಕಾ ಪತ್ರಗಳನ್ನು ಸುಟ್ಟು ಹಾಕಿದರೆಂದು ಹೇಳ್ತಾ ಅಂದಹಾಗೆ ಒಂದು ಅಲ್ಮಾರದಲ್ಲಿ ಹಳೆ ಮಾಸಲು ಕಾಗದಗಳ ತುಂಡುಗಳು ಅವನಿ ಕಂಡವು. ಹಾಗೂ ಹೀಗೂ ಅನುಮತಿ ಪಡೆ ಕೊಂಡು ಅವನ್ನೇ ತಿರುವಿಹಾಕತೊಡಗಿದ.

ಕೈದಿಗಳ ಸೂಚಿಯಲ್ಲಿ ಹೆಸರಿತ್ತು. ಆದರೆ ಹೆಚ್ಚು ವಿವರವೇನೂ ಇರಲಿಲ್ಲ. ಕೊನೆಗೆ ಒಂದು ಜೀರ್ಣ-ಶೀರ್ಣ ಹಳದಿಗಟ್ಟಿದ ರಿಜಿಸ್ಟರ್‌ನಲ್ಲಿನ ಹರಿದ ಹಾಳೆಯ ಮೇಲೆ 'ಟೀಕಾರಾಮರ ಮಗ ದಾಮೋದರ. ಗ್ರಾಮ ಕುರೌಲಾ ಜಿಲ್ಲೆ...' ಎಂದು ಬರೆದಿತ್ತು. ಇದರ ಮುಂದಿನ ಭಾಗ ಹರಿದುಹೋಗಿತ್ತು. ಕೆಳಗೆ ಜೈಲಿನ ಕೊಠಡಿಯ ಸಂಖ್ಯೆ ಕೊಂಚ ಅಸ್ಪಷ್ಟವಾಗಿದ್ದರೂ ಓದಲು ಬರುತ್ತಿತ್ತು.

ಕೈದಿ ಸಂಖ್ಯೆ ಎಂಭತ್ತು.

ಕೊಠಡಿ ಸಂಖ್ಯೆ ಇನ್ನೂರ ಐದು.

ಅವನು ಓಡಿ, ಜೈಲಿನ ಇನ್ನೂರ ಐದನೆಯ ನಂಬರಿನ ಕೋಣೆಗೆ ಬಂದ. ಬರುವಾಗ ಏದುಸಿರುಬಿಡುತ್ತಿದ್ದ. ಕಬ್ಬಿಣದ ಬಾಗಿಲು ತೆರೆದೇ ಇತ್ತು. ಒಮ್ಮೆಗೇ ಅದರ ಒಳಗಡೆಗೆ ನುಗ್ಗಿದ. ಆ ಖಾಲಿ ಕೋಣೆಯಲ್ಲಿ ಮಣ್ಣು, ಧೂಳು ಹೊರತಾಗಿ ಇನ್ನೇನೂ ಇರಲಿಲ್ಲ. ದೃಷ್ಟಿಯನ್ನು ಹರಡಿ ಬಹಳ ಹೊತ್ತಿನವರೆಗೂ ಅವನು ಏನನ್ನೋ ಹುಡುಕುತ್ತಿದ್ದ. ಹೊರಗೆ ಕಲ್ಲು ಗೋಡೆಯ ಮೇಲೆ ಒಂದು ಗೋಲಾಕಾರದ ಗೂಟವನ್ನು ಹೂತಿದ್ದರು. ಕೈದಿಗಳನ್ನು ಕಟ್ಟಿ ಈ ಗೂಟಕ್ಕೆ ನೇತುಬಿಡುತ್ತಿದ್ದರಂತೆ.

ಅವನು ಬಹಳ ಹೊತ್ತಿನವರೆಗೆ ಆ ಗೂಟವನ್ನು ಕೈಯಿಂದ ಸವರುತ್ತ, ಕಲ್ಲಿನ ಮೂರ್ತಿಯಂತೆ ನಿಂತೇ ಇದ್ದ.

ಆ ಖಾಲಿಕೋಣೆಯಲ್ಲಿ ಈಗ ಯಾರೂ ಇಲ್ಲ. ಆದರೆ ಅವನಿಗೆ ಯಾರೋ ಇದ್ದಾರೆ ಎಂದನ್ನಿಸುತ್ತಿದೆ. ಅವನು ಆ ಕೋಣೆಗೆ ಹೋಗಿ, ತನ್ನ ಅಂಗೈಗಳಿಂದ ಗೋಡೆಗಳನ್ನು ಮುಟ್ಟಿ ಮುಟ್ಟಿ ನೋಡುತ್ತಾನೆ. ಕಿತ್ತುಹೋಗಿರುವ ನೆಲವನ್ನೂ



ಹಿಮಾಂಶು ಜೋಶಿ

ಕಳೆದ ನಲವತ್ತು ವರ್ಷಗಳಿಂದ ಹಿಂದಿಯಲ್ಲಿ ಕತೆ, ಕಾದಂಬರಿಗಳನ್ನು ಬರೆಯುತ್ತಿರುವ ಹಿಮಾಂಶು ಜೋಶಿ, 150ಕ್ಕೂ ಮಿಕ್ಕು ಕತೆಗಳನ್ನು, ಹಲವಾರು ಕಾದಂಬರಿಗಳನ್ನು ಪ್ರಕಟಿಸಿ ಹಿಂದೀ ಕಥಾಲೋಕಕ್ಕೆ ಹೊಸ ಸಂವೇದನೆ ಹರಿಸಿದ್ದಾರೆ. ಈ 40-50 ವರ್ಷಗಳಲ್ಲಿ ಭಾರತೀಯ ಪರಿಸರದ ಸಾಮಾಜಿಕ, ಆರ್ಥಿಕ, ರಾಜಕೀಯ ಬದುಕಿನ ಸ್ಥಿತ್ಯಂತರಗಳನ್ನು ನೋವು-ನಲಿವುಗಳನ್ನು ಹಾಗೂ ಅಸಾಂಗತ್ಯಗಳನ್ನು ಆತ್ಮೀಯವಾಗಿ ಚಿತ್ರಿಸಿದ್ದಾರೆ. ಯಾವುದೇ ಗುಂಪು-ವಾದಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳದೆ ಮಾನವೀಯ ಅಂತ:ಕರಣವನ್ನು ಮೆರೆದಿರುವ ಇವರ ಕತೆ, ಕಾದಂಬರಿಗಳು ಭಾರತೀಯ ಭಾಷೆಗಳಲ್ಲಿ ಅನುವಾದಗೊಂಡು ಪ್ರಕಟವಾಗಿರುವಂತೆ ಇಂಗ್ಲಿಷ್, ಝೆಕ್, ಬರ್ಮೀ, ಜಪಾನಿ, ಚೀನಿ, ಕೊರಿಯನ್, ನಾರ್ವೇಜಿಯನ್ ಭಾಷೆಗಳಿಗೂ ಅನುವಾದಗೊಂಡಿವೆ.

ಕಾಲಾಪಾನಿ ಸಜೆಗೆ ಗುರಿಯಾಗಿ ಅಂಡಮಾನ್, ನಿಕೋಬಾರ್‌ದ ನಿರ್ಜನ ಅನಾಗರಿಕ ದ್ವೀಪ ಸಮೂಹಗಳಲ್ಲಿ ಅನಾಮಿಕರಾಗಿ ಉಳಿದ, ಅಳಿದ ಸ್ವಾತಂತ್ರ ಸೇನಾನಿಗಳ ವಿಪ್ಲವದ ಚಿತ್ರಣ ಈ ಕತೆಯಲ್ಲಿದೆ.

ಹಿಮಾಂಶು ಜೋಶಿಯವರ 'ಛಾಯಾ ಮತ್ ಛಾನಾ ಮನ್' ಕಾದಂಬರಿಯನ್ನು 'ಹಾಗೂ ಹಲವಾರು ಕತೆಗಳನ್ನು ಕನ್ನಡಕ್ಕೆ ತಂದಿರುವ ತಿಪ್ಪೇಸ್ವಾಮಿ, ಮೈಸೂರು ವಿಶ್ವವಿದ್ಯಾಲಯದಲ್ಲಿ ಹಿಂದೀ ಪ್ರಾಧ್ಯಾಪಕರಾಗಿದ್ದಾರೆ.

ಮುಟ್ಟುತ್ತಾನೆ, ಮತ್ತೆ ಮತ್ತೆ ಮುಟ್ಟುತ್ತಾನೆ. ಗೋಡೆಗಳು ಹಾಗೂ ಕಬ್ಬಿಣದ ಬಾಗಿಲು ಸ್ಪಂದಿಸುತ್ತಿರುವಂಥ ಅನುಭವವಾಗುತ್ತಿದೆ. ಜೊತೆಗೆ ಅಪ್ಪ ಬಂದು, 'ಅರೆ ರಾಮ, ನೀನು ಇಲ್ಲಿ ಏನ್ಮಾಡ್ತಿದ್ದೀಯಾ?' ಎಂದು ಕೇಳಿದಂತಾಗುತ್ತದೆ.

ಕಬ್ಬಿಣದ ಒಂದು ದಪ್ಪನೆಯ ಸಲಾಕೆ, ಗೋಡೆಯ ಈ ಭಾಗವನ್ನು ಸೀಳಿಕೊಂಡು ಆ ಭಾಗಕ್ಕೆ ಹೋಗಿದೆ ಎಂದು ಆ ಬಾಗಿಲನ್ನು ನೋಡಿದರೆ ಗೊತ್ತಾಗುತ್ತದೆ. ಅಲ್ಲಿ ಕೈದಿ ಎಷ್ಟೇ ಕಷ್ಟಪಟ್ಟರೂ ಇಲ್ಲಿಂದ ಓಡಿಹೋಗಲು ಸಾಧ್ಯವಾಗದಂತೆ ಬೀಗ ಹಾಕುವ ವ್ಯವಸ್ಥೆಯಿದೆ.

ಅವನು ಹೊರಗೆ ಬರುತ್ತಾನೆ. ಈ ಕಡೆಯಿಂದ ಆ ಕಡೆಯವರೆಗೆ ಉದ್ದವಾಗಿರುವ ಒಂದು ಅಂಗಳವಿದೆ. ಕತ್ತಲು ಆವರಿಸುತ್ತಿದೆ. ಅವನು ದೊಡ್ಡ ದೊಡ್ಡ ಹೆಜ್ಜೆಗಳನ್ನು ಹಾಕುತ್ತ ಮೆಟ್ಟಲುಗಳನ್ನು ಇಳಿಯತೊಡಗುತ್ತಾನೆ. ಹೊರಗಡೆ ಅಂಗಳದಲ್ಲಿ ಕಬ್ಬಿಣ ಮತ್ತು ಕಲ್ಲಿನ ಭಾರಿ ಗಾಣ ಹಾಗೆಯೇ ಇದೆ. ಎರಡೂ ಕೈಗಳಿಂದ ಅವನು ಎತ್ತುವ ಪ್ರಯತ್ನ ಮಾಡುತ್ತಾನೆ. ಆತ ಯುವಕ. ಆದರೂ ಅದನ್ನು ಎತ್ತಲಾಗುತ್ತಿಲ್ಲ. ತನ್ನ ವೃದ್ಧ ರೋಗಿಷ್ಠ ತಾತ, ಹೇಗೆ ಇದನ್ನು ಎತ್ತಿಕೊಂಡು ಎಂಟೆಂಟು ಘಂಟೆಗಳವರೆಗೂ ಎತ್ತುಗಳಂತೆ ಸುತ್ತಿ, ಎಣ್ಣೆ ತೆಗೆಯುತ್ತಿದ್ದರು?

ಪೂರ್ವಭಾಗದ ಆ ಮೂಲೆಯಲ್ಲಿ, ಮರದ ಹಲಗೆಗಳಿಂದ ಕಟ್ಟಿದ ಒಂದು ಕೋಣೆ ಈಗಲೂ ಇದೆ. ಇದರ ಒಳ ಛಾವಣಿಗೆ ಕಟ್ಟಿದ ಮರದ ಗುಂಡನೆಯ ತುಂಡೊಂದು ಕಾಣುತ್ತಿದೆ. ಆ ತುಂಡಿಗೆ ಕಟ್ಟಿದ ತೆಂಗಿನ ನಾರಿನ ದಪ್ಪನೆಯ ಹಗ್ಗದ ಗೋಲಾಕಾರದ ನೇಣು ಸಿಂಬೆ ನೇತಾಡುತ್ತಿದೆ. ಕೆಳಗೆ ಕಾಲುಗಳನ್ನಿಟ್ಟುಕೊಳ್ಳುವ ಜಾಗದಲ್ಲಿ ಎರಡು ಹಲಗೆಗಳಿವೆ. ಅವುಗಳ ಕೆಳಗೆ ಕತ್ತಲು ತುಂಬಿದ ಬಾವಿಯಿದೆ.

'ವ್ಯಕ್ತಿಯನ್ನು ನೇಣುಹಾಕುತ್ತಿದ್ದಂತೆಯೇ ಈ ಹಲಗೆಗಳನ್ನು ತೆಗೆದುಬಿಡುತ್ತಿದ್ದರು. ಆಗ ಹೆಣ ನೇರವಾಗಿ ಕತ್ತಲೆ ಬಾವಿಯೊಳಗೆ ಬಿದ್ದುಬಿಡುತ್ತಿತ್ತು...', ಪಕ್ಕದಲ್ಲಿ ನಿಂತ ಒಬ್ಬ ಹೇಳುತ್ತಿದ್ದ.

ಅವನು ಕಿವುಡನಂತೆ, ಮೂಗನಂತೆ ಆ ಆಳವಾದ ಬಾವಿಯತ್ತಲೇ ನೆಟ್ಟಕಣ್ಣುಗಳಿಂದ ನೋಡುತ್ತಿದ್ದಾನೆ. ಅಲ್ಲಿ ಈಗಲೂ ರಕ್ತದ ಕಲೆಗಳು ಕಾಣುತ್ತಿವೆ. ಒಂದು ಮೂಕ ಆಕ್ರಂದನ ಈಗಲೂ ಅಲ್ಲಿ ಪ್ರತಿಧ್ವನಿಸುತ್ತಿದೆ.

ಭಾರವಾದ ಹೆಜ್ಜೆಗಳನ್ನಿಡುತ್ತ ಅವನು ಮುಂದಕ್ಕೆ ಹೋಗುತ್ತಾನೆ. ಎದುರು ಭಾಗದ ಕಟ್ಟಡದಲ್ಲಿನ ಒಂದು ದೊಡ್ಡ ರೂಮಿನಲ್ಲಿ ಕೈದಿಗಳ ಹರಿದ ಅಂಗಿಗಳು ನೇತಾಡುತ್ತಿವೆ. ಒಡೆದುಹೋಗಿ ತುಕ್ಕು ಹಿಡಿದ ಪಾತ್ರೆಗಳು, ಕೈಕೋಳಗಳು, ಸರಪಳಿಗಳು ವಸ್ತುಪ್ರದರ್ಶನಕ್ಕಿಟ್ಟಂತೆ ಬಿದ್ದಿವೆ.

ರಾತ್ರಿ ಅವನಿಂದ ಊಟ ಮಾಡಲಾಗಲಿಲ್ಲ. ಅಲ್ಲಿನ ಭಯಂಕರ ವಾತಾವರಣ ಅವನನ್ನು ಹಿಂಬಾಲಿಸುತ್ತದೆ. ಒಂದು ಆಳವಾದ ಖಿನ್ನತೆ ಅವನನ್ನು ಆವರಿಸುತ್ತದೆ.

ಅವನು ತಿರುಗಿ ಕೋಣೆಗೆ ಬರುತ್ತಾನೆ. ಬಂದರೆ ಆ ಕೋಣೆಯೂ ಆತನಿಗೆ ಹಾಗೆಯೇ ಅನ್ನಿಸುತ್ತದೆ. ಭಯಹುಟ್ಟಿಸುವಂತೆ ಭಾಸವಾಗುತ್ತದೆ.



ಅಲ್ಲಿ-ಇಲ್ಲಿ ಸುತ್ತುತ್ತಾ ಇಷ್ಟು ದಿನಗಳಾದುವು. ಅವನಿಗೆ ಯಾವ ಮಾಹಿತಿಯೂ ಸಿಗಲಿಲ್ಲ.

ಕೆಲವು ಜನ ಭಾವಿಸುವಂತೆ ಜಪಾನಿಯರು ಜೈಲಿನ ಬಾಗಿಲುಗಳನ್ನು ತೆರೆದಾಗ ಕೆಲವು ಕೈದಿಗಳು ಹೊರಗೆ ಬಂದರಂತೆ. ಅವರಲ್ಲಿ ತಾತನೂ ಒಬ್ಬರಾಗಿದ್ದಿರಬಹುದು. ಅವರು ಹೊರಗೆ ಬಂದು ಎಲ್ಲಿಗೆ ಹೋದರು? ಎಲ್ಲೂ ಯಾವುದೇ ಬಗೆಯ ಮಾಹಿತಿಯಿಲ್ಲ.

ಆಮೇಲೆ ಜಪಾನಿಯರು ಕ್ರೂರವಾಗಿ ಹತ್ಯೆಗಳನ್ನು ನಡೆಸಿದರು. ಈ ರೀತಿ ಹತ್ಯೆಗೊಳಗಾದವರಲ್ಲಿ ಅವರೂ ಒಬ್ಬರಿದ್ದಿರಬಹುದು.

ಮಾಡಿದ್ದರಂತೆ. ಅವರ ಬೆನ್ನಿನ ಮೇಲೆ ಚಾವಟಿ ಏಟುಗಳು ಬಿದ್ದಾಗ, ಚಾಟಿಯ ಚರ್ಮದ ಜೊತೆಗೆ ಅವರ ಬೆನ್ನಿನ ಮಾಂಸವೂ ಕಿತ್ತುಕೊಂಡು ಬಂತು, ಮಣ್ಣಿನ ನೆಲವೆಲ್ಲ ರಕ್ತದಿಂದ ತೊಯ್ದುಹೋಯಿತು ಅಂತೆಲ್ಲ ಆ ತಾತ ಹೇಳ್ತಿದ್ದರು.

ಕೆಲವರು ಹೇಳುತ್ತಿದ್ದ ಪ್ರಕಾರ, ಜೈಲಿನಿಂದ ಓಡಿಹೋದ ಕೆಲವು ಕೈದಿಗಳು, ಆದಿವಾಸಿಗಳ ಹಡಗುಗಳಲ್ಲಿ ಒಂದು ಗುಂಪು ಮಾಡಿಕೊಂಡು, ಸಾಗರದ ಮೂಲಕ ಹೋದರು. ಹೀಗೆ ಹೋದವರು, ಆಮೇಲೆ ಎಲ್ಲಿ ಹೋದರು, ಹೇಗೆ ಕಣ್ಮರೆಯಾದರು ಎಂಬುದರ ಯಾವ ಸುಳಿವೂ ಸಿಗಲಿಲ್ಲ.



ಕೋಣೆಯಲ್ಲಿ ದೀಪ ಹೊತ್ತಿಸಿ ನೋಡುತ್ತಾನೆ, ಅವನ ಹಾಸಿಗೆಯ ಮೇಲೆ ಬೂದುಬಣ್ಣದ ಚಾದರ ಹಾಸಿದಂತೆ ಏನೋ ಕಾಣುತ್ತಿದೆ. ಹಾಸಿಗೆಯ ತುಂಬೆಲ್ಲ ಇರುವೆಗಳು ತುಂಬಿಕೊಂಡಿವೆ. ತಿನ್ನಲು ತಂದಿದ್ದ ತಿಂಡಿಯ ಚೀಲವನ್ನು ಅವನು ಹೋಗುವಾಗ ಹಾಸಿಗೆಯ ಮೇಲಿಟ್ಟು ಹೋಗಿದ್ದ, ಈಗ ಅಲ್ಲಿ ಒಂದು ಚೂರು ತಿಂಡಿಯೂ ಉಳಿದಿಲ್ಲ.

ಬಾತ್‌ರೂಮಿನ ಮೋರಿಯೊಳಗಿಂದ, ಹಾವಿನಂಥ ಉದ್ದುದ್ದನೆಯ ತೆಳುವಾದ ಪೊರೆಗಳು ಗೊಂಚಲಿನಂತೆ ಒಳಗೆ ಬಂದು, ನೆಲದ ಮೇಲೆ ನೂಲಿನ ದಾರದಂತೆ ಅತ್ತಿತ್ತ ಸರಿದಾಡುತ್ತಿರುವಂತೆ ಭಾಸವಾಗುತ್ತಿದೆ. ಅವನು ಕೂಡಲೇ ದಢಾರ್ ಅಂತ ಬಾತ್‌ರೂಮಿನ ಕಿಟಕಿಯನ್ನು ಮುಚ್ಚಿ ಹೊರಗೆ ಬರುತ್ತಾನೆ.

ಚಾದರನ್ನು ಎತ್ತಿ ಹೊರಗಿನ ಅಂಗಳಕ್ಕೆ ಎಸೆಯುತ್ತಾನೆ. ದಿನವಿಡೀ ಬಳಲಿದ್ದರಿಂದ ಖಾಲಿ ಮಂಚದ ಮೇಲೆ ಹಾಗೆಯೇ ಮಲಗುತ್ತಾನೆ.

ಧೂಳ ಕಣಗಳಂತಿದ್ದ ಸೂಕ್ಷ್ಮವಾದ

ಇರುವೆಗಳು ಈಗಲೂ ಹಾಸಿಗೆ ಮೆ
ಸರಿದಾಡುತ್ತಿವೆ. ಅವು ಕಚ್ಚಿದ್ದರಿಂದ ಮೈಯ್ಯ
ತೀಕ್ಷ್ಣವಾದ ಉರಿಯಾಗುತ್ತಿದೆ.

ಬಹುಶಃ ಹೊರಗೆ ಈಗ ಮಳೆಯಾಗು
ಗಾಳಿ ರಭಸವಾಗಿ ಬೀಸುತ್ತಿದೆ.

ಆಗ ಯಾರೋ ಬಾಗಿಲು ತಟ್ಟಿದ
ಕೇಳಬರುತ್ತದೆ. ಒಳಗಿನ ಚಿಲಕ ತೆ
ನೋಡುತ್ತಾನೆ. ಖಾದಿಯ ಹರಿದ ಬಟ್ಟೆ ತ
ನೀಳವಾದ ಗಡ್ಡಬಿಟ್ಟ ಓರ್ವ ವೃದ್ಧರು ನೀ
ತೊಯ್ದು ಎದುರಿಗೆ ನಿಂತಿದ್ದಾರೆ.

''ನೀವು ಕ್ರಾಂತಿಕಾರಿ ದಾಮೋ
ಪಂಡಿತರ ಬಗ್ಗೆ ಕೇಳುತ್ತಿದ್ದಿರಿ ಅಂತ
ನೆರೆಮನೆಯ ಕುಟ್ಟಪ್ಪ ಹೇಳ್ತಿದ್ದರು.''

'ಹೌದು, ಅವರು ನನ್ನ ತ
ಸೇಣುಶಿಕ್ಷೆಯನ್ನು ಪಡೆದು ಇಲ್ಲಿಗೆ ಬಂದಿದ್ದ
ಈಗ ಅವರು ಹೋಗಿ ತುಂಬಾ ದಿನಗಳಾ
ಅಂತ ಕಾಣುತ್ತೆ.' ಹೀಗೆ ಹೇಳಬಾರದಿತ್ತೇ
ಎಂದನ್ನಿಸಿತು. ಯಾಕೆಂದರೆ ಅ
ಬದುಕಿದ್ದಾರೆಯೋ, ತೀರಿಕೊಂಡಿದ್ದಾರೆಯ
ಎಂಬ ವಿಷಯವೇ ಗೊತ್ತಿಲ್ಲ.

ವೃದ್ಧರು ತುಂಬಾ ಕರುಣಪೂ
ದೃಷ್ಟಿಯಿಂದ ಅವನನ್ನೇ ನೋಡುತ್ತಿದ
''ನಾವಿಬ್ಬರೂ ಬಹಳಷ್ಟು ಕಾಲ ಜೊತೆಯಲ್ಲಿ
ಇದ್ದೆವು ಮಗ.'' ಅವರು ಕ್ಷಣ ತ
ಹೇಳುತ್ತಾರೆ, ''ಬಾ ನನ್ನ ಜೊತೆ, ಹೇಳ್ತೀನಿ''

ಹೊರಗೆ ಮಳೆ ಅಷ್ಟು ಜೋರೇನಿರ
ನಿಲ್ಲುವ ಸೂಚನೆಗಳಿದ್ದವು. ದಿಕ್ಕೆಟ್ಟವ
ಅವನು ಕಿಟಕಿಗಳನ್ನು ಮುಚ್ಚಿಕೊಂಡು ವೃ
ಜೊತೆ ಹೊರಗೆ ಬರುತ್ತಾನೆ.

ಬಹುಹೊತ್ತಿನವರೆಗೆ ಇಬ್ಬರೂ ಮೌನ
ನಡೆಯುತ್ತಿರುತ್ತಾರೆ.

ಕಾಲುದಾರಿಯಂಥ ಕಚ್ಚಾರಸ್ತೆ.

''ಎದುರಿಗೆ ಬಯಲು ಕಾಣುತ್ತಿದೆಯ
ಮೊದಲು ಈ ಬಯಲಿನಲ್ಲಿ ಎಲ್ಲಾ ಕೈದಿಗ

ಪ್ರಾಣಿಗಳಂತೆ ಬಿಟ್ಟುಬಿಡುತ್ತಿದ್ದರು. ಈ ಗೋಡೆಗಳ ಜೈಲನ್ನು ಕಟ್ಟಿದ್ದು ಆಮೇಲೆ'' ಅವರು ತಮಗೆ ತಾವು ಹೇಳಿಕೊಳ್ಳುವಂತೆ ಮಾತುಗಳನ್ನು ಆಡುತ್ತಿದ್ದರು.

ತಗ್ಗು ಪ್ರದೇಶದ ನಂತರ ಕೊಂಚ ಇಳಿಜಾರು ಬಂತು. ವೃದ್ಧರು ತಮ್ಮ ಚಾದರವನ್ನು ಸಂಭಾಳಿಸಿಕೊಂಡು ತಿರುಗಿ ನೋಡುತ್ತ ಕೇಳಿದರು, ''ಅವರ ಬಗ್ಗೆ ಯಾವುದೇ ಮಾಹಿತಿಯನ್ನು ಸರ್ಕಾರ ನಿಮ್ಮ ಮನೆಗೆ ಕಳಿಸಲಿಲ್ಲವೇನು?''

'ಇಲ್ಲ'

''ಅವರು ತುಂಬಾ ಒಳ್ಳೆಯ ಮನುಷ್ಯರಾಗಿದ್ದರು. ಆದರೆ ತುಂಬಾ ಹಠಮಾರಿ. ಜೇಲರ್‌ನ ಹಿಂಸೆ-ಅತ್ಯಾಚಾರಗಳ ವಿರುದ್ಧ 17 ಏಪ್ರಿಲ್‌ರಂದು ಅವರು ಉಪವಾಸ ಸತ್ಯಾಗ್ರಹ ಮಾಡಿದ್ದರು. ಅದರಲ್ಲೇ ಪಾಪ, ಅವರು ಪ್ರಾಣಬಿಟ್ಟರು.''

ಸೆಲ್ಯುಲರ್ ಜೈಲಿನ ಗೋಡೆಗಳ ಹಿಂಬದಿಯ, ಇಕ್ಕಟ್ಟಾದ ಒರಟು ಹಾದಿಗುಂಟ ಅವರು ಮುಂದೆಮುಂದೆ ಹೋಗುತ್ತಿದ್ದಾರೆ. ಆ ವೃದ್ಧರಲ್ಲಿ ಈ ವಯಸ್ಸಿನಲ್ಲೂ ಹುಮ್ಮಸ್ಸಿದೆ. ಅವನಿಗಿಂತಲೂ ವೇಗವಾಗಿ ಹೆಜ್ಜೆ ಹಾಕುತ್ತಿದ್ದಾರೆ.

ಹೊರಗೆ ಪೌರ್ಣಿಮೆಯ ಪೂರ್ಣಚಂದ್ರ ಬೆಳಗುತ್ತಿದ್ದಾನೆ. ದಟ್ಟವಾದ ಮೋಡಗಳು ಚದುರಿಹೋಗಿವೆ. ಇಡೀ ವಾತಾವರಣ ಸ್ತಬ್ಧವಾಗಿದೆ. ಸಾಗರದಲ್ಲಿ ಪ್ರಳಯದಂಥ ಅಲೆಗಳು ಮೊರೆಯುತ್ತಿವೆ. ದಡದಲ್ಲಿನ ಬಂಡೆಗಳ ಮೇಲೆ, ಅಲೆಗಳು ತುಂಡುತುಂಡಾಗಿ ಹರಿದುಹಂಚಿಹೋಗುತ್ತಿವೆ. ಬಂಡೆಗಳ ಮಗ್ಗುಲಲ್ಲಿ ದಟ್ಟವಾದ ನೊರೆ ರೂಪುಗೊಳ್ಳುತ್ತಿದೆ.

''ಅವರು ಸಾಯುವ ದಿನ ಸಹ ಹೀಗೆ ಇಂಥ ಪೂರ್ಣಚಂದ್ರನಿದ್ದ. ರಾತ್ರಿಯ ನಿಶ್ಶಬ್ದತೆಯಲ್ಲಿ ಇಬ್ಬರು ಹ್ಯೂರಿ, ಪಠಾಣ ಕೈದಿಗಳು, ಮಾತೊಂದನ್ನೂ ಆಡದೆ, ಅವರ ನಗ್ನ ಶವವನ್ನು ಹೆಗಲಮೇಲೆ ಹೊತ್ತುಕೊಂಡಿದ್ದೇ, ಉಕ್ಕಿಬರುತ್ತಿದ್ದ ಸಾಗರಕ್ಕೆ ಇಲ್ಲಿಂದ ದುಢುಂ ಎಂದು ಎಸೆದುಬಿಟ್ಟರು.''

ವೃದ್ಧರ ಭಾರವಾದ ಧ್ವನಿ ತುಂಬಿಬಂದಿದೆ. ಅವರು ಪ್ರತಿಮೆಯಂತೆ ಸ್ತಬ್ಧರಾಗಿ ನಿಂತು, ಸಾಗರದಲ್ಲಿ ಉಕ್ಕಿ ಬರುತ್ತಿರುವ ಅಲೆಗಳಲ್ಲಿ ಏನನ್ನೋ ಹುಡುಕಲಾರಂಭಿಸುತ್ತಾರೆ.

ಕೆಲವು ಕ್ಷಣಗಳ ಮೌನವನ್ನು ಭೇದಿಸುತ್ತ ಹೇಳುತ್ತಾರೆ, ''ಅಲ್ಲಿ ನೋಡು... ಅಲ್ಲಿ... ದೂರದಲ್ಲಿ... ಸಮುದ್ರದ ಅಲೆಗಳ ಮಧ್ಯೆ... ಕಪ್ಪಕಪ್ಪಗೆ ಏನೋ ತೇಲುತ್ತಿರುವಂತೆ ಕಾಣುತ್ತಿದೆಯಲ್ಲವಾ?''

ಅವನು ಗಮನವಿಟ್ಟು ನೋಡುತ್ತಾನೆ, ಏಕಾಗ್ರತೆಯಿಂದ.

'ಹೌದು, ಅಲೆಗಳ ಮೇಲೆ ಕಪ್ಪನೆಯ ಬಟ್ಟೆಯಂತೆ ಏನೋ ಕಾಣಿಸುತ್ತಿದೆ.'

''ಪೌರ್ಣಿಮೆಯ ರಾತ್ರಿ, ಆಗಾಗ, ಅಲ್ಲಿ ತೇಲುತ್ತಿರುವ ಕಪ್ಪನೆಯ ತುಂಡು ಬಟ್ಟೆ ಕಾಣುತ್ತದೆ. ಕೆಲವರು ಇದನ್ನು ಭ್ರಮೆ ಅಂತಲೂ ಹೇಳ್ತಾರೆ... ಆದರೆ ಎದುರಿಗೆ ಕಾಣುತ್ತಿರುವುದು ಭ್ರಮೆಯೇನು?''

ಇಷ್ಟನ್ನು ಹೇಳುತ್ತ ಹೇಳುತ್ತ ಅವರು ಮೌನವಾಗಿಬಿಡುತ್ತಾರೆ.

ಅವನು ಎಷ್ಟೋ ಹೊತ್ತಿನವರೆಗೆ ಜಡವಾಗಿ ನಿಂತೇ ಇರುತ್ತಾನೆ.

ಈಗ ಅವನ ಕಾಲುಗಳು ಯಂತ್ರದಂತೆ ಬಿಡಾರದತ್ತ ನಡೆಯತೊಡಗುತ್ತವೆ. ಇಬ್ಬರೂ ಮೌನವಾಗಿದ್ದಾರೆ.

ಹಿಂತಿರುಗಿ ಅವನು ಪುನಃ ಕೊಠಡಿಗೆ ಬರುತ್ತಾನೆ. ಈಗ ಅವನಿಗೆ ನಿದ್ದೆ ಬರುವುದಿಲ್ಲ. ಅಸಂಖ್ಯ ಇರುವೆಗಳು. ಅವನ ಹಾಸಿಗೆಯ ಮೇಲೆ ಪುನಃ ಹರಡಿಕೊಂಡಿವೆ. ಬಿಳಿಯ ಬಣ್ಣದ ಎಂಥದೋ ಹುಳುಗಳು ಬಾತ್‌ರೂಮಿನಲ್ಲಿ ಹರಡಿಕೊಂಡಿವೆ. ಒಂದು ಮಸುಕಾದ ಆಕೃತಿ ಮತ್ತೆ ಮತ್ತೆ ಅವನ ಕಣ್ಣುಗಳ ಮುಂದೆ ಮೂಡಿಬರುತ್ತದೆ, ಬಂದಂತೆಯೇ ಅದೃಶ್ಯವಾಗಿಬಿಡುತ್ತದೆ.






# ಸಾಹಿತ್ಯ ಕೂಟಗಳು

ಧಾರವಾಡದ ಮನೋಹರ ಗ್ರಂಥಮಾಲೆಯ ಜಬಿಯವರ ಅಟ್ಟ, ಮೈಸೂರಿನ ಕಾಫಿಹ
ಮುಂತಾದವು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಭಾಗಗಳಾಗಿ ಹೋಗಿವೆ. ಭಾಷಣಗಳಲ್ಲಿ, ಲೇಖನ
ಪದೇ ಪದೇ ಉಲ್ಲೇಖಗೊಂಡ ಇವುಗಳ ಬಗ್ಗೆ ರೊಮ್ಯಾಂಟಿಕ್ ಕಲ್ಪನೆಗಳು ಬೆಳೆದಿವೆ. ಇಷ್ಟೊ
ಹೆಸರುವಾಸಿಯಲ್ಲದ, ಆದರೆ ಬಹಳ ಮಹತ್ವದ ಇಂಥ ಅನೇಕ ಕೂಟಗಳು ಕರ್ನಾಟಕದ
ಊರುಗಳಲ್ಲೂ ಇವೆ ಮತ್ತು ಕನ್ನಡ ಸಾಹಿತ್ಯಕ್ಕೆ ಅಭಿಮಾನಿಗಳನ್ನು ಮತ್ತು ಪ್ರಬುದ್ಧ ಓದುಗರನ್ನು ಸೃಷ್ಟಿಸು
ತಮ್ಮದೇ ಆದ ವಿಶಿಷ್ಟವಾದ ಕಾಣಿಕೆಯನ್ನು ಕೊಟ್ಟಿವೆ. ಇಲ್ಲಿ ಮುಖ್ಯವಾದದ್ದು ಸಮಾನ ಮನಸ್ಕರು ಒಂ
ಸೇರುವ ಸಂಗತಿ. ಇದಕ್ಕೆ ಔಪಚಾರಿಕ ಸಂಘಟನೆಯೇ ಆಗಬೇಕೆಂದಿಲ್ಲ. ಇದು ಯಾರದೋ ಮನೆ
ವಾರಕ್ಕೋ, ತಿಂಗಳಿಗೋ ಒಮ್ಮೆ ಸೇರುವಂಥ ವ್ಯವಸ್ಥೆಯಾಗಿರಬಹುದು, ನಿತ್ಯ ಸೇರುವ ಸಾರ್ವ
ಲೈಬ್ರರಿಯ ಹೊರ ಆವರಣವಾಗಿರಬಹುದು, ಯಾವುದೋ ಹೋಟೆಲಿನ ಮೂ
ಟೇಬಲ್ಲಾಗಿರಬಹುದು, ಕನ್ನಡ ಸಂಘದ ವಾರದ ಸಭೆಗಳಾಗಿರಬಹುದು, ಸಂಜೆಯ ಹೊತ್ತು ಯಾರ
ಆಫೀಸಾಗಿರಬಹುದು. ಸಾಹಿತ್ಯದಲ್ಲಿ ಆಸಕ್ತಿಯಿರುವ ಸಮಾನ ಮನಸ್ಕರು ಆಗಾಗ ಒಂದೆಡೆ ಸೇರಿ,
ಹೊಸದಾಗಿ ಓದಿದ ಪುಸ್ತಕವನ್ನು, ಇಷ್ಟವಾದ ಕವಿತೆಯನ್ನು, ಒಂದು ಕೃತಿಯನ್ನು ತಾವು ಗ್ರಹಿಸಿದ ಭಿನ್ನ
ರೀತಿಯನ್ನು ಕುರಿತು ತಮ್ಮೊಳಗೆ ಮಾತಾಡಲು ಇರುವ ಇಂಥ ಜಾಗಗಳಿಗೆ ಅದರದ್ದೇ ಆದ ಮಹತ್ವವಿದೆ

ಸಾಹಿತ್ಯದ ಬಗ್ಗೆ ನಿಜವಾದ ಆಸಕ್ತಿ, ಪ್ರಾಮಾಣಿಕ ಕಳಕಳಿ, ತಮ್ಮಿಂದ ಬೇರೆಯಾದ ಇನ್ನೊ
ದೃಷ್ಟಿಕೋನ ಇರುವುದು ಸಾಧ್ಯವಿದೆ ಎಂಬ ನಂಬಿಕೆ ಇರುವುದು, ಇಂಥ ಗುಂಪುಗಳ ಸದಸ್ಯರಿಗೆ ಅತ್ಯ
ಇದು ಇಲ್ಲದ ಕಡೆಗಳಲ್ಲಿ ಬರೀ ಗುಂಪುಗಾರಿಕೆ ಮತ್ತು ವ್ಯರ್ಥ ಕಾಲಹರಣ ಮಾತ್ರ ಆಗುತ್ತದೆ. ಸಾಹಿತ್ಯ
ಪ್ರಾಮಾಣಿಕ ಆಸಕ್ತಿ ಇರುವ ಜನ ಒಂದು ಊರಿನಲ್ಲಿ ಹೆಚ್ಚಿಲ್ಲದಿರುವುದರಿಂದ ಉಳಿದವರಿಗೆ ಇ
ವ್ಯರ್ಥಾಲಾಪ ಮಾಡುವವರಂತೆ ಕಾಣುತ್ತಾರೆ. ಇಂಥ ಒಂದು ಭಾವನೆ ಇರುವುದರಿಂದಲೇ ಈ ಕೂಟ
ಮಹತ್ವವಿದೆ. ತಮ್ಮ ಆಸಕ್ತಿಗಳು ಮತ್ತು ತಾವು ಮುಖ್ಯವೆಂದು ಭಾವಿಸಿಕೊಂಡ ಸಂಗತಿಗಳನ್ನು ಗೌರವಿ
ಜನರ ನಡುವೆ ಇರಬೇಕಾದದ್ದು, ಒಂದು ಆಸಕ್ತಿಯನ್ನು ಕಾಪಾಡಿಕೊಳ್ಳಲು ಅತ್ಯಂತ ಮುಖ್ಯವಾದ
ಸಾಹಿತ್ಯದಂಥ ಆಸಕ್ತಿಯನ್ನು ಅರ್ಥಪೂರ್ಣವಾಗಿ ಪೋಷಿಸಿಕೊಂಡು ಹೋಗುವುದಕ್ಕೆ ಪುಸ್ತಕ
ಲಭ್ಯವಿರಬೇಕು; ಅವುಗಳನ್ನು ಓದಿ ಹುಟ್ಟಿದ ಉತ್ಸಾಹವನ್ನು ಹಂಚಿಕೊಳ್ಳುವ ಸ್ನೇಹಿತರಿರಬೇಕು; ಮಾ
ಮಾತಾಗಿ ಹೊಸ ಅರ್ಥಗಳು ಹೊಳೆಯಬೇಕು; ಈಗ ತಾನೇ ಓದಿದ ಹೊಸ ಬರಹಗಾರರ
ಒಬ್ಬರಿಂದೊಬ್ಬರಿಗೆ ತಿಳಿಸುವ ಉತ್ಸಾಹ ಬೇಕು. ಇದೆಲ್ಲವೂ ಸಾಧ್ಯವಾಗುವುದು ಇಂಥ ಸಣ್ಣ

ಅನೌಪಚಾರಿಕ ಕೂಟಗಳಲ್ಲಿ. ಇದಕ್ಕೆ ಸಂಘ ಸಂಸ್ಥೆಗಳಾಗಲೀ, ಪದಾಧಿಕಾರಿಗಳ ಚುನಾವಣೆಯಾಗಲೀ ಆಗಬೇಕಾದ ಅಗತ್ಯವಿಲ್ಲ. ನಾಲ್ಕಾರು ಜನ ಕೂಡ ಇಂಥ ಒಂದು ಗುಂಪಿನಲ್ಲಿ ಆಗಾಗ ಸೇರುತ್ತ, ಸಾಹಿತ್ಯದ ಆರೋಗ್ಯಪೂರ್ಣ ಚರ್ಚೆಗೆ ಅವಕಾಶ ಕಲ್ಪಿಸಿಕೊಳ್ಳಬಹುದು.

ಸಾಹಿತಿಗಳೇ ಸೇರಿದಲ್ಲಿ, ಇಂಥ ಕೂಟಗಳು ಗಂಭೀರ ಸಾಹಿತ್ಯಕ್ಕೆ ಪ್ರೇರಕವೂ ಆಗಬಹುದು. ಕಾಫಿಹೌಸ್ ಮತ್ತು ಜಿಬಿಯ ಅಟ್ಟ ಅಂಥ ಕೆಲವು ಉದಾಹರಣೆಗಳು. ಆದರೆ ಇದೇ ಇವುಗಳ ಉದ್ದೇಶವಲ್ಲ. ಮುಖ್ಯವಾಗಿರುವುದು ಸಾಹಿತ್ಯಾಸಕ್ತಿಯನ್ನು ಹಂಚಿಕೊಳ್ಳುವುದೇ ಹೊರತು ಇನ್ನೇನಲ್ಲ. ಬಹುತೇಕ ಕನ್ನಡ ಸಂಘಗಳು ಇಂಥ ಹಂಬಲದಿಂದ ಹೊರಡುತ್ತವೆಯಾದರೂ, ಅವು ಒಳಗೊಳ್ಳಬೇಕಾದ ಅನೇಕ ರೀತಿಯ, ವೈವಿಧ್ಯಮಯ ಜನರ ಸಲುವಾಗಿ ಸಾಧಾರಣೀಕರಣಕ್ಕೆ ತುತ್ತಾಗುತ್ತವೆ. ಇಂಥ ಕನ್ನಡ ಸಂಘಗಳು ಮತ್ತು ಅವು ನಡೆಸುವ ಸಮಾರಂಭಗಳು ಎಷ್ಟೇ ಸಾಧಾರಣ ಎಂದು ಮೇಲ್ನೋಟಕ್ಕೆ ಅನಿಸಿದರೂ, ಅವುಗಳ ಹಿಂದೆ ಒಂದು ಪ್ರಾಮಾಣಿಕ ಪ್ರಯತ್ನ ಮತ್ತು ಕಳಕಳಿ ಇದ್ದರೆ ಅರ್ಥಪೂರ್ಣವಾದ ಕಾಣಿಕೆ ಕೊಡಬಲ್ಲವು. ಒಂದು ಭಾಷೆ ಮತ್ತು ಸಾಹಿತ್ಯ ಬೆಳೆಯಲು ಇವೆಲ್ಲವೂ ಅಗತ್ಯವಾದದ್ದು. ನನ್ನ ಬಾಲ್ಯದಲ್ಲಿ ಇಂಥ ಸಂಘಗಳೂ, ಅವರು ನಡೆಸುವ ಕಾರ್ಯಕ್ರಮಗಳೂ ಇಲ್ಲದೇ ಹೋಗಿದ್ದರೆ ನನಗೆ ಸಾಹಿತ್ಯದಲ್ಲಿ ಇರುವ ಆಸಕ್ತಿ ಕಮರಿಹೋಗುತ್ತಿತ್ತು. ಯಾಕೆಂದರೆ ನನ್ನ ಸುತ್ತಲಿನ ಜನ ಅದನ್ನೊಂದು ನಿಷ್ಪ್ರಯೋಜಕವಾದ ಕೆಲಸವೆಂದು ಭಾವಿಸಿದ್ದರು ಮಾತ್ರವಲ್ಲ, ಅದನ್ನು ಅವಹೇಳನಕಾರಿಯಾಗಿಯೂ ನೋಡುತ್ತಿದ್ದರು. ದುಡ್ಡು ಮಾಡಲು ಸಹಾಯ ಮಾಡದ ಯಾವ ಕೆಲಸವೂ ಪ್ರಯೋಜನವಿಲ್ಲದ್ದೆಂದು ಭಾವಿಸಿಕೊಂಡವರು ಸುತ್ತಲೂ ಇದ್ದರೂ, ಇಂಥ ಕೂಟಗಳಲ್ಲಿ ಸೇರುವ ಮಂದಿಯನ್ನು ಕಂಡಾಗ ಒಂದು ರೀತಿಯ ವಿಶ್ವಾಸ ಉಂಟಾಗುತ್ತಿತ್ತು. ಬೇರೆ ರೀತಿಯ ಯೋಚನೆ ಮಾಡುವ ಜನ ಇದ್ದಾರೆ, ನಾನು ಮಹತ್ವದ್ದೆಂದು ಭಾವಿಸಿದ್ದನ್ನು ಅವರೂ ಗೌರವಿಸುತ್ತಾರೆ ಎಂಬ ಭಾವನೆ ವಿಚಿತ್ರವಾದ ಆತ್ಮವಿಶ್ವಾಸವನ್ನು ಕೊಡುತ್ತಿತ್ತು. ಇದು ಕೇವಲ ಸಾಹಿತ್ಯ ಮಾತ್ರವಲ್ಲ, ಎಲ್ಲ ಕಲಾಪ್ರಕಾರಗಳಿಗೂ ಇರುವ ತೊಂದರೆ ಮತ್ತು ಅಪಾಯ.

ಈತನಿಗೆ ಸಾಹಿತ್ಯದಲ್ಲಿ ಆಸಕ್ತಿಯಿದೆ, ಈತ ಬರೆಯುತ್ತಾನೆ ಎಂದೊಡನೆ ಅದರ ಗಂಧಗಾಳಿಯಿಲ್ಲದ ಜನ ಮಾತ್ರವಲ್ಲ, ಅದರ ಬಗ್ಗೆ ಅಲ್ಪ ಸ್ವಲ್ಪ ತಿಳಿದುಕೊಂಡವರು ಕೂಡ ಮೊದಲು ಕೇಳುವ ಪ್ರಶ್ನೆಯೆಂದರೆ, ಒಂದು ಕತೆ ಅಥವಾ ಕವಿತೆ ಬರೆದರೆ ಎಷ್ಟು ದುಡ್ಡು ಸಿಗುತ್ತದೆ ಅನ್ನುವುದು. ನನ್ನ ಅನೇಕ ಸ್ನೇಹಿತರು ಸಾಹಿತ್ಯದ ಅಭಿಮಾನದಿಂದಾಗಿ ಸುಳ್ಳು ಹೇಳುವುದನ್ನೂ ಕೇಳಿದ್ದೇನೆ. 'ಅದು ಮುಖ್ಯವಲ್ಲ' ಎಂದು ಆ ಬರಹಗಾರ ಹೇಳತೊಡಗಿದೊಡನೆ ಅದು ಕ್ಲೀಷೆಯಾದ ಸಮರ್ಥನೆಯತ್ತ ಹೋಗತೊಡಗುತ್ತದೆ. ಎದುರಿಗಿರುವ ವ್ಯಕ್ತಿ ನಿಸ್ಸನ್ನು ನಾನು ಅಳೆದಾಯಿತು ಎಂಬ ರೀತಿಯಲ್ಲಿ ತಲೆಯಾಡಿಸಲು ತೊಡಗುತ್ತಾನೆ. ಇಂಥ ಒಂದು ಅವಗಣನೆಯಿಂದ ಕಾಪಾಡಿಕೊಳ್ಳಲು ದೃಢವಾದ ಒಳ ಬೆಂಬಲ ಬೇಕು. ಇತರ ಆಸಕ್ತಿಗಳಂತೆ ಇದನ್ನು ಪೋಷಿಸಲು ಕೂಡ, ಪರಿಶ್ರಮ ಮತ್ತು ಸಮಯದ ಅಗತ್ಯವಿದೆ. ಈ ಪ್ರಯತ್ನ ಸಾರ್ಥಕ ಅನಿಸುವಂತೆ ಮಾಡುವಲ್ಲಿ ಸಹೃದಯ-ಸಮಾನ ಮನಸ್ಕರ ಕೂಟಗಳು ಸಹಾಯ ಮಾಡುತ್ತವೆ. ಇವುಗಳಿಂದ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಅಭಿಮಾನವನ್ನೂ, ತಮ್ಮ ಆಸಕ್ತಿಯ ಬಗ್ಗೆ ಹೆಮ್ಮೆಯನ್ನೂ ಬೆಳೆಸಿಕೊಳ್ಳಲು ಸಾಧ್ಯವಿದೆ. ■



ಸುಮಾ ಎಂಬಾರ್

# ಬಿಡುಗಡೆ

ವಸುಧಾ ಅವಸರದಲ್ಲಿ ಚೂಡಿದಾರ್ ಪೈಜಾಮಾ ಏರಿಸಿ, ವೈಲ್ ಮೇಲೆಸೆದು, ಸ್ನಾನಕ್ಕೆ ಕಟ್ಟಿದ್ದ ಕೂದಲ
ಗಂಟು ಬಿಚ್ಚಿ, ಅಷ್ಟೇ ಸ್ಪೀಡಿನಲ್ಲಿ ಬಾಚಣಿಗೆಯಿಂದ ರಪರಪನೆ ಬಾಚಿ, ಒಂದು ಕ್ಲಿಪ್‌ಸೊಟ್ಟಿಗೆ ಸಿಗಿ
ಹಣೆಗೊಂದು ಬಿಂದಿಯಿಟ್ಟು, ಅಡಿಗೆಮನೆಗೆ ಓಡಿದಳು. ಅರ್ಧ ಘಂಟೆಯ ಹಿಂದಷ್ಟೇ ಮಾಡಿಟ್ಟದ್ದ ಪಲಾ
ಆರಿ ತಣ್ಣಗಾಗಿತ್ತು. ಅದನ್ನು ತಟ್ಟೆಗೆ ಸ್ವಲ್ಪ ಸುರಿದುಕೊಂಡು, ಮೂರು ದೊಡ್ಡ ತುತ್ತು ನುಂಗಿ, ಮಿಕ್ಕಿದ್ದು ತ
ಸಮೇತ ಸಿಂಕಿನಲ್ಲಿ ಬಿಸಾಕಿ, ವ್ಯಾನಿಟಿ ಬ್ಯಾಗ್, ಸಂಜೆ ಬರುವಾಗ ತರಕಾರಿ ತರಲು ಇಟ್ಟುಕೊಂಡಿ
ದೊಡ್ಡಬಾಯಿನ ಬ್ಯಾಗ್ ಎರಡನ್ನೂ ಕಂಕುಳಲ್ಲಿ ಇರುಕಿಕೊಂಡು, ಕೀ ಎತ್ತಿಕೊಂಡು, ಎರಡೇ ನಿಮಿಷದ
ಮನೆಯಿಂದ ಆಚೆ ಇದ್ದಳು. ಚಪ್ಪಲಿ ಬಕಲ್ ಬಿಗಿಯುತ್ತಲೇ ಬಾಗಿಲಿಗೆ ಕೀ ತಿರುಗಿಸಿ, ಹೊರಗಾಗ
ನಿಲ್ಲಿಸಿದ್ದ ಕೈನೆಟಿಕ್‌ಗೆ ಬ್ಯಾಗು ನೇತು ಹಾಕಿ, ಸರಿಯಾಗಿ ಕೂರುವುದಕ್ಕೂ ಮೊದಲೇ ಸ್ಟಾರ್ಟ್ ಮಾ
ಹೊರಟ ವಸುಧಾ, ಆಫೀಸ್ ತಲುಪಿದ್ದು 10.40ಕ್ಕೆ.

ಇನ್ನು ಆ ಶಿಸ್ತಿನ ಪಿಶಾಚಿ ಬಾಸ್‌ನ ತಣ್ಣಗಿನ, "ಏನು ವಸುಧಾ? ಇಂದೂ 10 ನಿಮಿಷ ಟ್ರಾಫಿ
ಜಾಮ್‌ಲ್ಲಿ ಸಿಕ್ಕಬಿದ್ದಿರಾ?!" ಎಂಬ ನಯವಾದ ಬ್ಲೇಡಿನಂಥ ಕಾಮೆಂಟು ಕೇಳಬೇಕಲ್ಲ ಎಂ
ಮಾನಸಿಕವಾಗಿ ಸಿದ್ಧಳಾಗಿ, ತನ್ನ ಪಿ.ಎ. ಸೀಟಿನಲ್ಲಿ ಧೊಪ್ಪನೆ ಕುಳಿತಳು. ಈ ಹಾಳು ಗ್ಯಾಸ್ ಯಾವಾಗಲ
ಬೆಳಗ್ಗೆಯೇ ಕೈಕೊಡಬೇಕೆ? ರಾತ್ರಿ ಮುಗಿದು ಹೋಗಲು ಏನು ಧಾಡಿ? ಕುಕ್ಕರ್ ಒಮ್ಮೆ ಕೂಗಿದ ಮೇಲೆಯ
ಇದಕ್ಕೆ ಖಾಲಿಯಾಗಿದ್ದೇನೆಂಬ ಜ್ಞಾನೋದಯವಾಗುವುದು, ದರಿದ್ರದ್ದು. ಮತ್ತೆ ಸ್ಪೇರ್ ಸಿಲಿಂಡರ್ ಒ
ತಂದು, ಫಿಟ್ ಮಾಡಿ, ಟೆಸ್ಟ್ ಮಾಡಿ, ಸ್ಟೋವ್ ಮತ್ತೆ ಹಚ್ಚುವುದರಲ್ಲಿ ಹೇಗೋ ಲೇಟಾಗಿಬಿಡುತ್ತದೆ. ಮತ್ತೆ
ಬಾಸ್‌ನ ಪಿರಿಪಿರಿ... ಬೆಳಗ್ಗೆಯೇ ಮೂಡು ಹಾಳು ಎಂದೆಲ್ಲಾ ಯೋಚನೆ ಮಾಡುತ್ತಿರುವಾಗಲೇ ವಸುಧಾ
ಹೊರಡುವಾಗ ಬಾತ್‌ರೂಮ್‌ಗೆ ಹೋಗಲು ಮರೆತದ್ದು ಹೊಳೆಯಿತು. ಇನ್ನೂ attendanceಗೆ ಸೈ
ಹಾಕಿ, ಬಾತ್‌ರೂಮ್ ಇರುವ ಗ್ರೌಂಡ್ ಫ್ಲೋರ್‌ಗೆ ಹೊರಡಬೇಕೆಂದುಕೊಳ್ಳುವಷ್ಟರಲ್ಲೇ ಸುತ್ತ
ನಿಶ್ಶಬ್ದವಾಗಿರುವುದು ಗಮನಕ್ಕೆ ಬಂದು ನೋಡಿದರೆ, ಟೀ ಹುಡುಗ, ಅಟೆಂಡರ್ ಮಾದಯ್ಯ, ಹಾಗ
ಗುಡಿಸುವವಳನ್ನು ಬಿಟ್ಟು ಇನ್ನೂ ಯಾರೂ ಬಂದೇ ಇಲ್ಲ. ಅರೇ, ಇದೇನು ನನ್ನ ಗಡಿಯಾರ ಫಾಸ್ಟ್ ಇದೆಯ
ಎಂದು ಅಚ್ಚರಿಯಿಂದ ಗೋಡೆ ನೋಡಿದರೆ, ಆಗಲೇ 11 ಘಂಟೆ. ಇದೇನೆಂದು ಅರ್ಥವಾಗದೆ ಅಟೆಂಡ
ಕಡೆಗೆ ಪ್ರಶ್ನಾರ್ಥಕವಾಗಿ ನೋಡಿದಳು.

"ಮೇಡಂ, ನೀವು ಬಂದ ಕೂಡಲೇ ಒಳಗೆ ಕಳಿಸಲು ಹೇಳಿದರು ಸಾಹೇಬರು" ಎಂದುಲಿದ ಅವನ
ವ್ಯಾನಿಟಿ ಬ್ಯಾಗ್ ಪುನಃ ಡ್ರಾದಲ್ಲಿಟ್ಟು ಫೈಲ್ಸ್, ಪೇಪರ್, ಪೆನ್‌ಸೊಂದಿಗೆ ಬಾಸ್‌ನ ಛೇಂಬರ್ ಒಳ
ಅಳುಕುತ್ತಲೇ ಅಡಿಯಿಟ್ಟಳು. ಎದೆ ಧಸ್ಸೆಂದಿತು. ಅಲ್ಲಿ ಬಾಸ್, ಹೆಡ್ಡಾಫೀಸಿನಿಂದ ಬಂದಿದ್ದ ಎಂ.ಡಿ., ಅವ
ಪಿ.ಎ., ಇಲ್ಲಿಯ ಎಲ್ಲ ಸಹೋದ್ಯೋಗಿಗಳು ಸೇರಿ ಕವಕವನೆ ಪಾಪ್‌ಕಾರ್ನ್ ಹುರಿದಂತೆ ಮಾತಾಡುತ್ತಿದ್ದಾ
ಬಾಸ್ ಇಸ್ಸಷ್ಟು ಶಿಸ್ತಾಗಿ ತಲೆಬಾಚಿ, ಟೈ ಪಿನ್ನು ಫಳಕ್ಕನಿಸಿಕೊಂಡು ಎಂ.ಡಿ. ಜೊತೆ ತಲೆಯಾಡಿಸು



ಕುಳಿತಿದ್ದಾರೆ. ಏನು ವಿಷಯ ಎಂದು ಅರ್ಥವಾಗದಿದ್ದರೂ, ಖಾಲಿಯಿದ್ದ ಒಂದು ಚೇರ್‌ನಲ್ಲಿ ಹೋಗಿ ಕುಳಿತು, ತಾನೂ ಪಕ್ಕದಲ್ಲಿದ್ದ ರತ್ನಳ ಜೊತೆ ಮಾತಾಡಲು ಬಾಯ್ತೆಗೆದಳು. ಅಷ್ಟರಲ್ಲಿ ಬಾಸ್ ಗಂಟಲು ಸರಿಪಡಿಸಿಕೊಂಡು, ಸಿಂಹಾವಲೋಕನ ಮಾಡಿ, 'ಡಿಯರ್ ಕೊಲೀಗ್ಸ್, ಎಂ.ಡಿ. ನಮ್ಮ ಬ್ರಾಂಚ್‌ಗೆ ಬರುತ್ತಿರುವುದು ಇದೇ ಮೊದಲಲ್ಲ. ಹಿಂದೆ ವಿಜಯನಗರ ಬಡಾವಣೆಯ ಬಾಡಿಗೆ ಕಟ್ಟಡದಲ್ಲಿ, ನಾನು ಈ ಬ್ರಾಂಚ್‌ನ ಅಸಿಸ್ಟೆಂಟ್ ಮ್ಯಾನೇಜರ್ ಆಗಿದ್ದಾಗ ಇವರು ಅಲ್ಲಿಗೆ ಬಂದಿದ್ದರು. ನಮ್ಮ ಈ ಸ್ವಂತ ಬಿಲ್ಡಿಂಗ್‌ಗೆ ಆಫೀಸ್ ಶಿಫ್ಟಾದಾಗ ಉದ್ಘಾಟನೆಗೂ ಬಂದಿದ್ದರಲ್ಲ. ಈಗ ಬಂದಿರುವ ವಿಷಯ ಒಂದು ಹೊಸ ಸಂತೋಷದ ಸುದ್ದಿ ತಿಳಿಸಲು! ನಮ್ಮ ಈ ಕಟ್ಟಡದ ರಚನೆ (ಸ್ಟ್ರಕ್ಚರ್) ಬದಲಾಯಿಸಿ, ಇನ್ನಷ್ಟು ಆಕರ್ಷಕವಾಗಿ facelift ಕೊಟ್ಟು, ನಮ್ಮ ಸಂಸ್ಥೆಯ ಧ್ಯೇಯ, ವಹಿವಾಟು, ವಿಧಾನಗಳನ್ನು ಮುಖ್ಯಕಟ್ಟಡದ ರಚನೆಯಲ್ಲೇ ವ್ಯಕ್ತವಾಗುವಂತೆ ಮಾಡುವುದು ಈಗಿನ ಅಜೆಂಡಾ. ಇದಕ್ಕೆ ನಿಮ್ಮೆಲ್ಲರ ಅಭಿಪ್ರಾಯ ಶೇಖರಿಸಿಕೊಂಡು interior decoration ಕೂಡಾ ಸೇರಿದಂತೆ-ಯಾವ ಯಾವ ವಿಭಾಗ ಎಲ್ಲೆಲ್ಲಿರಬೇಕೆಂದು ಚರ್ಚಿಸಲು ಬಂದಿದ್ದಾರೆ. ನೀವೆಲ್ಲ ಈ ರಿನೊವೇಷನ್ ಕಾರ್ಯಕ್ಕೆ ಸಹಕರಿಸಬೇಕು'' ಎಂದು ಟೈ ಮತ್ತೆ ಸರಿಮಾಡಿಕೊಂಡು ಎಂ.ಡಿ. ಕಡೆ ನೋಡಿದರು. ಎಂ.ಡಿ., ತಮ್ಮ ಕೊಲ್ಗೆಟ್ ನಗೆಯೊಂದಿಗೆ ಎಲ್ಲರನ್ನೂ ನೋಡಿ, ಮೊದಲು ಮಹಿಳೆಯರ ಅಭಿಪ್ರಾಯ ಕೇಳೋಣ, ''ಲೇಡೀಸ್ ಫಸ್ಟ್'' ಎಂದು ತಮ್ಮ ಜೆಂಟಲ್‌ಮನ್‌ತನವನ್ನು ಸಾಬೀತುಪಡಿಸಿದರು.

ತಕ್ಷಣ ಕವಿದ ನಿಶ್ಯಬ್ದದಲ್ಲಿ ಎಲ್ಲರೂ ಆಚೀಚೆ ನೋಡುವಾಗ ವಸುಧಾ ಗೋಡೆ ಕಡೆ ತಿರುಗಿದಳು. ಗೋಡೆಯ ಮೇಲಿನ ಕ್ಯಾಲೆಂಡರ್‌ನಲ್ಲಿ ಸುಂದರ ಯುವತಿಯೊಬ್ಬಳು ಶವರ್ ಕೆಳಗೆ ನಿಂತು ಸ್ನಾನ ಮಾಡುತ್ತಿರುವ ದೃಶ್ಯ-ಬಾತ್‌ರೂಮ್ ಟೈಲ್ಸ್ ಕಂಪೆನಿಯವರು ಜಾಹೀರಾತಿಗೆಂದು ತಯಾರಿಸಿದ ಕ್ಯಾಲೆಂಡರ್-ನಲಿಯುತ್ತಿತ್ತು. ಬಾತ್‌ರೂಮ್ ಚಿತ್ರ ನೋಡಿದ ಕೂಡಲೇ ತಾನಿನ್ನೂ ಬಾತ್‌ರೂಮ್‌ಗೇ ಹೋಗಲಾಗದಿರುವುದು ನೆನಪಾಗಿ ಕೂತಲ್ಲೇ ಹೊಸಕಾಡಿದಳು. ಈ ಹಾಳು ಮೀಟಿಂಗು ಇನ್ನೂ ಎಷ್ಟು ಹೊತ್ತೋ? ಏನೇನು ಚರ್ಚೆ ಮಾಡಿ, ಪ್ಲಾನ್ ಹಾಕಿ, ಗೆರೆ ಎಳೆದು, ಚಿತ್ರ ಬರೆದು ಅದಕ್ಕೆ ಎಂ.ಡಿ. ಅಸ್ತು ಎಂದು, ನಂತರ ತಾನು ಅದರ ಫೇರ್ ಕಾಪಿ ಮಾಡಿ... ಅಷ್ಟು ಹೊತ್ತಿಗೆ ಮಧ್ಯಾಹ್ನವಾಗಿರುತ್ತೆ. ಈಗಲೇ ಎದ್ದು, ಹೋಗಿ ಬಂದುಬಿಡಲೇ ಎಂದು ಯೋಚಿಸಿದಳು.

''ಸರಿ, ನೀವೇನಂತೀರಿ, ರತ್ನ ಮತ್ತು ವಸುಧಾ?'' ಎಂಬ ಬಾಸ್‌ನ ಮಾತಿಗೆ ಬೆಚ್ಚಿ, ಎದ್ದು ಹೋಗು ವಿಷಯ ಕೈ ಬಿಟ್ಟಳು. ಸದ್ಯ ಗ್ರೌಂಡ್ ಫ್ಲೋರ್‌ನಲ್ಲಿರುವ ಬಾತ್‌ರೂಮ್‌ಗೆ ಹೋಗಿ ಬರಲು 10-1 ನಿಮಿಷವಾದರೂ ಬೇಕು. ಈಗಲೇ ತಡವಾಗಿ ಬಂದದ್ದು ಬಾಸ್ ಕಣ್ಣಿಗೆ ಬಿದ್ದಿರುವಾಗ, ಈಗ ಎದ್ದು ಹೋದ ನಂತರ ಬುಲಾವ್ ಗ್ಯಾರಂಟಿ ಎಂದು ಅರ್ಥವಾಗಿ, ಸುಮ್ಮನೆ ಹಲ್ಲುಬಿಟ್ಟಳು.

''ಸಾರ್, ಪೋಸ್ಟ್‌ಮ್ಯಾನ್ 1ನೇ ಫ್ಲೋರ್‌ಗೆ ಬಂದು ರಿಜಿಸ್ಟರ್ ಪೋಸ್ಟ್ ಕೊಡಲು ದಿನ ಕಿರಿಕಿರಿಮಾಡುತ್ತಾನೆ. ನನಗೂ ತೊಂದರೆ. ಕೆಳಗೇ ನಮ್ಮ ಡಿಸ್‌ಪ್ಯಾಚ್ ಸೆಕ್ಷನ್ ಇದ್ದರೆ, ನಮ್ಮ ಕೆಲ ಸುಲಭವಾಗುತ್ತದೆ'' ಎಂದಳು ರತ್ನ.

''ಮತ್ತೆ, ಕೆಳಗಿರುವ ಕಂಪ್ಯೂಟರ್ ರೂಂ ಅನ್ನು ಮೇಲಕ್ಕೆ ವರ್ಗಾಯಿಸಬೇಕು, ಸ್ವಲ್ಪ ಹಿಂದಕ್ಕೆ ಇರು ರೂಮ್‌ನಲ್ಲಿ ಎ.ಸಿ. ಅಳವಡಿಸಿದರೆ, ಈ ಟ್ರ್ಯಾಫಿಕ್‌ನ ಅಸಾಧ್ಯ ಧೂಳಿನಿಂದ ಸ್ವಲ್ಪ ಬಿಡುಗಡೆ ಸಿಗುತ್ತ ನಮ್ಮಾಫೀಸಿನ ಎಲ್ಲ ಕಂಪ್ಯೂಟರ್‌ಗಳೂ ಕಿರೀಕು ಮಾಡುವುದೇ ಆ ಧೂಳಿನಿಂದ'' ಎಂದು ದೂರಿದ ವರಲಕ್ಷ್ಮಿ.

ಇಷ್ಟೆಲ್ಲ ಚರ್ಚೆ ನಡೆಯುತ್ತಿರುವಾಗ, ತಡೆಯಲಾರದೆ ವಸುಧಾ, ಒಮ್ಮೆ ಬಾಸ್ ಮುಖದ ಕಡೆ, ಒ ಮಿಕ್ಕವರತ್ತ ನೋಡಿದಳು. ಅವರ್ಯಾರ ಗಮನವೂ ತನ್ನ ಮೇಲೆ ಇಲ್ಲವೆಂದು ಗೊತ್ತಾದಾಗ, ಬಾ ಛೇಂಬರ್‌ಗೆ ಅಂಟಿಕೊಂಡಿದ್ದ ಆ್ಯಂಟಿರೂಮ್ ಗಮನಿಸಿದಳು. ಹೌದು, ಇಲ್ಲೇ ಇದೆಯಲ್ಲ ನನ್ನ ಚೇರ್ ಪಕ್ಕದಲ್ಲೇ? ಇಲ್ಲೇ ನುಗ್ಗಿ 2 ನಿಮಿಷಕ್ಕೆ ಕೆಲಸ ಮುಗಿಸಿ ಬರುವಾ ಎಂದು ಯೋಚಿಸಿ, ಮೆಲ್ಲಮೆಲ್ಲಗೆ ಚೇ ಸರಿಸಿ ಎದ್ದು, ಏನೋ ಫೈಲ್ ನೋಡುವವಳಂತೆ ನಟಿಸಿ, ಎರಡು ಹೆಜ್ಜೆ ಆ ಕಡೆಗೆ ಹಾಕಿದಳು. ಬಾಸ್‌ನ ಆ್ಯಂ ಛೇಂಬರ್‌ನ ಬಾಗಿಲು ಸ್ವಲ್ಪವೇ ಸರಿಸಿ ನೋಡಿದ ಕೂಡಲೇ ಶಾಕ್ ಆಯಿತು! ಒಳಗೆ, ಗಂಡಸ ಉಪಯೋಗಿಸುವ ಎತ್ತರದಲ್ಲಿಟ್ಟಿರುವ ಕಮೋಡ್ ಮಾತ್ರವೇ ಇರುವುದು. ಅತೀವ ನಿರಾಶೆ, ಕೋಪದಿಂ ಸ್ವಲ್ಪ ಜೋರಾಗಿಯೇ ಬಾಗಿಲು ಮುಚ್ಚಿ, ಪುನಃ ಬಂದು ಕೂತಳು. ಅಲ್ಲಾ, ಈ ಬಾಸೇನು ಇಲ್ಲಿಂ ವರ್ಗವಾಗುವುದೇ ಇಲ್ಲವ? ಇಲ್ಲಿಗೆ ಯಾವಳಾದರೂ ಲೇಡಿ ಮ್ಯಾನೇಜರ್ ಬಂದರೆ ಅವಳ ಗತಿ ಏನು ಎಂದು ಯೋಚಿಸುತ್ತಿದ್ದಂತೆ ನಗು ಬಂತು, ನಗಲೂ ಸಾಧ್ಯವಾಗದೆ ಒಳಗಿನ ಒತ್ತಡದ ಅರಿವಾಗಿ ಹಲ್ಲುಕಚ್ಚಿ ಸುಮ್ಮನಾದಳ

ಚಂದನಳ ಆರ್ಗ್ಯುಮೆಂಟ್ ಸಾಗಿತ್ತು: ''ಹೊರಗಡೆ ವಿಕಾರವಾಗಿ ಜೋಪಡಿಯಂತೆ ಕಟ್ಟಿರುವ ವೆಹಿಕ ಪಾರ್ಕಿಂಗ್ ಶೆಡ್ ಅನ್ನು ಪಕ್ಕದ ಕಾಂಪೋಂಡ್ ಕಡೆಗೆ ವರ್ಗಾಯಿಸಬೇಕು. ಪೋರ್ಟಿಕೋ ಒಳಗೆ ಬರಲ ಆಗದಷ್ಟು, ಜನ ಈ ಕಟ್ಟಡದ ಮುಂಬಾಗಿಲಲ್ಲಿ ಸರ್ರ‌ಭರ್ರನೆ ಗಾಡಿ ನುಗ್ಗಿಸುತ್ತಾರೆ... ಜೊತೆಗೆ, ಒಳ್ಳೆಂ ಫೇಸ್‌ಲಿಫ್ಟ್ ಬರಬೇಕಾದರೆ ಸ್ವಲ್ಪವಾದರೂ ಗಾರ್ಡನ್ ಇರಬೇಡವೇ?''

ವಸುಧಾಗೆ ರೇಗಿಹೋಯಿತು. ಇವರೇನು, ಬರೀ ಆಫೀಸ್ ಹಾಲ್, ಕಂಪ್ಯೂಟರ್ ರೂಮು, ವೆಹಿಕ ಪಾರ್ಕಿಂಗ್ ಬಗ್ಗೆಯೇ ಮಾತಾಡುತ್ತಾ ಇರುತ್ತಾರೋ ಅಥವಾ ಲೇಡೀಸ್ ರೂಮ್ ಬಗ್ಗೆಯ ಮಾತಾಡುತ್ತಾರೋ ಎಂದು ಕಿಡಿಕಿಡಿಯಾದಳು. ಇದಕ್ಕೆ ಕಾರಣವೂ ಇತ್ತು. ಇವರ ಆಫೀಸ್‌ಗೂ, ಸೆಕೆಂಡ ಫ್ಲೋರ್‌ನಲ್ಲಿದ್ದ ಕೋ-ಆಪರೇಟಿವ್ ಬ್ಯಾಂಕ್‌ನ ಆಫೀಸ್‌ಗೂ ಕಾಮನ್ ಆದ ಬಾತ್‌ರೂಮ್‌ಗಳು ಇದ್ದದ್ ಅಲ್ಲಿಯ ಮಹಿಳಾ ಉದ್ಯೋಗಿಗಳು ಜಾಸ್ತಿಯಿದ್ದುದರಿಂದ, ಇರುವ ಎರಡು ಬಾತ್‌ರೂಮ್ ಅವ ಉಪಯೋಗಿಸಲು ಶುರುಮಾಡಿದರೆ, ವಸುಧಾನ ಆಫೀಸಿನಲ್ಲಿದ್ದ ಈ ನಾಲ್ಕು ಸ್ತ್ರೀಯರಿಗೂ ಅವಕಾಶವ ಸಿಗುತ್ತಿರಲಿಲ್ಲ. ಜೊತೆಗೆ ಅದರ ಪಕ್ಕದಲ್ಲೇ ಇದ್ದ ಪುರುಷರ ಬಾತ್‌ರೂಮ್‌ನಿಂದ ಯಾವಾಗಲೂ ಸಿಗರೇಟ ಹೊಗೆ, ಕೆಟ್ಟ ಜೋಕುಗಳು, ಹೆಂಗಸರ ಬಗ್ಗೆ ಕಮೆಂಟುಗಳ ಸರಮಾಲೆಯೇ ಹರಿದುಬರುತ್ತಿತ್ತು. ಹೀಗಾ ಬಾತ್‌ರೂಮ್‌ಗೆ ಹೋಗುವುದೇ ಒಂದು ಮುಜುಗರ.

ಈಗ ಗಂಡಸರ ಸರದಿ!

ಸೂಪರಿಂಟೆಂಡೆಂಟ್ ರಾಮಮೂರ್ತಿ ಕನ್ನಡಕ ಮೇಲೇರಿಸಿಕೊಂಡು ಹೇಳುತ್ತಿದ್ದರು: ''ಈ ಕಾಲದ ಟ್ರೆಂಡೇ ಬೇರೆ ಸಾರ್. ಏನು ಉದ್ಯೋಗಿಗಳೋ, ಒಂದು ಶಿಸ್ತಿಲ್ಲ, ಟೈಮಿಲ್ಲ, ನಮ್ಮಾಫೀಸೇ ಸ್ವಲ್ಪ ವಾಸಿ. ಎದುರುಗಡೆಯ 'ಡಾಟ್ ಕಾಂ' ಆಫೀಸ್ ನೋಡಿ. ಗಂಡು, ಹೆಣ್ಣು ಎಲ್ಲರೂ ಮಾಸಲು ಜೀನ್ಸ್, ಬ್ಯಾಗೀ ಷರ್ಟ್ ಧರಿಸಿಯೇ ಬರುತ್ತಾರೆ. ಮತ್ತೆ ಯಾವಾಗಂದರಾವಾಗ ಒಳಗೂ, ಹೊರಗೂ ಸುತ್ತುತ್ತಲೇ ಇರುತ್ತಾರೆ. ಆದರೂ 9 ಘಂಟೆಯವರೆಗೆ ಕೆಲಸ ಮಾಡುತ್ತಾರಂತೆ, ಏನಾಶ್ಚರ್ಯ!'' ಎಂದು ಉದ್ಗರಿಸುವಾಗ, ರತ್ನ ಬಾಗಿ ವಟಗುಟ್ಟಿದ್ದಳು, ''ಆ ಆಫೀಸಿನ ಒಳಗೆಯೇ ಇನ್-ಡೋರ್ ಕಿಚನ್ ಕೂಡ ಇದ್ದು, ಅಲ್ಟ್ರಾ ಮಾರ್ಡನ್ ಕಂಫರ್ಟ್ ಕೊಟ್ಟಿದ್ದಾರೆ ಎಂದು ಈ ಮುದಿಗೆ ಗೊತ್ತಿಲ್ಲ!'' ಅಂತ.

ಒಟ್ಟಿನಲ್ಲಿ ವಸುಧಾಗೆ ಇನ್ನೂ ಮುಕ್ತಿ ಇಲ್ಲ. ಗಡಿಯಾರ ನೋಡಿದಳು. ಆಗಲೇ 12 ಘಂಟೆ. ಚರ್ಚೆ ಒಂದು ಸುತ್ತಿನ ಕೊನೆಗೆ ಬರುತ್ತಿರುವ ಸೂಚನೆ ಕಂಡಿತು. ಆದರೂ ಇನ್ನೂ ಬಾತ್‌ರೂಮ್, ಲೇಡೀಸ್ ರೂಮ್‌ನ ವಿಷಯವೇ ಬರಲಿಲ್ಲವಲ್ಲ? ಎಂದುಕೊಂಡಳು, ಅಷ್ಟರಲ್ಲಿ ಬಾಸ್, ''ಈಗಿರುವ ಬಾತ್‌ರೂಮ್, ಪೋರ್ಟಿಕೋದಿಂದ ನೇರ ಕಾಣುವಂತಿದೆ, ಗ್ರೌಂಡ್ ಫ್ಲೋರ್‌ನಲ್ಲಿ ಅದಕ್ಕೆ ಜಾಗವೇ ಇಲ್ಲ. ಪ್ಯಾಸೇಜ್ ಇದರಿಂದ ತುಂಬ ಇಕ್ಕಟ್ಟು. ಆದ್ದರಿಂದ ಅದನ್ನು ಈಗ ಹೊಸದಾಗಿ ಕಟ್ಟುವ ಕಟ್ಟಡದ ಹಿಂಭಾಗದಲ್ಲಿ, ಗ್ಯಾರೇಜಿನ ಪಕ್ಕದಲ್ಲಿ ಕಟ್ಟಿಸಿಬಿಟ್ಟರೆ ಹೇಗೆ?'' ಎಂದು ಅಪ್ಪಣೆಕೊಟ್ಟರು.

ವಸುಧಾಗೆ ಮೈ ಬೆಂಕಿಯಾಯಿತು. ಈಗಲೇ ಕೆಳಗಿಳಿದು ಹೋಗಿಬರಲು 15 ನಿಮಿಷ ಬೇಕಾಗುತ್ತಿದೆ. ಇನ್ನು ಗ್ಯಾರೇಜ್ ದಾಟಿಕೊಂಡು ಯಾವ ಕಾಲಕ್ಕೆ ಹೋಗಿಬರುವುದು?

ಶೋಭ ಹೇಳಿದಳು, ''ಪ್ರತಿ ಫ್ಲೋರ್‌ನಲ್ಲೂ ಒಂದೊಂದು ಬಾತ್‌ರೂಮ್ ಕಟ್ಟಿಸಿದರೆ ಒಳ್ಳೆಯದು. ಈಗೀಗ ತುಂಬಾ ರಷ್ ಆಗುತ್ತಿದೆ. ಅಲ್ಲದೆ ನಮ್ಮ ಜೊತೆ ಕಾಂಪಿಟೇಶನ್‌ಗೆ ಆ ಕೋ-ಆಪರೇಟಿವ್ ಬ್ಯಾಂಕ್‌ನವರು ಬರುವುದು ಕಮ್ಮಿಯಾಗುತ್ತದೆ.''

ಮತ್ತೆ ಚರ್ಚೆ ಶುರುವಾಯಿತು. ಬಾತ್‌ರೂಮ್ ಎಲ್ಲಿರಬೇಕು? ಲೇಡೀಸ್ ಬಾತ್‌ರೂಮ್, ಜೆಂಟ್ಸ್ ಬಾತ್‌ರೂಮ್ ಎರಡೂ ಪಕ್ಕ ಪಕ್ಕ ಇದ್ದರೆ ಏನು ತಪ್ಪು? ಫಸ್ಟ್ ಫ್ಲೋರ್‌ನಲ್ಲಿ ಬಾತ್‌ರೂಮ್ ಇದ್ದರೆ ಅಲ್ಲಿಗೆ ನೀರು ಏರುವುದಿಲ್ಲ, ವೃಥಾ ಮೋಟಾರ್, ಟ್ಯಾಂಕ್ ಎಲ್ಲಕ್ಕೂ ಖರ್ಚು. ಮತ್ತು ಪ್ರತಿ ಫ್ಲೋರ್‌ನಲ್ಲೂ ಸ್ಪೇಸ್ ವೇಸ್ಟ್ ಆಗುತ್ತದೆ. ಇಷ್ಟಕ್ಕೂ ಸದಾ ಬಾತ್‌ರೂಮ್‌ಗೆ ಯಾರು ಹೋಗುತ್ತಾ ಇರುತ್ತಾರೆ? ಇರುವ ಇಷ್ಟು ಜನದಲ್ಲಿ? ಎಂಬೆಲ್ಲ ಚೆನ್ನದಂಥ ಸಲಹೆಗಳು ಗಂಡಸರಿಂದ ಬಂದವು. ಪಕ್ಕದಲ್ಲಿಯೇ 5 ನಿಮಿಷದ ನಡಿಗೆಯಲ್ಲಿ ಮನೆಯಿದ್ದ ವರಲಕ್ಷ್ಮಿ, ನಿರ್ಭಿಡೆಯಿಂದ ಉಗುರು ನೋಡಿಕೊಳ್ಳುತ್ತಾ ಕುಳಿತಳು.

ಇನ್ನು ಈ ವಿಷಯದ ಇತ್ಯರ್ಥವಾಗುವವರೆಗೆ ಎಂ.ಡಿ. ಏಳುವುದಿಲ್ಲ; ತಾವ್ಯಾರೂ ಏಳುವಂತೆ ಇಲ್ಲ ಎಂದು ವಸುಧಾಗೆ ಅರ್ಥವಾಯಿತು. ಈಗಾಗಲೇ ಎರಡು ರೌಂಡ್ ಟೀ, ಬಿಸ್ಕೆಟ್ ಮುಗಿಸಿ ಸ್ವಚ್ಛವಾಗಿ ಕಾಲಾಡಿಸುತ್ತಿದ್ದ ಬಾಸ್, ಅವಳನ್ನು ಕೇಳಿದರು, ''ಏನು ಮೇಡಂ, ನೀವೇನೂ ಹೇಳಲೇ ಇಲ್ಲ? ಬಾತ್‌ರೂಮ್ ಎಲ್ಲಿ ಕಟ್ಟಿಸುವುದೆಂದು ನೀವೇ ಹೇಳಿ. ನೀವು ತಾನೇ ಈ ಬ್ರಾಂಚ್‌ಗೆ ಸೀನಿಯರ್ ಮೋಸ್ಟ್ ಎಂಪ್ಲಾಯೀ?''

''ಸದ್ಯಕ್ಕೆ ಇಲ್ಲೇ, ಸೆಂಟ್ರಲ್ ಹಾಲ್‌ನ ಮಧ್ಯದಲ್ಲೇ ಬಾತ್‌ರೂಂ ಇದ್ದರೆ ಎಲ್ಲಾದಕ್ಕಿಂತ ವಾಸಿ'' ಎಂದವಳೇ ಬ್ಯಾಗೆತ್ತಿಕೊಂಡು, ಹೆಚ್ಚುಕಮ್ಮಿ ಹೊರಗೆ ಓಡಿದಳು ವಸುಧಾ.





ಸುಮಾ ಎಂಜಾಲ್





# ಸಂತ ಸಾನೆ ಗುರೂಜಿ

ಮರಾಠಿ ಭಾಷೆಯಲ್ಲಿ ಅನೇಕ ಜನ ಸಾಹಿತಿಗಳು, ಕತೆ, ಕಾದಂಬರಿ, ನಾಟಕ, ಪದ್ಯಗಳನ್ನು ಬರೆದಿದ್ದಾರೆ. ಪ್ರಖ್ಯಾತ ಸಾಹಿತಿ ಸಾನೆ ಗುರೂಜಿಯವರು ಕೇವಲ ಸಾಹಿತ್ಯ ರಚನೆ ಮಾಡಲಿಲ್ಲ. ಅವರು ಬರೆದಂತೆ ನಡೆದರು. ಅವರ ಜೀವನವು ಹಿಂದಿನ ಕಾಲದ ಋಷಿಗಳಂತೆ ತ್ಯಾಗ, ಕರುಣೆಗಳಿಂದ ಕೂಡಿ ಚಿರಂತನ ಸ್ಫೂರ್ತಿ ನೀಡುವಂತಿದೆ. ಎಂ.ಎ. ಪದವಿಯನ್ನು ಪಡೆದ ಮೇಲೆ ಸಾನೆಯವರು ಅಮಳ ತೀರದಲ್ಲಿರುವ ತತ್ವಜ್ಞಾನ ಮಂದಿರಕ್ಕೆ ಬಂದರು. ಅಲ್ಲಿಯ ವಾತಾವರಣವು ಅವರಿಗೆ ಒಗ್ಗಿತು. ಅದರ ಬಳಿಯಲ್ಲಿಯೇ ಒಂದು ಪ್ರೌಢಶಾಲೆಯಿತ್ತು. ಅಲ್ಲಿಯ ಶಿಕ್ಷಕರು ಆದರ್ಶ ಶಿಕ್ಷಕರಾಗಿದ್ದರು, ಶ್ರದ್ಧೆಯಿಂದ ಕೆಲಸಮಾಡುತ್ತಿದ್ದರು. ಆ ಸಂಸ್ಥೆಯಲ್ಲಿ ಹಣವಿರಲಿಲ್ಲ. ಆದರೆ ಕೆಲಸ ಮಾಡಬೇಕೆಂಬ ಉತ್ಸಾಹ, ಕಳಕಳಿಯಿದ್ದವು. ಸಾನೆಯವರು ಆ ಶಾಲೆಯಲ್ಲಿ ಶಿಕ್ಷಕರಾದರು. ಅಂದಿನಿಂದ ಅವರ ಜೀವನವೇ ಬದಲಾಯಿತು. ಅವರು ವಿದ್ಯಾರ್ಥಿಗಳ ವಸತಿಗೃಹದಲ್ಲಿ ವಾಸ ಮಾಡುತ್ತಿದ್ದರು. ಅಲ್ಲಿರುವ ವಿದ್ಯಾರ್ಥಿಗಳ ಪಾಲಕರಾದರು. ತಾಯಿಯಂತೆ ಮಕ್ಕಳನ್ನು ಪ್ರೀತಿಸಿದರು. ಆದ್ದರಿಂದ ಅವರು ಹೋದಕಡೆಯಲ್ಲೆಲ್ಲ ಮಕ್ಕಳು ಅವರ ಸುತ್ತಲೂ ನೆರೆಯುತ್ತಿದ್ದರು.

ಸಾನೆಯವರು ಅಂದಿನಿಂದ ಸಾನೆ ಗುರೂಜಿ ಆದರು. ಗಿಡದಲ್ಲಿಯ ಹೂಗಳನ್ನು ಕೂಡ ಅವರು ಕೊಯ್ಯುತ್ತಿರಲಿಲ್ಲ. ಹಾಗೆ ಮಾಡಿದರೆ ತಾಯಿ ಮಕ್ಕಳನ್ನು ಬೇರೆ ಮಾಡಿದಂತೆ ಎಂದು ಅವರು ಭಾವಿಸುತ್ತಿದ್ದರು.

ತಾಯಿಯ ಪ್ರೇಮವನ್ನು ವ್ಯಕ್ತಪಡಿಸುವ 'ಶ್ಯಾಮನ ತಾಯಿ' ಎಂಬ ಕಾದಂಬರಿ ಅವರಿಗೆ ತುಂಬ ಪ್ರಸಿದ್ಧಿ ಗಳಿಸಿಕೊಟ್ಟಿತು. ಕನ್ನಡದಲ್ಲಿಯೂ ಇದು ಜನಪ್ರಿಯವಾಗಿದೆ. ಅತ್ರೆಯವರು ಈ ಕಾದಂಬರಿಯನ್ನು ರಜತ ಪರದೆಯ ಮೇಲೆ ತಂದರು.

ಸಾನೆ ಗುರೂಜಿಯವರು ಮಹಾತ್ಮಾ ಗಾಂಧಿಯವರ ಪರಮ ಭಕ್ತರು. ಬಾಪೂ ಮಾತೆಂದರೆ ಅವರಿಗೆ ವೇದವಾಕ್ಯ. ಗಾಂಧೀಜಿಯವರ ಜೀವನವನ್ನು ಕತೆಗಳ ರೂಪದಲ್ಲಿ ಬರೆದಿದ್ದಾರೆ. ರವೀಂದ್ರನಾಥ ಠಾಕೂರರ 'ಸ್ವದೇಶಿ ಸಮಾಜ' ಎಂಬ ಪುಸ್ತಕವನ್ನು ಮರಾಠಿಗೆ ಅನುವಾದಿಸಿದ್ದಾರೆ. ಟಾಲ್‌ಸ್ಟಾಯ್ ಬರೆದ 'ಕಲೆಯೆಂದರೇನು' ಪುಸ್ತಕವನ್ನು ಹದಿನೈದು ದಿನಗಳಲ್ಲಿ ಭಾಷಾಂತರಿಸಿದ ಹೆಗ್ಗಳಿಕೆ ಸಾನೆಯವರದ್ದು. ಅವರು ಭಾರತೀಯ ಸಂಸ್ಕೃತಿಯ ಪರಮಭಕ್ತರು. ಸಂಸ್ಕೃತಿಯನ್ನು ಬರೆದು ವಿವರಿಸುವದರ ಜೊತೆಗೆ ಅದರಂತೆ ಬಾಳಿದವರು.

ಅತ್ಯಂತ ಸೂಕ್ಷ್ಮ ಪ್ರವೃತ್ತಿಯ ಸಾನೆಯವರು ಗಾಂಧೀಜಿಯವರನ್ನು ಗುಂಡಿಟ್ಟು ಕೊಂದ ಸುದ್ದಿಯನ್ನು ಕೇಳಿ ಆತ್ಮಹತ್ಯೆ ಮಾಡಿಕೊಂಡರು!

ಧಾರವಾಡ — ಅನಂತ ಕುಲಕರ್ಣಿ



# ಶಿಸ್ತು, ಸಂಯಮ ಕಲಿಸಿದ ಮೇಜರ್

ನಾನು ಗೌರೀಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಪ್ರಥಮ ಬಿ.ಎಸ್ಸಿ ಓದುತ್ತಿದ್ದಾಗ ಏಪ್ರಿಲ್ 94ರಲ್ಲಿ ಎನ್.ಸಿ.ಸಿ.ಯಿಂದ 'ಸಾಹಸ ಸೈಕಲ್ ಪ್ರವಾಸ'ವನ್ನು ಹಮ್ಮಿಕೊಂಡಿದ್ದರು. ನಾಲ್ಕು ರಾಜ್ಯಗಳಲ್ಲಿ ಒಟ್ಟು 2500 ಕಿ.ಮೀ. ಸೈಕಲ್‌ನಲ್ಲಿ ಕ್ರಮಿಸಿ, ಪರಿಸರ ಸಂರಕ್ಷಣೆಯ ಅರಿವು ಮೂಡಿಸುವುದು ಪ್ರವಾಸದ ಗುರಿಯಾಗಿತ್ತು.

ಆಗ ಎನ್.ಸಿ.ಸಿ. ಅಧಿಕಾರಿಗಳಾಗಿದ್ದ ಮೇಜರ್ ಎಚ್.ಎನ್. ನಾಗರಾಜ ರಾವ್‌ರವರ ನೇತೃತ್ವದಲ್ಲಿ ನಾವು ಹತ್ತು ವಿದ್ಯಾರ್ಥಿಗಳು ಹೋಗಿದ್ದೆವು. ಆರೋಗ್ಯದ ದೃಷ್ಟಿಯಿಂದ, ದಿನಾಲು ಮಾರ್ಗಮಧ್ಯದಲ್ಲಿ, ನೆನಸಿದ ಹೆಸರುಬೇಳೆ, ಒಣದ್ರಾಕ್ಷಿ, ಕಲ್ಲುಸಕ್ಕರೆ, ಸಕ್ಕರೆ ಬೆರಸಿದ ಮೊಸರು ಮುಂತಾದವುಗಳನ್ನು ನಾಗರಾಜ ರಾವ್ ನಮಗೆ ನೀಡುತ್ತಿದ್ದರು. ಒಂದು ದಿನ ಒಬ್ಬ ವಿದ್ಯಾರ್ಥಿಯು, ಮೊಸರಿನ ತೂಗು ಪಾತ್ರೆಯನ್ನು ಸೈಕಲ್‌ಗೆ ನೇತುಹಾಕಿಕೊಂಡು ವೇಗವಾಗಿ ಚಲಿಸುತ್ತಿದ್ದಾಗ, ಪಾತ್ರೆಯು ತುಳುಕಿ, ಸುಮಾರು ಅರ್ಧದಷ್ಟು ಮೊಸರು ಚೆಲ್ಲಿಹೋಗಿದ್ದರಿಂದ, ಉಳಿದರ್ಧವನ್ನು, ಅಧಿಕಾರಿಗಳ ಗಮನಕ್ಕೆ ತಾರದೆ, ಮೂವರು ವಿದ್ಯಾರ್ಥಿಗಳು ಸೇವಿಸಿಬಿಟ್ಟರು. ನಮ್ಮ ಮೇಜರ್ ಅವರು ಮಧ್ಯಾಹ್ನ ಊಟದ ನಂತರ, ಮರದಡಿಯಲ್ಲಿ ವಿಶ್ರಾಂತಿಯ ವೇಳೆ ಇದನ್ನು ಪ್ರಸ್ತಾಪಿಸಿ, ಇದಕ್ಕೆ ಮುಖ್ಯ ಕಾರಣಕರ್ತನಾದ ಒಬ್ಬ ವಿದ್ಯಾರ್ಥಿಗೆ, ''ನಿನ್ನ ಒಂಭತ್ತು ಸಹೋದರ-ಸ್ನೇಹಿತರಿಗೆ ಸೇರಬೇಕಾದ ಮೊಸರನ್ನು ನೀವು ಮೂವರು ಸೇವಿಸಲು ಹೇಗೆ ಮನಸ್ಸಾಯಿತು'' ಎಂದು ಪ್ರಶ್ನಿಸಿ, ಕಾದು ಕೆಂಡವಾಗಿದ್ದ ಟಾರ್ ರಸ್ತೆಯ ಮೇಲೆ ಇಪ್ಪತ್ತೈದು ಪಲ್ಟಿ ಹಾಕುವ ಶಿಕ್ಷೆ ನೀಡಿದಾಗ ಎಲ್ಲ ವಿದ್ಯಾರ್ಥಿಗಳ ಕಣ್ಣಾಲಿಗಳು ತುಂಬಿಬಂದವು. ಏಕೆಂದರೆ ಆ ವಿದ್ಯಾರ್ಥಿ ನಾಗರಾಜ ರಾವ್‌ರ ಸ್ವಂತ ಮಗನಾಗಿದ್ದ. ಇಂಥ ಹತ್ತಾರು ಘಟನೆಗಳಿಂದ ನ್ಯಾಯ, ನೀತಿ, ಕರ್ತವ್ಯ ನಿಷ್ಠೆ ಪ್ರಾಮಾಣಿಕತೆ, ಶಿಸ್ತು, ಸಂಯಮ ಮುಂತಾದ ಮಾನವೀಯ ಗುಣಗಳನ್ನು, ನಮ್ಮ ಮನದಾಳದಲ್ಲಿ ಅಚ್ಚೊತ್ತಿದ ಅವರು ನಿಜವಾಗಿಯೂ ಆದರ್ಶಪ್ರಾಯರು.

ಸಸಿ ನೆಡುವುದು, ನೇತ್ರದಾನ, ಸಾಕ್ಷರತಾ ಆಂದೋಲನ, ರಕ್ತದಾನ, ಸಮಾಜಸೇವೆ ಮುಂತಾದ ಕಾರ್ಯಚಟುವಟಿಕೆಗಳಿಗೆ ವಿದ್ಯಾರ್ಥಿಗಳನ್ನು ಪ್ರೇರೇಪಿಸಿ, ಮೌಲ್ಯಾಧಾರಿತ ತತ್ವಗಳನ್ನು ವಿದ್ಯಾರ್ಥಿಗಳಲ್ಲಿ ಬಿತ್ತುತ್ತಿದ್ದಾರೆ.

ನಾನು ಎನ್.ಸಿ.ಸಿ.ಯಲ್ಲಿದ್ದ ನಾಲ್ಕೂ ವರ್ಷಗಳಲ್ಲೂ ಇವರ ಜೊತೆಗಿನ ಗುರು-ಶಿಷ್ಯ ಸಂಬಂಧ ಅವಿಸ್ಮರಣೀಯ. ಪ್ರತಿ ಹಂತದಲ್ಲೂ, ಎಂಥ ಕ್ಲಿಷ್ಟಕರ ಸಮಸ್ಯೆಯನ್ನೂ ಅತ್ಯಂತ ನವಿರಾಗಿ, ಮಾನವೀಯ ದೃಷ್ಟಿಯಲ್ಲಿ ಬಗೆಹರಿಸುವ ಇವರ ಕೌಶಲ್ಯ ನಿಜಕ್ಕೂ ಶ್ಲಾಘನೀಯ. ಇವರು ನನ್ನ ಮನದಾಳದಲ್ಲಿ ಶಿಸ್ತು, ಸಂಯಮ, ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ ಚಿಗುರೊಡೆಯಲು ಪ್ರಮುಖ ಕಾರಣಕರ್ತರಾಗಿ ಸ್ಫೂರ್ತಿಯ ಚಿಲುಮೆಯಾಗಿದ್ದಾರೆ.

ಗೌರೀಬಿದನೂರು — ಎನ್.ಎಸ್. ಪ್ರಸಾದ್





ಎಸ್. ಸುರೇಂದ್ರನಾಥ್

# ಕುರುವಿನ ಗುಲಾಮ

ಸೀತಾರಾಮ ಶಾಸ್ತ್ರಿಗಳು ಬೆಳಗ್ಗೆ ಬಲಬದಿಗೆ ತಿರುಗಿಕೊಂಡು ಏಳಲು ಹೋದಾಗ, ಯಾಕೋ ಬಲ ಪೃಷ್ಠದ ಕೆಳಗೆ ಸೂಜಿ ಚುಚ್ಚಿದಂತಾಗಿ, ಲಳಕ್ಕೆಂದು ಮತ್ತೆ ಹಾಗೇ ಹಾಸಿಗೆಯ ಮೇಲೆ ಒಂದೆರಡು ಕ್ಷಣ ಅಂಗಾತ ಚಾಚಿಕೊಂಡು, ನಂತರ ತಾರಸಿ ನೋಡುತ್ತಲೇ, ಹೆಣವೊಂದು ಎದ್ದು ಕೂಡುವ ರೀತಿಯಲ್ಲಿ ಎದ್ದರು. ಏನೂ ಅನಿಸಲಿಲ್ಲ. ಮತ್ತೊಮ್ಮೆ ಈ ಸೂಜಿ ಚುಚ್ಚಿದ ಅನುಭವ ಅವರಿಗಾದದ್ದು ಸ್ನಾನ ಮಾಡುವಾಗ. ಬಿಸಿನೀರು ಪೃಷ್ಠವನ್ನು ಸವರಿತೋ ಇಲ್ಲವೋ, ಎಲ್ಲೋ ಒಂದೆಡೆ ಪೃಷ್ಠದ ಮೇಲೆ ಚುರ್ರೆಂದಿತು. ಕೈಲಿದ್ದ ತಂಬಿಗೆಯನ್ನು ಒಂದೆಡೆ ಇಟ್ಟು, ಮಬ್ಬುಗತ್ತಲಿನ, ಹೊಗೆ ತುಂಬಿದ ಬಚ್ಚಲುಮನೆಯಲ್ಲಿ ಪೃಷ್ಠದ ಮೇಲೆ ಕೈಯ್ಯಾಡಿಸಿಕೊಂಡರು. ಕೈಗೆ ಯಾವ ಅನುಭವವೂ ಆಗಲಿಲ್ಲ. ಸ್ನಾನ ಮುಗಿಸಿ ಮೈ ಒರೆಸಿಕೊಳ್ಳುವಾಗ ಮಾತ್ರ ಎಡವಟ್ಟಾಗಿ ಹೋಯಿತು. ಎಂದಿನಂತೆ ಇಂದೂ ರಭಸದಿಂದ ಬೆನ್ನು, ನಂತರ ಪೃಷ್ಠವನ್ನು ತಮ್ಮ ನೀರುಪಂಚೆಯಿಂದ ತಿಕ್ಕಿಕೊಂಡರೋ ಇಲ್ಲವೋ, ಪೃಷ್ಠಕ್ಕೇ ಬೆಂಕಿಯಿಟ್ಟಂತಾಯಿತು. ಒಮ್ಮೆ ತಲೆ ತಿರುಗಿದಂತಾಗಿ, ಗೋಡೆ ಹಿಡಿದು ಸುಧಾರಿಸಿಕೊಂಡರು. ಈಗಂತೂ ತಮ್ಮ ಪೃಷ್ಠದ ಅದ್ಯಾವ ಭಾಗದಲ್ಲಿ ಈ ಜ್ವಾಲಾಮುಖಿ ಅಡಗಿರುವುದೋ ಎಂಬುದನ್ನು ಪತ್ತೆ ಮಾಡಿಯೇ ತೀರಬೇಕೆನಿಸಿ, ಮತ್ತೆ ಮಬ್ಬುಗತ್ತಲಿನ ಬಚ್ಚಲು ಮನೆಯಲ್ಲಿ ಪೃಷ್ಠದ ಮೇಲ

ಕೈಯ್ಯಾಡಿಸಿಕೊಂಡಾಗ, ಈಗಲೂ ಕೈಗೆ ಏನೂ ಹತ್ತಲಿಲ್ಲ. ಹೋಗಲಿ ಮುಂಡೇದು ಎಂದುಕೊಂಡು, ನೀರುಪಂಚೆಯನ್ನು ಸುತ್ತಿಕೊಳ್ಳುವಾಗ ಮಾತ್ರ ಕೊಂಚ ಜಾಗ್ರತೆ ವಹಿಸಿ, ಹೊರಬಂದರು.

ದೇವರಮನೆಯಲ್ಲಿ ಹೆಂಡತಿ ಆಗಲೇ ಹಾಕಿಸಿಟ್ಟಿದ್ದ ಕೃಷ್ಣಾಜಿನದ ಮೇಲೆ ಕುಕ್ಕರಿಸಿದರೋ ಇಲ್ಲವೋ, ಹಾಳು ಡಬ್ಬಣದಲ್ಲಿ ಪೃಷ್ಠವನ್ನು ಚುಚ್ಚಿದಂತಾಗಿ, ಕೂತಷ್ಟೇ ವೇಗವಾಗಿ ಎದ್ದು ನಿಂತರು. ಆಗಿನದಕ್ಕಿಂತಾ ಈಗಿನ ನೋವು ಬಲವಾಗಿದ್ದುದರಿಂದ, ಕೃಷ್ಣಾಜಿನದಲ್ಲೇ ಸೂಜಿಯೋ ಇನ್ನೇನೋ

ಶ್ರೀಪಾದ್

ಸಿಕ್ಕಿಕೊಂಡಿರಬೇಕೆಂಸಿ, ಮೊಣಕಾಲೂರಿ ಕೃಷ್ಣಾಜಿನದ ಮೇಲೆ ಕೈಯ್ಯಾಡಿಸುತ್ತಾ ಹುಡುಕತೊಡಗಿದರು. ಪತಿದೇವರು ದೇವರಮನೆ ಹೊಕ್ಕ ಹತ್ತು ನಿಮಿಷವಾದರೂ ಗಂಟೆಯ ಸದ್ದು ಕೇಳಿಬರ ದಿದ್ದುದನ್ನು ಗಮನಿಸಿದ ಅವರ ಹೆಂಡತಿ ರಿಂದಮ್ಮ, ದೇವರಮನೆಯ ಬಾಗಿಲಲ್ಲಿ ನಿಂತಾಗ ಕಂಡದ್ದು, ಮಬ್ಬುಗತ್ತಲೆಯ ದೇವರ ಮನೆಯಲ್ಲಿ ಮೊಣಕಾಲೂರಿ ಕೃಷ್ಣಾಜಿನದ ಮೇಲೆ ತೆವಳುತ್ತಿರುವ ಪತಿದೇವರನ್ನು.

"ಏನಾಯ್ತೂಂದ್ರೆ," ಎನ್ನುತ್ತಲೇ ಒಳಬಂದರು.

"ಸಾವಿರ ಸತಿ ಹೇಳಿದೀನಿ, ಎಲ್ಲೀಂದ್ರಲ್ಲಿ ಬಟ್ಟೆ ಹೊಲಿಯಾದೂ, ತೇಪೇ ಹಾಕಾದೂ ಮಾಡಬೇಡಾ ಅಂತ. ಹೊಲಿದ ಕೆಲಸ ಆದಮೇಲೆ ಎಲ್ಲಾ ಎತ್ತಿಡಾಕ್ಕೂ ಆಗಲ್ಲ ನಿಂಗೆ. ಎಲ್ಲೀಂದ್ರಲ್ಲಿ ಸೂಜೀನ ಬಿಟ್ಟು ಹೋಗ್ತೀಯ. ಈಗ ನೋಡು", ಹುಡುಕಾಟ ಮುಂದುವರೆಸು ತ್ತಲೇ ಗೊಣಗಿದರು.

ಪತಿದೇವರ ಸಂಕಟ ಸಾಧ್ವೀ ಪತ್ನಿಮಣಿಗೆ ಅರಿವಾಗಲಿಲ್ಲ. ಪತಿದೇವರ ಮಡಿ ಹಾಳಾಗದಂತೆ ಅವರನ್ನು ಮುಟ್ಟದಿರಲು ಎಚ್ಚರವಹಿಸುತ್ತಾ, ದೇವರಮನೆಗೆ ಕಾಲಿಟ್ಟರು.

"ಅಲ್ಲಾ, ಇಲ್ಯಾಕೆ ನಾನು ಬಟ್ಟೆ ಹೊಲೀಲಿ" ಅಂದವರೇ, ಅವರೂ ಬಾಗಿ, ಆದರ ಕೃಷ್ಣಾಜಿನ ವನ್ನಾಗಲೀ, ಅದರ ಮೇಲೆ ತೆವಳುತ್ತಿದ್ದ ತಮ್ಮ ಪತಿದೇವರನ್ನಾಗಲೀ ಮುಟ್ಟಸಿಕೊಳ್ಳದೇ, ಮುಟ್ಟದೇ, ಹುಡುಕಲಾರಂಭಿಸಿದರು. ನಾಲ್ಕಡಿ ಅಗಲ, ಏಳಡಿ ಉದ್ದದ ದೇವರಮನೆಯಲ್ಲಿ, ಮೊಣಕಾಲೂರಿ, ನೆಲದ ಮೇಲೆ ಕಾಲುಮುಂದ ನಾಯಿಯಂದದಿ ತೆವಳುತ್ತಿದ್ದ ತಮ್ಮ ಪತಿದೇವ ರನ್ನು ಮುಟ್ಟಸಿಕೊಳ್ಳದೇ, ಅತ್ತಿಂದಿತ್ತ ಹಾರಾಡುತ್ತಾ, ಅವರಿಗೆ ಸಹಾಯ ಮಾಡುವುದರಲ್ಲಿ ರಿಂದಮ್ಮನಿಗೆ ಸಾಕುಸಾಕಾಗಿ ಹೋಯಿತು. ಸೀತಾರಾಮ ಶಾಸ್ತ್ರಿಗಳ ಕೈಗೆ ಇನ್ನೂ ಏನೂ ಹತ್ತಿರಲಿಲ್ಲ. ನೋವು ಸೂಜಿಯಿಂದಾಗಿದ್ದೋ

ಅಥವಾ ತಮ್ಮ ಪೃಷ್ಠಕ್ಕೆ ಬೇರೇನೋ
ತಗುಲಿದೆಯೋ ಅರ್ಥವಾಗಲಿಲ್ಲ ಅವರಿಗೆ
ಸೂಜಿ ಸಿಕ್ಕ ಹೊರತು, ಅಥವಾ ಕೃಷ್ಣಾಜಿನದ
ಏನೂ ಇಲ್ಲ ಎನ್ನುವುದು ಖಾತ್ರಿಯಾದ ಹೊರತ
ಅವರಿಗೆ ಮನಃಶಾಂತಿಯಿರಲಿಲ್ಲ. ಗಂಡ
ಹೆಂಡತಿ, ಒಬ್ಬರು ಗೋಡೆಯಿಂದ ಗೋಡೆ
ಹಾರಾಡುತ್ತಾ, ಇನ್ನೊಬ್ಬರು ತೆವಳುತ್ತಾ ಒಬ್ಬ
ಗೊಬ್ಬರು ಸಹಾಯಮಾಡುತ್ತಾ ಇರುವ ಇಂತ
ವೇಳೆಯಲ್ಲಿ, ಹಿಂದೆ ಹಿಂದೆ ತೆವಳುತ್ತಿದ್ದ ಸೀತ
ರಾಮ ಶಾಸ್ತ್ರಿಗಳ ಪೃಷ್ಠ, ಅಲ್ಲೇ ಹಿಂದೆ ನಿಂತಿ
ರಿಂದಮ್ಮನ ಮೊಣಕಾಲಿಗೆ ತಗುಲಿ, ಪೃಷ್ಠ
ಅದ್ಯಾವುದೋ ಬಾಗದಲ್ಲಿ ಮತ್ತೆ ಭುಗಿಲೆದ್ದಿತ
ಚಟ್ಟನೆ ಚೀರಿ ನೆಲ ಬಿಟ್ಟಿದ್ದರು. ಆ ಮಬ
ಗತ್ತಲಲ್ಲೂ ಅವರ ಮುಖದ ಮೇಲೆ ಮೂಡಿ
ಬೆವರಿನ ಹನಿಗಳ ಸಾಲು, ರಿಂದಮ್ಮನ ಕಣ್ಣಿ
ಬಿತ್ತು. ಪತಿದೇವರು ಚೀರಿದುದಕ್ಕಿಂತಲೂ,
ಚೀರಾಟದ ಕಾರಣಕ್ಕಿಂತಲೂ, ರಿಂದಮ್ಮನಿ
ಬೇಜಾರಾಗಿದ್ದು ಪತಿದೇವರ ಮಡಿ ಮುರಿ
ಹೋದದ್ದು. 'ತಲೆ ಮೇಲೆ ಎರಡು ಹನಿ ನೀ
ಹಾಕಿಕೊಂಡು ಬನ್ನಿ. ಮತ್ತೆ ಸ್ನಾನ ಮಾಡ
ನಿಲ್ಲಬೇಡಿ. ನೆಗಡಿಯಾದೀತು' ಅಂದು ತ
ಉಳಿದ ಕೆಲಸದತ್ತ ಗಮನ ಹರಿಸಲು ನಡೆದರ
ಹೆಂಡತಿ ಹೇಳಿದಂತೆ ಅವರು ಮಾಡಿದುದ
ನೆಗಡಿಯ ಹೆದರಿಕೆ ಕಾರಣವಾಗಿರಲಿಲ್ಲ. ಪೃಷ್ಠ
ಉರಿ ಕಾರಣವಾಗಿತ್ತು. ಅಂತೂ ಇಂತೂ ಒ
ಪೃಷ್ಠದ ಮೇಲೆ ಭಾರ ಬಿಡದೇ ಪೂಜೆಯ ಶಾ
ಮಾಡಿ, ನಿಂತೇ ತಿಂಡಿ ತಿಂದು, ಶಾಲೆಯ
ಓಡಿದರು.

ಸೀತಾರಾಮ ಶಾಸ್ತ್ರಿಗಳಿಗೆ ಈಗ ಐವತ್ತೆರ
ವರ್ಷ. 'ಮೋತಿವೀರಪ್ಪ ಪ್ರೌಢಶಾಲೆ'ಯ
ಚರಿತ್ರೆ ಪಾಠ ಮಾಡುತ್ತಾರೆ. ಒಂದು ಪೈಜಾ
ಮೇಲೊಂದು ಬಿಳಿ ಅಂಗಿ-ಅದು ಅ
ದಿನನಿತ್ಯದ ಉಡುಪು. ಮದುವೆಯಾಗಿ ಈ
ಮುವ್ವತ್ತೆರಡು ವರ್ಷಗಳು ತುಂಬಲಿಕ್ಕೆ ಬಂದಿ

ಹುಟ್ಟಿದೊಬ್ಬ ಮಗ ಆರನೇ ವರ್ಷಕ್ಕೇ ಮಲೇರಿಯಾದಿಂದ ತೀರಿಕೊಂಡ ಮೇಲೆ, ಜಗನ್ನಿಯಾಮಕ ಭಗವಂತ ಇವರ ಮೇಲೆ ಕರುಣೆ ತೋರದೆ, ಇವರಿಗಿನ್ನು ಮಕ್ಕಳೇ ಆಗಲಿಲ್ಲ. ಸೀತಾರಾಮ ಶಾಸ್ತ್ರಿಗಳಿಗೆ ಇನ್ನೂ ಪವಾಡಗಳಲ್ಲಿ ನಂಬಿಕೆಯಿದೆ. ಅಂತೇ ಇನ್ನೂ ಭಗವನ್ನಾಮ ಸ್ಮರಣೆ, ಹೊತ್ತಿಗೆ ಸರಿಯಾಗಿ ಭಗವಂತನ ಪೂಜೆ ನಡೆಯುತ್ತಲೇ ಇದೆ. ರಿಂದಮ್ಮನಿಗೆ ದೇವರ ಮೇಲಲ್ಲದಿದ್ದರೂ, ತಮ್ಮ ಪತಿದೇವರ ಮೇಲೆ ಈಗೊಂದು ಹತ್ತು ಹದಿನೈದು ವರ್ಷಗಳ ಹಿಂದಿನವರೆಗೂ ನಂಬಿಕೆಯಿತ್ತು. ಮುಟ್ಟು ನಿಂತಮೇಲೆ, ದೇವರ ಮೇಲಿನ ನಂಬಿಕೆ ಹೆಚ್ಚಾಗಿ, ಪತಿದೇವರ ಮೇಲಿನ ನಂಬಿಕೆ ಸ್ವಲ್ಪ ಕುಂದಿದ್ದರೂ, ಪೂರ್ಣವಾಗಿ ನಶಿಸಿಲ್ಲ. ಅಂತೆಯೇ, ಆಗೊಮ್ಮೆ ಈಗೊಮ್ಮೆ, ಸೀತಾರಾಮ ಶಾಸ್ತ್ರಿಗಳು ಸೆರಗಿನಡಿ ಕೈ ತೂರಿಸಿದಾಗ, ಏನೂ ಹೇಳದೆ ಒಪ್ಪಿಸಿಕೊಳ್ಳು ತ್ತಿದ್ದರು. ಇಬ್ಬರ ಪುಣ್ಯ, ರಾತ್ರಿ ಈ ವಿಫಲ ಕ್ರಿಯಾಸಮಯದಲ್ಲಿ ಕತ್ತಲೋ ಕತ್ತಲಲ್ಲಿ ಇಡೀ ಮನೆ ಕೊಳೆಯುತ್ತಿದ್ದುದರಿಂದ, ಇಬ್ಬರ ದೇಹಗಳೂ, ಇನ್ನೊಬ್ಬರ ಕಣ್ಣಿಗೆ ಬೀಳದಂತೆ ಕತ್ತಲಲ್ಲೇ ನರಳುತ್ತಿದ್ದವು.

ಶಾಲೆಯಲ್ಲಿ ಎಂಟನೇ 'ಸಿ' ಸೆಕ್ಷನ್ನಿಗೆ ಚಾಲುಕ್ಯರನ್ನು ಕುರಿತು ಪಾಠ ಮಾಡುವಾಗ, ಮತ್ತೊಮ್ಮೆ ಅಪಘಾತವಾಯಿತು. ಬೋರ್ಡ್ ಮೇಲೆ ಬರೆದುದನ್ನು ಅಳಿಸಲು ಹೋದಾಗ ಡಸ್ಟರ್ ಕೈ ಜಾರಿ ಬಿತ್ತು. ಕೈಗೆತ್ತಿಕೊಳ್ಳಲು ಥಟ್ಟನೆ ಬಗ್ಗಿದರು. ಪೃಷ್ಠದ ಮೇಲೆ ಪೈಜಾಮ ಬಿಗಿದುಕೊಂಡು, ಅದ್ಯಾವುದೋ ಒಂದು ಭಾಗವನ್ನು ಅಮುಕಿ, ಮತ್ತಲ್ಲೋ ಜಗ್ಗಿದಂತಾಗಿ, ಪೃಷ್ಠಕ್ಕೆ ಕೊಳ್ಳಿಯಿಟ್ಟಂತಾಯಿತು. ಗಂಟಲು ಕಟ್ಟಿದ ನರಿಯೋಪಾದಿಯಲ್ಲಿ ಕುಂಯ್ಯೆಂದು ಸದ್ದು ಮಾಡುತ್ತಾ ಥಟ್ಟನೆ ಎದ್ದುನಿಂತರು. ಬವಳಿ ಬಂದಂತಾಯಿತು. ಬೆವರೊಡೆಯಿತು. ಮುಖ ಕಪ್ಪಿಟ್ಟಿತು. ಮೇಜನ್ನು ಹಿಡಿದು ಹಾಗೇ ನಿಂತರು. ಇದ್ದಕ್ಕಿದ್ದಂತೆಯೇ ತಮ್ಮ ಗುರುಗಳಲ್ಲಾದ ವಿಪರೀತ ಬದಲಾವಣೆಯನ್ನು ಕಂಡು ವಿದ್ಯಾರ್ಥಿ ಗಳಿಗೆ ಗಾಬರಿಯಾಯಿತು. ಕೆಲ ಕ್ಷಣಗಳ ನಂತರ, ಉಸಿರು ಎದೆಯಲ್ಲಿ ಸರಾಗವಾಗಿ ಓಡಿಯಾಡ ತೊಡಗಿದ ಮೇಲೆ, ಮೆಲ್ಲಗೆ ಜಾಗ್ರತೆಯಿಂದ ಬಗ್ಗಿ ಡಸ್ಟರ್ ಎತ್ತಿಕೊಂಡು, ಒರೆಸಬೇಕಾದುದನ್ನು ಒರೆಸಿ, ಪಾಠ ಮುಂದುವರೆಸಿದರು.

ತರಗತಿ ಮುಗಿದ ಕೂಡಲೇ ಸೀತಾರಾಮ ಶಾಸ್ತ್ರಿಗಳು ಸ್ಟಾಫ್‌ರೂಮಿಗೆ ಧಾವಿಸಿದರು. ಸ್ಟಾಫ್‌ರೂಮು ಇತರ ಅಧ್ಯಾಪಕರಿಂದ, ಮುಖ್ಯವಾಗಿ ಇತರ ಅಧ್ಯಾಪಕಿಯರಿಂದ, ತುಂಬಿ ತುಳುಕುತ್ತಿದ್ದುದರಿಂದ, ತಾವು ಅಂದುಕೊಂಡ ಕೆಲಸವನ್ನು ಮಾಡಿ ಮುಗಿಸಲು ಒಂದು ಹತ್ತು ನಿಮಿಷಗಳು ಕಾಯಬೇಕಾಯಿತು. ಸ್ಟಾಫ್ ರೂಮು ಖಾಲಿಯಾದ ಕೂಡಲೇ, ಬಾಗಿಲು ಹಾಕಿ, ಪೈಜಾಮ ಕಳಚಿ, ಡ್ರಾಯರ್ ಒಳಗೆ ಕೈ ಹಾಕಿಕೊಂಡು ಪೃಷ್ಠದ ಮೇಲೆ ಕೈಯ್ಯಾಡಿಸಿ ಕೊಂಡರು. ಒಮ್ಮೆಲೇ ಸುಮಾರು ಗೋಟಡಿಕೆ ಗಾತ್ರದ ಬಾವು ಕೈಗೆ ಹತ್ತಿತು. ಕೈ ಬಾವನ್ನು ಮುಟ್ಟಿದುದೇ ತಡ, ಅದೆಲ್ಲಿತ್ತೋ ಇಲ್ಲೀವರೆಗೂ ಆ ಉರಿ, ಬಿಲದಿಂದ ಭುಸ್ಸನೇ ಹೊರಟ ಹಾವಿನಂತೇ ಹೆಡೆಯೆತ್ತಿ ನಿಂತಿತು. ಯಾವುದೇ ಸೂಚನೆ ಕೊಡದೆ ಮತ್ತೆ ಮತ್ತೆ ಬರುತ್ತಿದ್ದ ಉರಿಯಿಂದ ಬವಳಿ ಬರುವುದು ಸಾಮಾನ್ಯ ಪ್ರವರವಾದಂತಾಗಿ, ಮೇಜನ್ನು ಹಿಡಿದು ಕುರ್ಚಿ ಯಲ್ಲಿ ಕುಳಿತರು. ಯಾರೋ ಬಂದು ಬಾಗಿಲನ್ನು ತಟ್ಟಿದಾಗಲೇ, ಪೈಜಾಮವನ್ನು ಏರಿಸಿಕೊಳ್ಳ ಬೇಕೆಂಬ ಅರಿವಾದದ್ದು.

ಸಂಜೆ ಮನೆ ಮುಟ್ಟುವ ಹೊತ್ತಿಗೆ ಮೈ ಕೊಂಚ ಕಾವೇರಿತ್ತು. ಸುಸ್ತಾಗಿಬಿಟ್ಟಿದ್ದರು. ಎಂದಿನಂತೆ ರಿಂದಮ್ಮ ಪ್ರೀತಿಯಿಂದ ಕೊಟ್ಟ ಕಾಫಿಯನ್ನು ಕುಡಿಯದೇ, ಎಡಕ್ಕೆ ತಿರುಗಿ ಚಾಪೆಯ ಮೇಲೆ ಚಾಚಿಕೊಂಡು ಮಲಗಿ ಬಿಟ್ಟರು. ಹೆಂಡತಿ ತಮ್ಮ ಪತಿದೇವರ ಸ್ಥಿತಿಯನ್ನು

ನೋಡಿ ಕಂಗಾಲಾದರೂ, ಧೈರ್ಯ ತಂದು ಕೊಂಡು, 'ಏನಾಯ್ತೊಂದ್ರೇ' ಎನ್ನುವ ಸಂಪ್ರದಾಯದ ನುಡಿಯನ್ನು ನುಡಿದರು. ಸೀತಾರಾಮ ಶಾಸ್ತ್ರಿಗಳಿಗಾದರೂ ಹೀಗಾಗಿದೆ ಎನ್ನುವ ಮನಸ್ಸಾದರೂ ಹೇಗೆ ಬರಬೇಕು... ಕುಂಡೆಯ ಮೇಲೆ ಕುರುವಾಗಿದೆ ಎನ್ನಲೇ... ಹೆಂಡತಿಯ ಮುಂದೆ ಕುಂಡೆ ಎನ್ನುವ ಪದ ಬಳಸಬಹುದೇ... ಇಲ್ಲವಾದರೆ ಇನ್ನೇನು ಹೇಳಬೇಕು... ಪೃಷ್ಠವೆನ್ನಲೇ, ಪೃಷ್ಠವೆಂದರೆ ಏನೂಂತ ಕೇಳಿದರೆ ಏನೆಂದು ವಿವರಿಸು ವುದು.... ಇದಾವುದರ ಗೊಡವೆಯೇ ಬೇಡ ವೆಂದು, ಇಲ್ಲಿ ಇದಾಗಿದೆ ಎಂದೆನ್ನಬೇಕೆ... ಇಲ್ಲಿ ಎಂದರ ಯಾವ ಜಾಗವನ್ನು ಸೂಚಿಸಬೇಕು... ತಮಗೇ ಈ ಜ್ವಾಲಾಮುಖಿಯ ನಿಖರವಾದ ಜಾಗ ಗೊತ್ತಿಲ್ಲ... ಅಥವಾ ಬಟ್ಟೆಯನ್ನು ಕಳಚಿ ತೋರಿಸಬಿಡಬೇಕೇ... ವೈವಾಹಿಕ ಜೀವನದ ಮುವತ್ತೆರಡು ವರ್ಷಗಳನ್ನು, ತಮ್ಮ ಯಾವುದೇ ಗೋಪ್ಯಾಂಗವನ್ನು ಯಾರಿಗೂ ತೋರಿಸದೇ ಕಳೆದಿರುವಾಗ, ಈಗ, ಈ ವಯಸ್ಸಿನಲ್ಲಿ? ಅದೂ ಭಗವಂತನೇ ಎಲ್ಲ ಮರೆತಿರುವಾಗ...?

ಹೆಂಡತಿ ಕಾಫಿಯನ್ನು ಮತ್ತೊಮ್ಮೆ ಬಿಸಿ ಮಾಡಿ ತಂದು ಮುಂದಿಟ್ಟರು. ಇಷ್ಟರಲ್ಲಾಗಲೇ ಸೀತಾರಾಮ ಶಾಸ್ತ್ರಿಗಳು ಒಂದು ನಿರ್ಧಾರಕ್ಕೆ ಬಂದುಬಿಟ್ಟಿದ್ದರು. ತಾವಾಗೇ ನಿರ್ಧರಿಸಿದರು ಎನ್ನುವುದಕ್ಕಿಂತಾ ಪೃಷ್ಠದ ಉರಿ ಅವರನ್ನು ನಾಚಿಕೆ, ಬಿಗುಮಾನ, ಸಂಕೋಚಗಳಾಚೆ ತಮ್ಮ ಹೆಂಡತಿಯೊಡನೆ ತಮ್ಮ ಕುರುವನ್ನು ಪ್ರಸ್ತಾಪಿಸಲು ಪ್ರೇರೇಪಿಸಿತು. ಹೆಂಡತಿ ಬಂದು ಕುಳಿತೊಡ ನೆಯೆ, ಪಟ್ಟಣದ ಶ್ರೀರಂಗನೋಪಾದಿಯಲ್ಲಿ ಗಲ್ಲಕ್ಕೆ ಕೈಯ್ಯೂರಿ ಅರ್ಧ ಮಲಗಿ, ಅರ್ಧ ಕುಳಿತು ಒಮ್ಮೆ ಕಾಫಿಯನ್ನು ಗುಟುಕರಿಸಿ, 'ರಿಂದೂ' ಎಂದು ಎಂದೂ ಇಲ್ಲದ ಧ್ವನಿಯಲ್ಲಿ ಕರೆದರು. ರಿಂದಮ್ಮನಿಗೆ ಆ ಕೂಗಿನಲ್ಲಿ ನಾರಾಯಣನನ್ನು ಕರೆದ ಗಜೇಂದ್ರನ ನೋವಿನ ಛಾಯೆ ಕಂಡು ಬಂತು. ನಾರಾಯಣನಂತೇ ಕಾಳಜಿಯಿಂದ ಮುಂದೆ ಬಾಗಿ, 'ಏನಾ ಯ್ತೊಂದ್ರೆ' ಎಂದು ಪುನಃ ಸಂಪ್ರದಾಯದ ನುಡಿಯನ್ನು ನುಡಿದರು. 'ಅದೂ...' ಎಷ್ಟೇ ಗಟ್ಟಿಯಾದ ನಿರ್ಧಾರ ಮಾಡಿದ್ದರೂ, ಈ ಹೊತ್ತಿನಲ್ಲಿ ನಿರ್ಧಾರ ಕೈಕೊಟ್ಟಿತು. ಮತ್ತೆ ಅದೇ ಸಂದಿಗ್ಧತೆ. ಏನೆಂದು ಹೇಳುವುದು... ಕೊನೆ



ಗೊಮ್ಮೆ ಮನಸ್ಸನ್ನು ಗಟ್ಟಿಮಾಡಿ, 'ರಿಂದೂ, ಇಲ್ಲಿ ಅದಾಗಿದೆ, ಅಂದರೇ...' ಕುರು ಎನ್ನುವುದನ್ನು ಬೆರಳುಗಳಿಂದ ಉಂಡೆಯೊಂದರ ಗಾತ್ರ ಸೂಚಿಸಿ ತೋರಿಸಿ,'... ಸ್ವಲ್ಪ ನೋಡ್ತೀಯಾ ಅಂದವರೇ, ತಮ್ಮ ಪತ್ನಿ ತಮ್ಮ ಸಂಕಟಕ್ಕೆ ಒಗೊಡಬಹುದೆನ್ನುವ ಖಾತ್ರಿಯೊಂದಿಗೆ

ಪೈಜಾಮವನ್ನು ಕೊಂಚ ಕೆಳಗಿಳಿಸಲು ಉದ್ಯುಕ್ತರಾದರು. ಸರ್ಪ ಮೆಟ್ಟಿದವರಂತೆ ರಿಂದಮ್ಮ ಥಟಕ್ಕನೆದ್ದು, ''ಇದೇನ್ರೀ ಈ ವಯಸ್ಸಿನಲ್ಲಿ ಈ ಅಪದ್ಧ... ಅದೂ ಮೂರುಸಂಜೆಯ ಹೊತ್ತಿಗೆ...'' ಅಂದವರೇ ದುಡದುಡನೇ ಕೋಣೆಯಿಂದ ಹೊರಗೋಡಿದರು. ತಮ್ಮ ಪತ್ನಿ ಈ ರೀತಿ ಓಡಿದುದು, ಅವರಿಗೆ ಕೊಂಚವೂ



ಆಶ್ಚರ್ಯವನ್ನು ತರಲಿಲ್ಲ. ಬದಲಿಗೆ ಮುಂದೇನು ಮಾಡಬೇಕೆನ್ನುವ ಗೋಜಲಿಗೆ ಬಿದ್ದರು. ಯಾವುದೋ ನಿರ್ಧಾರಕ್ಕೆ ಬಂದು, ಪೃಷ್ಠವನ್ನು ನೆಲಕ್ಕೆ ತಾಕಿಸದಂತೆ ಮೊದಲು ಕುಳಿತು, ನಂತರ ಎದ್ದು ನಿಂತರು. ಮೊದಲು ಕೋಣೆಯ ಬಾಗಿಲು ಹಾಕಿಕೊಂಡು, ನಂತರ ಕಿಟಕಿಯ ಸರಳಿಗೆ ತೂಗಿಹಾಕಿದ್ದ ಕನ್ನಡಿಯನ್ನು ಕೈಲಿ ಹಿಡಿದು ಕೊಂಡು ಸನ್ನದ್ಧರಾದರು.

ಅವರಿಗೆ ಸದ್ಯಕ್ಕಿದ್ದ ಗುರುತರ ಕಾರ್ಯವೊಂದೇ-ತಮ್ಮ ಪೃಷ್ಠದ ಯಾವುದೋ ಭಾಗದಲ್ಲಿ ತಮಗರಿವಿಲ್ಲದಂತೆಯೇ ಬೆಳೆದುಕೊಂಡ ಈ ನವ ಅವಯವವನ್ನು ನೋಡಿ ಪತ್ತೆಹಚ್ಚುವುದು. ಆದರೆ ಅವರಿಗಿದ್ದ ಸದ್ಯದ ಸಮಸ್ಯೆಯೂ ಒಂದೇ. ಇಡೀ ಮನೆ ಹಗಲಲ್ಲೇ ಮಬ್ಬುಗತ್ತಲೆಯಲ್ಲಿ ಹೊರಳಾಡುತ್ತಿರುತ್ತದೆ. ಇನ್ನು ಇಂತಹ ಮುಸ್ಸಂಜೆಯ ವೇಳೆಯಲ್ಲಂತೂ ಮಾತೇ ಬೇಡ. ಹೊಗೆಯಿಂದ ಗೋಡೆಗಳೆಲ್ಲವೂ ಮಸಿಹಿಡಿದು ಮಂಕಾಗಿ, ದೀಪಗಳೂ ಅರೆಬೆಳಕಿನಲ್ಲಿ ಗೋಳುಕರೆಯುತ್ತವೆ. ಅಲ್ಲದೇ ಈ ಕ್ಷಣದಲ್ಲಿ ತಮ್ಮ ಎದುರಿಗಿರುವ ಇಂತಹ ವಿಶೇಷ ಸಂದರ್ಭವು ಕೂಡಾ, ಇಬ್ಬರಿಗೂ ಹಿಂದೆಂದೂ ಒದಗಿರಲಿಲ್ಲ. ಈಗ ಈ ಹೊಸದಾಗಿ ಬೆಳೆದುಕೊಂಡ ಅವಯವವನ್ನು ನೋಡಿಕೊಳ್ಳುವುದು ಹೇಗೆ? ಜಾಗ್ರತೆಯಿಂದ ಮೊದಲು ಪೈಜಾಮವನ್ನು ಕಳಚಿ, ನಂತರ ಪೃಷ್ಠದ ಯಾವುದೇ ಭಾಗಕ್ಕೆ ತಗುಲದಂತೆ ಡ್ರಾಯರನ್ನು ಕಳಚಿ, ಕನ್ನಡಿಯನ್ನು ಗುರಿಯಿಟ್ಟುಕೊಂಡರು. ಮೊದಲ ಅನುಭವ, ಏನೂ ಕಾಣಲಿಲ್ಲ. ಕಂಡರೂ ಕಂಡದ್ದು ಏನೆಂದು ತಿಳಿಯಲಿಲ್ಲ. ನಂತರ ಹತ್ತು ನಿಮಿಷ ಒಂದು ರೀತಿಯ ಅಸಂಗತ ಕಸರತ್ತೇ ಆಯಿತು ಸೀತಾರಾಮ ಶಾಸ್ತ್ರಿಗಳಿಗೆ. ಕನ್ನಡಿಯನ್ನು ಪೃಷ್ಠಕ್ಕೆ ಗುರಿಮಾಡಿಕೊಂಡು, ಅದರಲ್ಲಿ ತಮ್ಮ ಪೃಷ್ಠದ ಪ್ರತಿಬಿಂಬವನ್ನು ನೋಡಿಕೊಳ್ಳಲು ಹೆಣಗಿದರು. ತಿರುಗಿದಷ್ಟೂ ಪೃಷ್ಠ-ಕನ್ನಡಿಯ ಅಂತರ ಅಷ್ಟೇ ಉಳಿದು, ಕಾಣಬೇಕಾದುದು ಕಾಣುತ್ತಿರಲೇ ಇಲ್ಲ. ಇಡೀ ಕೋಣೆ ಕನ್ನಡಿಯಲ್ಲಿ ತಿರುಗುತ್ತಿತ್ತು. ಪೃಷ್ಠದ ತುಂಬಾ ನೋವು ಆವರಿಸಿಕೊಂಡೂ ಕಣ್ಣಿಗೆ ಬೀಳದಾದ ಕುರು, ಸರ್ವಾಂತರ್ಯಾಮಿಯಾಗಿದ್ದುಕೊಂಡೂ ಅಗೋಚರನಾಗಿರುವ

ಭಗವಂತನ ಸಾಕಾರವೆನ್ನಿಸಿಬಿಟ್ಟಿತು ಅವರಿಗೆ. ಕೊನೆಗೊಮ್ಮೆ ಕಾಲುಗಳನ್ನು ಅಗಲಿಸಿ ಕನ್ನಡಿಯನ್ನು ಗುರಿಯಿಟ್ಟುಕೊಂಡರು. ಅವರ ಜೀವನದಲ್ಲಿ ಮೊದಲ ಸಲ ಕಾಣಬಾರದುದು ಕಣ್ಣಿಗೆ ಬಿತ್ತು. ತಾರಸಿಯಿಂದ ತೂಗುತ್ತಾ ನರಳುತ್ತಿದ್ದ ರೋಗಿಷ್ಠ ದೀಪದ ಅರೆಬೆಳಕಿನಲ್ಲಿ, ಕೋಣೆಯಲ್ಲಿ ಕವಿದ ಮಬ್ಬುಗತ್ತಲೆಯಲ್ಲಿ, ಹೊಗೆಯಿಂದ ಮಸಿಹಿಡಿದು ಈಗಾಗಲೇ ಅರ್ಧ ಪಾದರಸ ಕಳೆದುಕೊಂಡು ತತ್ತರಿಸುತ್ತಿದ್ದ ಕನ್ನಡಿಯಲ್ಲಿ, ಇದುವರೆಗೂ ಯಾವುದನ್ನು ತಾವು ಜೀವನಾಗತ್ಯವೆಂದು ಅಂದುಕೊಂಡಿದ್ದರೋ, ಯಾವುದನ್ನು ನಂಬಿ ತಾವು ತಮ್ಮ ದಾಂಪತ್ಯ ಜೀವನವನ್ನು ಇಲ್ಲೀವರೆಗೂ ನೆರವೇರಿಸಿಕೊಂಡು ಬಂದಿದ್ದರೋ, ಯಾವುದು ತಮಗೆ ಇಷ್ಟು ವರ್ಷಗಳ ದಾಂಪತ್ಯ ಜೀವನದ ಸಕಲ ಸಾರವನ್ನೂ ಉಣ್ಣಿಸಿತ್ತೋ, ಅಂತಹ ತಮ್ಮ ಖಾಸಾ ಅಂಗ ಕಂಡು ಅಸಹ್ಯವೆನಿಸಿತು. ಹೇಸಿಗೆ ಯಾಯಿತು. ಮುಂದೆ ಅದನ್ನು ನೋಡಿ ಕೊಳ್ಳಬೇಕೆನಿಸಲಿಲ್ಲ. ಕನ್ನಡಿಯನ್ನು ಹಿಂತೆಗೆದು ಕೊಳ್ಳುವಾಗ ಮಾತ್ರ, ಮತ್ತೆ ಅಪಘಾತವಾಯಿತು. ಕನ್ನಡಿ ಸ್ಟೀಲ್ ಫ್ರೇಮ್‌ನ ಒಂದು ಮೂಲೆ ಆ ಜಾಗಕ್ಕೆ ತಾಕಿಬಿಟ್ಟಿತು. ಈ ಸಾರಿಯಂತೂ ಇಡೀ ಪೃಷ್ಠವನ್ನೇ ಉರಿಯುತ್ತಿರುವ ಅಗ್ಗಿಷ್ಟಿಕೆಗೆ ಒಡ್ಡಿದಂತಾಯ್ತು. ಬಾಯಿಯಿಂದ ಅರಿವಿಲ್ಲ ದಂತೆಯೇ 'ಶ್ರೀರಾಮಚಂದ್ರಾ' ಎನ್ನುವ ಆರ್ತನಾದ ಹೊರಟಿತು. ನೋವಿನಿಂದಾಗಿ ಉಸಿರು ಕಟ್ಟಿದ್ದರಿಂದ, ಆ ಆರ್ತನಾದ ಬಾಗಿಲನ್ನು ಬಿಟ್ಟು ಹೊರದಾಟಲಿಲ್ಲವಾಗಿ, ರಿಂದಮ್ಮ ಬಂದು ಬಾಗಿಲು ತಟ್ಟಲಿಲ್ಲವಾಗಿ, ಶಾಸ್ತ್ರಿಗಳಿಗೆ ಬಾಗಿಲು ತೆಗೆದು ವಿವರಿಸಬೇಕಾದ ಪ್ರಮೇಯ ಒದಗಲಿಲ್ಲ. ಹಾಗೇ ಗೋಡೆ ಹಿಡಿದು ಕುಳಿತು ಬಿಟ್ಟರು. ಕೂಡುವಾಗಲೂ ಬಲಪೃಷ್ಠವನ್ನು ನೆಲಕ್ಕೆ ತಾಗಿಸದಿರಲು ಮರೆಯಲಿಲ್ಲ. ಪೃಷ್ಠದ ಉರಿಗಿಂತಾ ಮಿಗಿಲಾಗಿ, ತಾವು ಕೆಲವು ಕ್ಷಣಗಳ ಹಿಂದೆ ಕಂಡುಕೊಂಡ ಸತ್ಯವೇ ಅವರ
ಯೋಚನೆಗೀಡುಮಾಡಿತ್ತು. ದೇವರು ದು
ವಸು. ಇಲ್ಲೀವರೆಗೂ ತಮ್ಮಿಬ್ಬರಿಗೂ ದೀ
ಅಗತ್ಯ ಬಿದ್ದಿರಲಿಲ್ಲ. ತಮ್ಮ ಸಂಸಾರ ಸಾಗರ
ತಾವು ಈಜಿ ಬಂದ ಮುವ್ವತ್ತೆರಡು ವರ್ಷಗಳ
ದೀಪವಿಲ್ಲದೆಯೂ ಎಲ್ಲಾ ಕ್ರಿಯೆಗಳ
ಸಾಂಗೋಪಾಂಗವಾಗಿ ನೆರವೇರುವಂತೆ
ಬಿಟ್ಟಿತ್ತು. ಒಂದುವೇಳೆ ದೀಪದ ಬೆಳಕಿ
ತಮಗೀಗಾದ ವಿಶ್ವರೂಪ ದರ್ಶನ ಹೆಂಡತಿ
ಆಗಿದ್ದರೆ! ಆ ಕಲ್ಪನೆಯೇ ಅಸಹನೀ
ವಾಗಿಬಿಟ್ಟಿತು ಸೀತಾರಾಮ ಶಾಸ್ತ್ರಿಗಳಿಗೆ.

ರಾತ್ರಿಯ ಒಂದು ಹೊತ್ತಿನಲ್ಲಿ, ನಿದ್ದೆ
ಹೊರಳಿದಾಗ ಮತ್ತೆ ನೋವು ಕಿತ್ತುಕೊ
ಬಂದಿತು. ಎದ್ದು ಕುಳಿತರು. ಬಚ್ಚಲು ಮನೆ
ತಿರುಗಿದರು. ಒಂದು ಹೆಜ್ಜೆಯಿಟ್ಟರೆ
ಇಲ್ಲವೋ, ಪಾದದಿಂದ ನರವೊಂದನ್ನು ಎ
ಶ್ರುತಿಮಾಡಿದಂತಾಗಿ ಅಸಾಧ್ಯ ಅ
ಹೆಜ್ಜೆಯಿಡಲು ಹೊರಟರೆ ಬಲಪಾದ
ಮುಂದಿಡಲಾಗದು. ಕೊನೆಗೊಮ್ಮೆ, ಎರ
ಪಾದಗಳ ನಡುವೆ ಕನಿಷ್ಠ ಎರಡು ಅಡಿ
ಅಂತರವನ್ನಿಟ್ಟುಕೊಂಡು ನಡೆದಾಗ
ಹಾಯೆನಿಸಿತು.

ಸೀತಾರಾಮ ಶಾಸ್ತ್ರಿಗಳಿಗೆ ನಿಜವ
ತೊಂದರೆ ಶುರುವಾಗಿದ್ದು ಪಾಠ ಮಾಡುವ
ಎರಡೂ ಕಾಲುಗಳನ್ನು ಎರಡು ಅಡಿಗ
ದೂರ ನೆಟ್ಟರೇನೇ, ನಿಲ್ಲಲು ಸಾಧ್ಯವ
ತ್ತಿದ್ದುದು. ಆದರೂ ಪಾಠದ ಭರದಲ್ಲಿ ಮ
ಏನಾದರೂ ಎರಡೂ ಪಾದಗಳನ್ನು ಒಂ
ಜೋಡಿಸಿದರೋ, ತೊಡೆಗಳ ನಡುವೆ ಪ್ರ
ನರಕ ಅವತರಿಸಿಬಿಡುತ್ತಿತ್ತು. ಕಾರಿಡಾರಿನ
ಒಂದೆರಡು ಮೆಟ್ಟಿಲುಗಳನ್ನು ಏರುವಾಗ ಎರ
ಕಾಲುಗಳ ನಡುವೆ ಸುರಕ್ಷಿತವಾದ ಅ
ವೇರ್ಪಟ್ಟು ಒಂದರೆಕ್ಷಣ ಹಾಯೆನಿಸಿತ್ತು. ಈ
ಅದು ನೆನಪಿಗೆ ಬಂದು, ಸ್ವಲ್ಪ ಆರಾಮಾಗಲ

ಎಡಗಾಲನ್ನು ಕುರ್ಚಿಯ ಮೇಲೆ, ಎತ್ತರದಲ್ಲಿಟ್ಟು, ಬಲಗಾಲನ್ನು ನೆಲದ ಮೇಲೆ ನೆಟ್ಟು ಪಾಠವನ್ನು ಮುಂದುವರಸಿದರು. ಹಿಂದಿನಿಂದ ಯಾರೋ, 'ವಾಮನ' ಅಂತ ಪಿಸುಗುಟ್ಟಿದ್ದು ಇವರಿಗಷ್ಟೇ ಅಲ್ಲ, ಇಡೀ ತರಗತಿಗೇ ಕೇಳಿತು.

ಪಾಠ ಮುಗಿಸಿ ಸ್ಟಾಫ್‌ರೂಮಿಗೆ ಹೊರಟಾಗ ಕದರಮಂಡಲಿಗಿ ಸಿಕ್ಕ. ''ಯಾಕ್ರೀ ಮಾಸ್ತರಾ, ಮೆಟ್ಟಾಗೇನಾರಾ ಕಲ್ಲ ಸಿಕ್ಕಾವೇನು... ಬಾತು ಕೋಳಿಗೆ ಮೂಲವ್ಯಾಧೀ ಬಂಧಾರಂಗೆ ನಡೀಲಿಕತ್ತೀರಲಾ...'' ಅಂತಂದು, ಉತ್ತರಕ್ಕಾಗಿ ಇವರ ಬೆನ್ನು ಹತ್ತಿದ. ಹೇಗೆ ಹೇಳುತ್ತಾರೆ ಇವನಿಗೆ ತನ್ನ ಸಮಸ್ಯೆಯನ್ನು....

ಕದರಮಂಡಲಿಗಿಯನ್ನು ನೋಡುತ್ತಾ ನಿಂತರು. ಅವನೂ ಇವರನ್ನೇ ನೋಡುತ್ತಾ ನಿಂತ. ವರ್ಷಗಳ ನಂತರ ಸಿಕ್ಕ ಇಬ್ಬರು ಪ್ರೇಮಿಗಳಂತೆ ಮಾತೇ ಆಡದೆ ಒಬ್ಬರನ್ನೊಬ್ಬರು ನೋಡುತ್ತಾ ನಿಂತರು. ಕೊನೆಗೂ ಸೀತಾರಾಮ ಶಾಸ್ತ್ರಿಗಳು ಬಾಯಿಬಿಟ್ಟರು.

''ಕುರು ಆಗಿದೆಯಪ್ಪಾ...''

''ಎಲ್ಲಿ?''

ಬಾಯಿಬಿಟ್ಟು ಹೇಗೆ ಹೇಳ್ತಾರೆ... ಸನ್ನೆ ಮಾಡಿದರು ಅಷ್ಟೆ.

''ಏನು ಹೊಳಾಗಾಗೇತೋ, ಮೇಲಾಗೇತೋ?''

ಈ ಕದರಮಂಡಲಿಗಿಯಂತೂ ತಮ್ಮ ಮಾನವನ್ನು ಹರಾಜು ಹಾಕುವ ಹವಣಿಕೆ ಯಲ್ಲಿದ್ದಂತೆ ತೋರಿತು. ಇಡೀ ಶಾಲೆಗೆ ಕೇಳುವಂತೆ ಕಿರಿಚುತ್ತಿದ್ದ. ಇದೇ ರೀತಿ ಇನ್ನೆರಡೇ ನಿಮಿಷ ಆತ ಮಾತನಾಡಿದಲ್ಲಿ, ತಮ್ಮ ಎಲ್ಲಾ ಖಾಸಗಿ ಸಮಸ್ಯೆಗಳು ಜಗಜ್ಜಾಹೀರಾಗುವುದರಲ್ಲಿ ಯಾವುದೇ ಅನುಮಾನ ಉಳಿಯಲಿಲ್ಲ ಅವರಿಗೆ.

''ಮೆಲ್ಲಗೆ ಮಾತಾಡಪ್ಪಾ... ಮೇಲೆ ಆಗಿದೆ''

''ಮತ್ತ ಲಗೂನ ತೆಗೆಸಿಬಿಡ್ರಲ್ಲಾ. ಇಲ್ಲಾಂದ್ರೆ ರಗಡ ಫಜೀತಿ, ರಕ್ತ ಟೆಸ್ಟ್ ಮಾಡುಸ್ರೀ ಮತ್ತ''

''ಎಲ್ಲಿ ತೆಗೆಸಲಿ?''

''ಅದಕ್ಕೇನ್ರೀ, ಡಾಕ್ಟ್ರಂತ ಯಾವನೇ ಬೋರ್ಡ್ ಹಾಕ್ಕೊಂಡಿರಲಿ ಅವ್ನತ್ರ ಹೋಗ್ರೀ... ನೀವು ಕಣ್ಣುಮುಚ್ಚಿ ಬಿಡಾದ್ರಾಗೆ ಕುಯ್ದುಹಾಕ್ತಾನೆ.''

ಮುಂದೆ ಹೆಜ್ಜೆಯಿಟ್ಟ ಕದರ ಮಂಡಲಿಗಿಯನ್ನು, 'ಒಂದು ನಿಮಿಷ' ಎಂದು ಕೂಗಿ ನಿಲ್ಲಿಸಿದರು, ಕದರಮಂಡಲಿಗಿ ನಿಂತು ಹಿಂತಿರುಗಿ ನೋಡಿದ.

ಇಬ್ಬರ ನಡುವಿನ ಆರು ಹೆಜ್ಜೆಗಳ ಅಂತರವನ್ನು, ಅಂಬೆಗಾಲಿಡುವ ಬಾಲಕೃಷ್ಣನ ಪ್ರಯಾಸದಂದದಿ ಕ್ರಮಿಸಲು ಶ್ರಮಿಸುತ್ತಿರುವ ಸೀತಾರಾಮ ಶಾಸ್ತ್ರಿಗಳನ್ನು ನೋಡಿ ಕದರಮಂಡಲಿಗಿಯ ಅಂತಃಕರಣ ದ್ರವಿಸಿತು. ಸೀತಾರಾಮ ಶಾಸ್ತ್ರಿಗಳು ಅವನ ಹತ್ತಿರ ಬಂದು, ಅವನ ಹೆಗಲನ್ನು ಹಿಡಿದು, ಹನಿಹನಿಯಾದ ದನಿಯಲ್ಲಿ ಪಿಸುಗುಟ್ಟಿದರು.

''ಯಾರಿಗೂ ಹೇಳಬೇಡಪಾ ಮತ್ತೆ.''

ಕದರಮಂಡಿಲಿಗಿ ತಲೆಯಾಡಿಸಿ ಹೊರಟ.

ಐದು ನಿಮಿಷಗಳ ತರುವಾಯ ಸ್ಟಾಫ್ ರೂಮ್ ತಲುಪಿದ ಸೀತಾರಾಮ ಶಾಸ್ತ್ರಿಗಳಿಗೆ ಎಲ್ಲರೂ ತನ್ನನ್ನೇ ನೋಡುತ್ತಿರುವುದರ ವಿಚಿತ್ರ ಅನುಭವವಾಯಿತು. ತಮ್ಮ ಪಾಡಿಗೆ ತಾವು, ತಮ್ಮ ಕುರ್ಚಿಗೆ ತೆರಳಿ, ಬಲ ಪೃಷ್ಠವನ್ನು ಕುರ್ಚಿಗೆ ತಾಗಿಸದಂತೆ ಕುಳಿತು ಉಸಿರೆಳೆಯುವಷ್ಟರಲ್ಲಿ ಗಣಿತದ ನರಹರಿ ಇವರತ್ತ ಸಾಗಿಬರತೊಡಗಿದ. ಅವನು ಹತ್ತಿರ ಬಂದಂತೆಲ್ಲಾ ಸೀತಾರಾಮ ಶಾಸ್ತ್ರಿಗಳಿಗೆ ಚಡಪಡಿಕೆ ಹೆಚ್ಚಾಯಿತು. ಬಂದವನೇ, ''ಶಾಸ್ತ್ರಿಗಳೇ, ಗಾಬರಿಯಾಗಬೇಡಿ. ಎರಡು ದಿನ ತೊಂದರೆ ಕೊಡತ್ತೆ. ಆಮೇಲೆ ತಾಂತಾನೇ ಮಾಯವಾಗಿಬಿಡುತ್ತೆ'' ಎಂದು, ಭರವಸೆ ತುಂಬುವವನಂತೆ ಅವರ ಹೆಗಲನ್ನು ಒತ್ತಿ ಹೊರಟುಬಿಟ್ಟ.

ಇನ್ನೆರಡು ನಿಮಿಷ ಕಳೆದು, ಒಂಬತ್ತನೇ ತರಗತಿಯ 'ಎ' ಸೆಕ್ಷನ್ನಿನ ಮಕ್ಕಳ ಹೋಂವರ್ಕ್

ತಿದ್ದಲು ತಯಾರಾಗುತ್ತಿದ್ದಂತೇ, ಕನ್ನಡದ ಗೋವಿಂದರಾವ್ ಬಳಿ ಬಂದು, "ಏನಿಲ್ಲ. ವೀಳೆದೆಲೆ, ರಾಗಿ ಪೋಲ್ಟಿಸ್ ಕಟ್ಗ. ಮೂಗು ಬಿಡ್ತತೆ ರಾತ್ರೀನಗೆ. ಬೆಳಗ್ಗೆ ತಗದು ಬಿಸಾಕದನ್ನ" ಅಂದು ಹೋದರು.

ಇನ್ನೂ ಕೊಂಚ ಸಮಯದ ನಂತರ ಪೀಟೀ ರಾಘವ ಬಂದು, "ಏನೂ ಶಾಸ್ತ್ರಿಗಳೇ, ಅದಕ್ಕೇ ಅಂತೀನಪಾ, ಎಚ್ಚರವಾಗಿರಬೇಕು, ಜನ ಇಂತಾ ಕೆಲ್ಸಾ ಮಡಾವಾಗ" ಎಂದವನೇ, ಸೊಂಟದ ಕೆಳಗಿನ ಭಾಗವನ್ನು ಸೂಚಿಸಿಕೊಂಡು ಅಸಹ್ಯ ವಾದ ಸನ್ನೆ ಮಾಡಿದ. "ವೀಡೀಗೀಡೀ ಇರಬಕು. ಚೆಕ್ ಮಾಡಿಸ್ಗಳ್ರಿ." ಇನ್ನೂ ಮುಂದೆ ಬಗ್ಗಿ, "ಅಂತಾದ್ರಾಗೂ ಬೇಕಾತಪಾ ಅಂತಂದ್ರೇ ನಂಗೇಳಿ. ನಾಯೆಲ್ಲಾ ಮಾಡ್ತೀನಿ" ಅಂದವನೇ ಅವನ ಮೂಗಿಗಿಂತಲೂ ಅಸಹ್ಯವಾದ ನಗೆ ಯನ್ನು ಬೀರಿ ಹೋದ.

ಸೀತಾರಾಮಶಾಸ್ತ್ರಿಗಳಿಗೆ ಏನಾಗುತ್ತಿದೆ ಎಂಬುದೇ ಅರ್ಥವಾಗುತ್ತಿರಲಿಲ್ಲ. ಕಂಡಕಂಡ ವರೆಲ್ಲಾ ತಮ್ಮ ಪೃಷ್ಠದ ವಿಷಯದಲ್ಲಿ ಮೂಗು ತೂರಿಸುವುದು ಇವರಿಗೆ ಬೇಡವಾಗಿತ್ತು. ಇವರಿಗೆಲ್ಲಾ ತಿಳಿದದ್ದು ಹೇಗೆ ಎನ್ನುವ ಜಿಜ್ಞಾಸೆಯಲ್ಲಿದ್ದಾಗೇ, ಇಂಗ್ಲಿಷ್ ಗ್ರಾಮರ್ ನಂದೀಶ ಬಂದ. 'Mr Shastri, don't take this lightly. It could also be the beginning of cancer. You can't say any thing now, at this stage. Better get this properly checked. But don't worry' ಅಂದವನೇ, ಇವರ ಕಂಗಾಲಾದ ಮುಖವನ್ನು ನೋಡಲೂ ನಿಲ್ಲದೆ ಹೊರಟುಬಿಟ್ಟ.

ಪೀರಿಯಡ್ ಬೆಲ್ಲಾಯಿತು. ಎಲ್ಲರೂ ಎದ್ದರು. ಕೊನೆಗೆ ಬಾಗಿಲನ್ನು ದಾಟಲಿದ್ದ ಹಿಂದಿ ಪದ್ಮಿನಿ, ಇವರ ಬಳಿ ನುಲಿಯುತ್ತಾ ಬಂದಳು. ನೇರವಾಗಿ ಸೀತಾರಾಮ ಶಾಸ್ತ್ರಿಗಳನ್ನು ನೋಡದೆ ನೆಲ ನೋಡುತ್ತಾ, "ರಾತ್ರಿ ಮನಿಯೋರಿಗೆ

ಹೇಳಿ, ಅರಿಷಿಣ ತೇದು, ಬಿಸಿ ಮಾ
ಹಚ್ಚುಸ್ಗಳಿ" ಎಂದು, ಬಂದ ಹಾಗೇ ತೆ
ಹೋದಳು. ಇದಂತೂ ತೀರಾ ವಿಪರಿ
ಅನಿಸಿಬಿಟ್ಟಿತು.

ಹೆಡ್‌ಮಾಸ್ಟರ್‌ಗೆ ರಜೆಯ ಅರ್ಜಿ ಸಲ್ಲಿ
ಎರಡೂವರೆ ಹೊತ್ತಿಗೆ ಮೋತೀವೀ
ಪ್ರೌಢಶಾಲೆಯನ್ನು ಬಿಟ್ಟು, ತಮ್ಮ ಪೃಷ್ಠಕ್ಕೆ
ಕುರುವಿನಿಂದ ಮುಕ್ತಿ ದೊರಕಿಸಿಕೊಡಬ
ಡಾಕ್ಟರನ್ನು ಹುಡುಕಿಕೊಂಡು ಹೊರಟ
ತಮಗೆ ಸುಮಾರು ಪರಿಚಯವಿದ್ದ ಡಾಕ್ಟರೊ
ಅಂಗಡಿಯಿದ್ದ ಬೀದಿಗೆ ತಿರುಗಬೇ
ಎನ್ನುವಷ್ಟರಲ್ಲಿ, ಯೋಚನೆಯೊಂದು ಅವರ
ಆವರಿಸಿ, ಚಿತ್ರವತ್ತಾಗಿ ನಿಂತಲ್ಲೇ ನಿಂತರು.
ಪರಿಚಿತನಿಗೆ ತನ್ನ ಪೃಷ್ಠವನ್ನು ತೋರಿಸುವು
ಹೇಗೆ? ಕುರುವನ್ನು ನೋಡಿ
ಏನೆನ್ನಬಹುದು. ನಗುವುದಿಲ್ಲವೇ? ಒಂದು ವ
ನೋಡಿದ, ಅದಕ್ಕೆ ಆರೈಕೆಯನ್ನೂ ಮಾ
ಅಂತಿಟ್ಟುಕೊಂಡಲ್ಲಿ, ನಾಳೆ ದಾರಿಯಲ್ಲಿ ಸಿಕ್ಕ
'ಏನೂ ಶಾಸ್ತ್ರಿಗಳೇ, ಹೇಗಿದೆ ನಿಮ್ಮ ಕುಂ
ಅಂತ ಎಲ್ಲರ ಮುಂದೂ ಕೇಳಿದರೇ... ಎಲ್ಲಕ್ಕಿ
ಮುಖ್ಯವಾಗಿ, ನೆನ್ನೆ ರಾತ್ರಿ ತಾವು ಕಂಡುಕೊ
ಸತ್ಯವನ್ನು ಈ ಪರಿಚಿತನ ಮುಂದೆ ಬಿಚ್ಚಿಡುವು
ಹೇಗೆ..., ನಾಳೆ ಎಲ್ಲರ ಮುಂದೂ ಅದ
ಗೇಲಿಮಾಡಿ ನಕ್ಕರೆ...ಥಟ್ಟನೇ ವಿಮುಖ
ಹೆಜ್ಜೆಯಿಟ್ಟರು. ಈ ಎಲ್ಲಾ ಸಮಸ್ಯೆಗಳಿಂದ
ನಗರದ ಇನ್ನೊಂದು ತುದಿಯಲ್ಲಿನ ಯ
ದಾದರೂ ಅಪರಿಚಿತ ಡಾಕ್ಟರನ್ನು ನೋಡುವು
ಒಳಿತೆಂದು ಅನಿಸಿತು.

ಸುಮಾರು ನಾಲ್ಕೂವರೆಯ ಹೊತ್ತಿಗೆ
ಅರುಣ ಅನ್ನುವ ಪುಟ್ಟ ಅಂಗಡಿಯೊ
ಸಿಕ್ಕಾಗ, ಸುಸ್ತಾಗಿಬಿಟ್ಟಿದ್ದರು. ಸ್ವಲ್ಪ ಜ್ವರ
ದಂತಿತ್ತು. ಹಣೆಯ ಮೇಲೆ ಸಾಲುಗ
ಬೆವರನ್ನೊರಸಿಕೊಳ್ಳುತ್ತಾ ಒಳಗೆ ಹೆಜ್ಜೆಯಿಟ್ಟ
ಒಂದೈದಾರು ಜನ ತಮ್ಮ ಸರದಿ

ಕಾಯುತ್ತಿದ್ದರು. ಇವರೂ, ತಮ್ಮ ಎಡ ಪೃಷ್ಠವನ್ನಷ್ಟೇ ಬೆಂಚಿನ ತುದಿಗಾನಿಸಿಕೊಂಡು ಕುಳಿತರು. ಎರಡು ನಿಮಿಷದಲ್ಲಿ ಒಂಥರಾ ಮಂಪರು ಕವಿಯಿತು. ಯಾರೋ ತಟ್ಟಿದಾಗಲೇ ಎಚ್ಚರ. ಪಕ್ಕದಲ್ಲಿದ್ದ ಒಂದು ಹೆಂಗಸು ತಿವಿಯುತ್ತಿದ್ದಳು. ಕಣ್ಣುಬಿಟ್ಟು ನೋಡಿದರು. ಆಕೆ ಒಳಹೋಗಿ ಎನ್ನುವಂತೆ ಸನ್ನೆ ಮಾಡಿದಳು. ಸೀತಾರಾಮ ಶಾಸ್ತ್ರಿಗಳು ನೀವೇ ಹೋಗಿ ಎನ್ನುವಂತೆ ಮರುಸನ್ನೆ ಮಾಡಿದರು. ಹೀಗೆ ಒಬ್ಬೊಬ್ಬರನ್ನಾಗಿ ಇವರೇ ಕಳುಹಿಸಿಕೊಟ್ಟರು. ಸುಮಾರು ಆರೂಕಾಲಿರಬೇಕು, ಯಾರೂ ಉಳಿದಿರಲಿಲ್ಲ. ತಮ್ಮದೇ ಸರದಿ. ತಪ್ಪಿಸಿಕೊಳ್ಳುವಂತಿಲ್ಲ. ಎದ್ದರು. ಬಾಗಿಲಿಗೆ ಹಾಕಿದ ತೆರೆಯನ್ನು ಸರಿಸಿ ಒಳಗೆ ಅಡಿಯಿಟ್ಟರೋ ಇಲ್ಲವೋ, ಜಂಘಾಬಲವೇ ಉಡುಗಿದಂತಾಯ್ತು. ಡಾ. ಅರುಣ ಗಂಡಸಲ್ಲ, ಹೆಂಗಸು.

"ಎಸ್, ಏನಾಗಬೇಕಿತ್ತು..."

ಏನು ತಾನೇ ಹೇಳುತ್ತಾರೆ.

"ಏನೂ ಇಲ್ಲ. ಸರಿಯಾಗೇ ಇದ್ದೇನೆ. ಸುಮ್ನೆ ನೋಡೋಕೆ ಬಂದೆ" ಅಂದವರೇ ಹಿಮ್ಮುಖರಾಗಿ ಹೊರಟುಬಿಟ್ಟರು.

ಮನೆಯ ಹೊಸಿಲು ದಾಟಿ ಒಳ ಕಾಲಿಟ್ಟಾಗ ಎಂಟೂ ಮುಕ್ಕಾಲು. ತಲೆ ಬವಳಿ ಬಂದಂತಾಗಿ, ನಿಧಾನವಾಗಿ ಕೋಣೆಯನ್ನು ಹೊಕ್ಕು, ಚಾಪೆಯ ಮೇಲೆ ಮೈ ಚಾಚಿ ಮಲಗಿಬಿಟ್ಟರು. ರಿಂದಮ್ಮ ಬಂದು ಮೈ ಮುಟ್ಟಿದಾಗ, ಕೆಂಡದಂತೆ ಕಾಯುತ್ತಿತ್ತು. ಮೈ ಪೂರಾ ಬೆವರುತ್ತಿತ್ತು.

"ಏನಾಯ್ತೂಂದ್ರೇ" ಅಂತ ಕೇಳಿದ್ದಕ್ಕೆ, ಸೀತಾರಾಮ ಶಾಸ್ತ್ರಿಗಳು ಅರ್ಧ ನರಳುತ್ತಾ, ಅರ್ಧ ಉತ್ತರ ಕೊಡುವ ಸನ್ನಾಹ ಮಾಡುತ್ತಾ, ಗೊರಗೊರ ಎಂದು, ಬೆರಳಿನಲ್ಲಿ ಸನ್ನೆ ಮಾಡಿದ್ದಕ್ಕೇ ಸುಸ್ತಾಗಿಬಿಟ್ಟರು. ಕುರು ಈಗ ಪೃಷ್ಠದ ಮೇಲೊಂದು ಮರಿ ಪೃಷ್ಠದಂತಾಗಿತ್ತು. ಒಂದೇ ಮಗ್ಗುಲಿಗೆ ತಿರುಗಿ ಮಲಗಲು ಮಾತ್ರ ಸಾಧ್ಯವಾಗುತ್ತಿತ್ತು. ಸ್ವಲ್ಪ ಹೆಚ್ಚೂ ಕಮ್ಮಿಯಾದರೂ ಕುರು ನೆಲಕ್ಕೆ ತಗುಲಿ, ಗರುಡ ಪುರಾಣದ ನರಕ ದರ್ಶನವಾಗಿ ಬಿಡುತ್ತಿತ್ತು.



"ರಿಂದೂ" ಎಂದು ಕ್ಷೀಣವಾಗಿ ಕರೆದರು. ಕುರುವನ್ನು ಪೃಷ್ಠದಲ್ಲಲ್ಲದೆ ಕುತ್ತಿಗೆಯಲ್ಲಿ ಅಮುಕಿಟ್ಟುಕೊಂಡವರಂತಿತ್ತು ಅವರ ದನಿ. ಅಸಹಾಯಕತೆ, ಆಯಾಸ, ಹೇಳಲಾಗದ ಯಾತನೆ, ಅವ್ಯಕ್ತ ಮುಜುಗರ ಎಲ್ಲವೂ ಹನಿಯುತ್ತಿತ್ತು, ಅವರ ಆರ್ತನಾದದಲ್ಲಿ. "ರಿಂದೂ... ಬೆಳಗ್ಗೆ ಶ್ರೀನಿವಾಸನ ಕೈಲಿ ಸ್ಕೂಲಿಗೆ ಬರಲ್ಲಾ ಅಂತ ಹೇಳಿಕಳಿಸು" ಅಂದರು. ಹೆಂಡತಿ ಗಾಳಿ ಹಾಕುತ್ತಿದ್ದಂತೇ ಮಲಗಿಬಿಟ್ಟರು.



ಬೆಳಿಗ್ಗೆ ಸೀತಾರಾಮ ಶಾಸ್ತ್ರಿಗಳು ಎದ್ದಾಗ ಹನ್ನೊಂದೂವರೆಯಾಗಿತ್ತು. ಎದ್ದ ಮಂಪರಿನಲ್ಲೇ, ಎಂದಿನಂತೇ ಬಲಕ್ಕೆ ತಿರುಗಿ ಎದ್ದು ಕೂತರು. ಎಂದಿನಂತೇ, 'ಶ್ರೀರಾಮಚಂದ್ರಾ' ಎಂದು ಭಗವಂತನನ್ನು ನೆನೆಸಿ ಹಾಸಿಗೆ ಬಿಟ್ಟಿದ್ದರು. ಒಮ್ಮೆಲೇ ನೆನಪಾಯಿತು. ಕುರು ಇತ್ತಲ್ಲವೇ... ಆ ನೋವು ಎಲ್ಲಿ ಹೋಯಿತು... ತಮಗರಿವಿಲ್ಲದಂತೇ ಸವರಿ ಕೊಂಡರು. ಅಂತಹ ನೋವೇನೂ ಆಗಲಿಲ್ಲ.

"ರಿಂದೂ...", ಹೆಂಡತಿಯನ್ನು ಕರಿಯುತ್ತಾ ಅಡಿಗೆಮನೆಯತ್ತ ನಡೆದರು. ಬೀಸುಗಾಲಿಕ್ಕಿ ನಡೆದರೂ, ತೊಂದರೆಯಾಗಲಿಲ್ಲ.

"ರಿಂದೂ, ಸರಿ ಹೋಯ್ತು... ನೋವೇ ಇಲ್ಲ ಈಗ" ಅಂದರು.

"ರಾತ್ರೀಯಿಡೀ ನರಳ್ತಾಯಿದ್ರಿ. ನಂಗಂತೂ ಕೇಳೋಕಾಗಲಿಲ್ಲ. ಒಂದ್ಹೊತ್ತಲ್ಲಂತೂ ನಿಮಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ನಾನೇ ನಿಮ್ಮ ನರಳಾಟ ನೋಡಾಕಾಗ್ದೇ ಹಿಚುಕಿಬಿಟ್ಟೆ."

ಒಮ್ಮೆಲೇ ಸೀತಾರಾಮ ಶಾಸ್ತ್ರಿಗಳಿಗೆ ಎದೆ ಧಸಕ್ಕೆಂದಿತು. ಹಾಗಾದರೆ ತಾವು ಕಂಡುಕೊಂಡ ಕಠೋರ ಸತ್ಯವನ್ನು ಈಕೆ ನೋಡಿಬಿಟ್ಟಳೇ? ಜಿಗುಪ್ಸೆಗೆ ಒಳಗಾದಳೇ? ಸತ್ಯದ ಇನ್ನೊಂದು ಮುಖ, ಕಂಡು ಕಂಗೆಟ್ಟಳೆ? ಉಗುಳು ನುಂಗುತ್ತಾ, ಇಡೀ ಶರೀರವನ್ನೇ ಅನುಮಾನದಲ್ಲಿ ಅದ್ದಿಕೊಂಡು ಆಕೆಯನ್ನೇ ನೋಡುವಾಗ, ಎಲ್ಲ ಅರಿತವಳಂತೆ ನಾಚಿಕೆಯಿಂದ ಕೆಂಪಾಗಿ ಹೊಳೆಯುತ್ತ ರಿಂದಮ್ಮ, "ದೀಪ ಹಾಕಲಿಲ್ಲ" ಅಂದವರೇ ಸೀತಾರಾಮ ಶಾಸ್ತ್ರಿಗಳ ಕಣ್ಣಿಗೆ ಬೀಳದಂತೆ ಗೋಡೆಯತ್ತ ತಿರುಗಿದರು.





[illegible]



ಜನಪದ
ಅಂಗಾಮಿ ನಾಗ (ಅಸ್ಸಾಂ)

ಸಂಗ್ರಹ: ಎ.ಕೆ. ರಾಮಾನುಜನ್
ಕನ್ನಡಕ್ಕೆ: ಮಹಾಬಲೇಶ್ವರ ರಾವ್

# ಯಾರು ಬಲಶಾಲಿ?

ಒಂದು ದಿನ ಒಬ್ಬನು ದಾರಿಯಲ್ಲಿ ಒಂದು ಇಲಿಯನ್ನು ಹಿಡಿದ. ಅವನು ಅದನ್ನು ಮನೆಗೆ ತಂದು ಒಂದು ಪೆಟ್ಟಿಗೆಯಲ್ಲಿ ಹಾಕಿದ. ಸ್ವಲ್ಪ ಸಮಯದ ಬಳಿಕ ಅದನ್ನು ಹೊರತೆಗೆದಾಗ, ಆ ಇಲಿ ಆಶ್ಚರ್ಯಕರ ರೀತಿಯಲ್ಲಿ ಓರ್ವ ಸುಂದರ ತರುಣಿಯಾಗಿ ಬೆಳೆದಿತ್ತು. ಈಕೆಯನ್ನು ಅತ್ಯಂತ ಶ್ರೇಷ್ಠ ವ್ಯಕ್ತಿಗೆ ಮದುವೆ ಮಾಡಿಕೊಟ್ಟರೆ ನನಗೆ ಲಾಭವಾದೀತು ಎಂದು ಅವನು ಯೋಚಿಸಿದ. ಪ್ರಪಂಚದಲ್ಲಿ ಅತ್ಯಂತ ಶ್ರೇಷ್ಠ ವ್ಯಕ್ತಿ ಯಾರು? ಎಂದು ಅವನು ಹುಡುಕಲು ಶುರುಮಾಡಿದ. ಹೀಗೆ ಹುಡುಕುತ್ತಾ ಅವನು ಮೊದಲಿಗೆ ತನ್ನ ಕುಲದ ಗುರಿಕಾರನ ಬಳಿಗೆ ಬಂದ. ''ನೀನೇ ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠನಾದ ವ್ಯಕ್ತಿ. ಆದ್ದರಿಂದ ನೀನು ನನ್ನ ಸಾಕುಮಗಳನ್ನು ಮದುವೆಯಾಗು'' ಎಂದು ಹೇಳಿದ.

ಆದರೆ ಗುರಿಕಾರ ಹೇಳಿದ, ''ನನಗೇನೋ ಅವಳನ್ನು ಮದುವೆಯಾಗಬೇಕೆಂಬ ಆಸೆ ಇದೆ. ಆದರೆ ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠ ವ್ಯಕ್ತಿಗೇ ಅವಳನ್ನು ಕೊಟ್ಟು ಮದುವೆ ಮಾಡಬೇಕೆಂಬ ಆಸೆ ನಿನ್ನದು. ಹಾಗೆ ನೋಡಿದರೆ, ನೀರು ನನಗಿಂತ ಹೆಚ್ಚು ಶಕ್ತಿಶಾಲಿ; ಯಾಕೆಂದರೆ ನಾನು ಹೊಳೆ ದಾಟುವಾಗ, ನೀರಿನ ಪ್ರವಾಹ ನನ್ನನ್ನು ಆಚೆ ದಡಕ್ಕೆ ಮುಟ್ಟಿಸುತ್ತದೆ.''

ಹುಡುಗಿಯ ಅಪ್ಪ ನೀರಿನ ಬಳಿಗೆ ಹೋಗಿ ಗುರಿಕಾರನ ಜೊತೆ ಆಡಿದ ಮಾತುಗಳನ್ನೇ ಆಡಿದ. ಆಗ ನೀರು, ''ನಾನೇನೂ ಅಂಥ ಶ್ರೇಷ್ಠನೂ ಅಲ್ಲ ಬಲಿಷ್ಠನೂ ಅಲ್ಲ, ನಾನು ನಿಶ್ಚಲವಾಗಿರುವಾಗ, ಗಾಳಿ ಬೀಸಿ ತೆರೆಗಳನ್ನು ಎಬ್ಬಿಸುತ್ತದೆ; ಆದ್ದರಿಂದ ಗಾಳಿ ನನಗಿಂತ ಮಿಗಿಲಾದುದು'' ಎಂದು ಹೇಳಿತು.

ಆ ಮನುಷ್ಯ ಗಾಳಿಯನ್ನು ಭೇಟಿಯಾದ. ಗಾಳಿ ಹೇಳಿತು, ''ಪರ್ವತ ನನಗಿಂತಲೂ ಬಲಶಾಲಿ. ನಾನು ಎಷ್ಟೇ ಜೋರಾಗಿ ಬೀಸಿದರೂ ಪರ್ವತವನ್ನು ಒಂದಿಂಚೂ ಅಲುಗಿಸಲಾರೆ''. ಕೊನೆಗೆ ಅವನು ಪರ್ವತದ ಬಳಿಗೆ ಹೋದ. ''ನಿಜ, ನಾನು ಅತ್ಯಂತ ಬಲಶಾಲಿ. ಗಾಳಿ ಕೂಡ ನನ್ನನ್ನು ಅಲುಗಾಡಿಸಲಾರದು. ಆದರೆ ಒಂದು ಪುಟ್ಟ ಇಲಿ, ತನಗೆ ಬೇಕೆಂದಾಗ, ನನ್ನನ್ನು ಕೆರೆದು, ಕೊರೆದುಬಿಡಬಹುದು. ಒಂದು ಇಲಿಯ ಮುಂದೆ ನಾನು ಬಲಹೀನ'' ಎಂದು ಪರ್ವತ ನುಡಿಯಿತು.

ಇನ್ನು ಯಾರ ಬಳಿಗೆ ಹೋಗುವುದೆಂದು ಆ ಮನುಷ್ಯನಿಗೆ ಹೊಳೆಯಲಿಲ್ಲ. ಹೀಗಾಗಿ ಅವನು ಮನೆಗೆ ವಾಪಸು ಬಂದ. ಬಂದು ನೋಡುತ್ತಾನೆ! ಆ ಹುಡುಗಿ ಮತ್ತೆ ಇಲಿಯಾಗಿಬಿಟ್ಟಿದ್ದಳು! ಅವನು ಆ ಇಲಿಯನ್ನು ಹೊರಗೆ ಬಿಟ್ಟ.





# ವಕೀಲಿ ವೃತ್ತಿಯ ವರ್ಣಮಯ ವೃತ್ತಾಂತ



ಐವತ್ತು ವರ್ಷಗಳ ಹಿಂದೆ-ಆಗಿನ್ನೂ ಜನ 'Legal profession is the noblest profesison' ಎಂದು ಭಾವಿಸಬಲ್ಲವರಾಗಿದ್ದರು-ವಕೀಲಿ ವೃತ್ತಿಯಲ್ಲಿ ಧುಮುಕಿ ಅಲ್ಲಿನ ರಸಮಯ, ಫಜೀತಿಯ ಪ್ರಸಂಗಗಳಲ್ಲಿ ಪಾಲ್ಗೊಂಡು ಅವನ್ನು ಬರಹಕ್ಕಿಳಿಸಿದವರು ಎಚ್.ಆರ್. ಶಂಕರ ನಾರಾಯಣ (ಹಾ.ರಾ.). ಇತ್ತೀಚೆಗೆ ಪ್ರಕಟಗೊಂಡ ಅವರ 'ವಕೀಲಿ ದಿನಗಳು' ಕೋರ್ಟಿನ ನಿತ್ಯ ವಹಿವಾಟಿನ ಅನೇಕ ಮೋಜಿನ ಪ್ರಸಂಗಗಳನ್ನು ನವಿರಾಗಿ ನಿರೂಪಿಸುವ ಪುಸ್ತಕ. ಆದರಿಂದ ಆಯ್ದ ಕೆಲ ಸರಸ ಸನ್ನಿವೇಶಗಳನ್ನಿಲ್ಲಿ ಕೊಡುತ್ತಿದ್ದೇವೆ.

ವೃತ್ತಿಯಿಂದ ವಕೀಲರಾದ ಹಾ.ರಾ. ಅವರಿಗೆ ಅವರದ್ದೇ ಆದ ಶೈಲಿ, ಮೊನಚು ಸಿದ್ಧಿಸಿದೆ. ಇದರಿಂದ ಕೈಲಾಸಂ, ರಾಶಿ, ಕಸ್ತೂರಿಯಂಥವರ ಬರವಣಿಗೆಯಿಂದ ಸಮೃದ್ಧಗೊಂಡ ಕನ್ನಡ ಹಾಸ್ಯ ಸಾಹಿತ್ಯಕ್ಕೆ ಹೊಸ ಅಧ್ಯಾಯವೊಂದು ಸೇರ್ಪಡೆಯಾಗಿದೆ.

ಐವತ್ತು ವರ್ಷಗಳ ಹಿಂದೆ ವಕೀಲ ವೃತ್ತಿಯನ ಹಿಡಿಯಲು ಬರುತ್ತಿದ್ದವರೂ ವಿರಳ. ಎಲ್ಲರು ಡಾಕ್ಟರಾಗಬೇಕು ಇಲ್ಲವೆ ಇಂಜಿನಿಯರ್ ಆಗಬೇಕ ಎನ್ನುವ ಆಸೆಯನ್ನು ಹೊತ್ತವರೆ. ನಮ್ಮ ಪಕ್ಕ ಮನೆಯಲ್ಲಿದ್ದ ಲಾಯರ್ ಒಬ್ಬರು, 'ಹೋ ಜನ್ಮದಲ್ಲಿ ಯಾರು ಪರೋಪಕಾ ಮಾಡಿರುತ್ತಾನೋ ಅಂಥವನಿಗೆ ಈ ಜನ್ಮದ ಲೋಕೋಪಯೋಗಿ ಇಲಾಖೆಯಲ್ಲಿ ಕೆಲ ಸಿಗುತ್ತದೆ. ಆಗ ಅವನು ಕೊಟ್ಟಿದ್ದನ್ನೆಲ್ಲ ಈಗ ಕೇ ಪಡೆಯುತ್ತಾನೆ. ಆದರೆ ಹಿಂದಿನ ಜನ್ಮದ ಎಲ್ಲರಿಂದಲೂ ಅಷ್ಟೋ ಇಷ್ಟೋ ಪೀಕಿರುವವನ ಈ ಜನ್ಮದಲ್ಲಿ ಲಾಯರಾಗಿ ಅದನ್ನೆಲ್ಲ ತೀರಿಸುತ್ತಾನೆ ಎಂದು ಸರಳವಾಗಿ ವಿವರಿಸಿದರು. ಅದ ಅರ್ಥವಾಗಬೇಕಾದರೆ ಐವತ್ತು ವರ್ಷಗಳಷ್ಟು ಕಾ ಬೇಕಾಯಿತು. ಎಲ್ಲೂ ಸೀಟು ಸಿಗದೆ ಹೋದರ ಲಾ ಕಾಲೇಜೇ ಗತಿ ಎನ್ನುವ ಭಾವನೆ ಆಗ ಬಲವಾಗಿತ್ತು

ಎಲ್ಲಿಯೂ ಸಲ್ಲದವರು ಇಲ್ಲಿ ಸಲ್ಲುತ್ತಿದ್ದರು! Law college is the last resort of a scoundrel ಎಂಬ ಜಾಣ್ನುಡಿಯನ್ನು ಹೇಳಿ ದೊಡ್ಡವರೂ ತಮಾಷೆ ಮಾಡುತ್ತಿದ್ದ ಕಾಲ!

ಸಾಮಾನ್ಯವಾಗಿ ಆ ಕಾಲದಲ್ಲಿ ವಕೀಲಿ ವೃತ್ತಿಯನ್ನು ಹೊಸದಾಗಿ ಆರಂಭಿಸಬೇಕಾದವರು ಅವರ ಜಿಲ್ಲೆಯಲ್ಲಿ ಕೋರ್ಟುಗಳಿದ್ದ ಊರುಗಳನ್ನೇ ಆರಿಸಿಕೊಳ್ಳುತ್ತಿದ್ದರು. ದೊಡ್ಡ ನಗರಗಳಿಗೆ ಹೋಗಿ ಪಕ್ದಂ ಪ್ರಾಕ್ಟೀಸ್ ಪ್ರಾರಂಭಿಸಬೇಕಾದರೆ ಯಾರಾದರೂ ಗಾಡ್ ಫಾದರ್ ಅಥವಾ ಶ್ರೀಮಂತ ಮಾವ ಇರಲೇಬೇಕಿತ್ತು.

ಆ ಕಾಲದಲ್ಲಿ ಲಾಯರುಗಳಿಗೆ ಹೆಣ್ಣು ಕೊಟ್ಟು ಮದುವೆ ಮಾಡಲು ಬೇಕಾದಷ್ಟು ಜನ ಮುಂದಕ್ಕೆ ಬರುತ್ತಿದ್ದರು. ಈಗಿನ ಪರಿಸ್ಥಿತಿಯೇ ಬೇರೆ. ಲಾಯರುಗಳಿಗೆ ಹೆಣ್ಣು ಕೊಡುವುದಕ್ಕೂ, ಮನೆ ಬಾಡಿಗೆಗೆ ಕೊಡುವುದಕ್ಕೂ ಜನ ಈಗ ಹಿಂಜರಿಯುತ್ತಾರೆ. ಆಗಿನ ಕೋರ್ಟ್ ವಾತಾವರಣಕ್ಕೂ ಈಗಿನ ಕೋರ್ಟ್ ವಾತಾವರಣಕ್ಕೂ ಅಜಗಜಾಂತರ ವ್ಯತ್ಯಾಸ. ಆಗ ಕೋರ್ಟಿಗೆ ಜನರು ಹೆದರುತ್ತಿದ್ದರು. ವಕೀಲರಿಗೆ ಹೆಚ್ಚು ಮರ್ಯಾದೆ ಸಿಗುತ್ತಿತ್ತು. 'Legal profession is the noblest profession' ಎಂದು ದೊಡ್ಡ ಲಾಯರುಗಳು ಪದೇ ಪದೇ ಹೇಳುತ್ತಿದ್ದುದನ್ನು ಕೇಳಿ ಹೊಸಬರು ಮನಸ್ಸಿನಲ್ಲಿ ಶ್ರೀಮದ್ ಗಾಂಭೀರ್ಯವನ್ನು ತಾಳಿ ಹೆಮ್ಮೆಪಡುತ್ತಿದ್ದರು.



ಜಿಲ್ಲೆಯಲ್ಲಿ ಹೆಸರುವಾಸಿ ವಕೀಲರಾದ ಎಚ್. ವೆಂಕಟರಾಮಯ್ಯನವರು ನಮ್ಮೂರಿನವರು. ಕರಿಕೋಟು ತೊಟ್ಟು ಮೊದಲನೆಯ ದಿನವೇ ಅವರ ಮನೆಗೆ ಹೋದೆ. ಕಪ್ಪು ಟೈ ಕಟ್ಟಿರಲಿಲ್ಲ. ಅವರೇ ಒಂದು ಕಪ್ಪು ಟೈ ಕೊಟ್ಟು, ಕೋರ್ಟ್ ಡ್ರೆಸ್ ಸರಿಯಾಗಿ ಹಾಕಿಕೊಳ್ಳದೆ ನ್ಯಾಯಾಲಯದ ಮೆಟ್ಟಿಲನ್ನೇ ಹತ್ತಬಾರದು ಎಂದು ಹೇಳಿ ಮೊದಲನೆ ಪಾಠವನ್ನು ಪ್ರಾರಂಭಿಸಿಬಿಟ್ಟರು. ಹೊಸ ಡ್ರೆಸ್ಸಿಗೆ ನಾನು, ಕಂಪನಿ ನಾಟಕದ ನಟನಂತೆ ಬಹುಬೇಗ ಹೊಂದಿಕೊಂಡೆ! ಈಗಲೂ ನಾನು ಕೋಟು ತೊಡದೆ ಮನೆಯಿಂದ ಹೊರಡುವುದೇ ಇಲ್ಲ. ಚೆನ್ನಾಗಿ ಅಭ್ಯಾಸವಾಗಿಬಿಟ್ಟದೆ! ಆ ಕಾಲದಲ್ಲಿ ನಾವು ಕೋಟು ಹಾಕಿಕೊಂಡೇ ಮನೆಯಿಂದ ಕೋರ್ಟಿಗೆ ನಡೆದುಕೊಂಡು ಹೋಗುತ್ತಿದ್ದೆವು. ಈಗ ಕೋಟು ಮತ್ತು ಬ್ಯಾಂಡುಗಳನ್ನು ವಕೀಲರು, ಸಂಘದ ಕಟ್ಟಡದಲ್ಲಿ ಅಥವಾ ಹೈಕೋರ್ಟಿನಲ್ಲಿ ಲಾಕರ್‌ಗಳಲ್ಲಿಟ್ಟಿರುತ್ತಾರೆ. ಅಲ್ಲೇ ಅದನ್ನು ಧರಿಸಿ ಕೋರ್ಟ್‌ಗಳಿಗೆ ಹೋಗುತ್ತಾರೆ.

ಕಪ್ಪು ಕೋಟು ತೊಟ್ಟು ಸಿಟಿ ಬಸ್ಸಿನಲ್ಲಿ ವಕೀಲರು ಪ್ರಯಾಣ ಮಾಡಬಹುದೆ? ಎಂಬ ಚರ್ಚೆ ಒಂದು ದಿನ ಮಿತ್ರರಲ್ಲಿ ನಡೆಯಿತು. ನನ್ನ ಅಭ್ಯಾಸಕ್ಕೆ ಪ್ರತಿಭಟನೆಯನ್ನೂ ಸೂಚಿಸಿದರು. ಅದರಿಂದ ವೃತ್ತಿಯ ಘನತೆಗೆ ಕುಂದುಂಟಾಗುವುದೆಂಬುದು ನನಗಿನ್ನೂ ಅರ್ಥವಾಗಿಲ್ಲ. ಅಲ್ಲದೆ ನಾನೇನು ಕಪ್ಪು ಕೋಟು ತೊಟ್ಟು ಸಿನಿಮಾ ಅಥವಾ ನಾಟಕಕ್ಕೆ ಹೋಗುತ್ತಿಲ್ಲವಲ್ಲ!

ಎಂ.ಆರ್. ಸುಂದರರಾಜ ಅಯ್ಯಂಗಾರ್ ಅವರ ಆಫೀಸಿನಲ್ಲಿ ನಾನು ಒಂದು ವರ್ಷ ಜೂನಿಯರ್ ಆಗಿ ಕೆಲಸ ಮಾಡಿದೆ. ಸೀನಿಯರ್ ಆಫೀಸಿನಲ್ಲಿ ಒಳ್ಳೇ ತರಬೇತಿ ಸಿಕ್ಕಿತ್ತು. ಅವರು ಕೇಸುಗಳನ್ನು ನಡೆಸುತ್ತಿದ್ದ ರೀತಿ ನನ್ನನ್ನಾಕರ್ಷಿಸಿತು! ನಾನು 'ಇಂಡಿಪೆಂಡೆಂಟ್ ಆಫೀಸ್' ತೆರೆಯಲು ನಿರ್ಧರಿಸಿದ್ದೇನೆಂದು ಹೇಳಿದಾಗ, ಅವರು ತುಂಬ ಸಂತೋಷದಿಂದ ಐದು ನೂರು ರೂಪಾಯಿಗಳನ್ನು ನನ್ನ ಜೇಬಿಗೆ ಹಾಕಿ, ಬೀಳ್ಕೊಡುಗೆಯನ್ನು ಟೇ ಕೊಟ್ಟರು. 'ಈ ಹಣ ಏಕೆ ಸಾರ್' ಎಂದು ನಾನು ಸಂಕೋಚದಿಂದ ಕೇಳಿದೆ. 'ಇದು ನನ್ನ ಪದ್ಧತಿ. ಸೀನಿಯರ್ ಪದ್ಧತಿಯೂ ಕೂಡ. ನೀನು ಹೊಸ ಆಫೀಸು ತೆರೆಯಲು ಹೊರಟಿದ್ದೀಯ, ನಿನಗೆ ಸ್ವಲ್ಪ ಹಣ ಬಹುಮಾನದ ರೂಪದಲ್ಲಿ ಕೊಡಬೇಕಲ್ಲವೆ' ಎಂದರು.



ವಕೀಲಿ ವೃತ್ತಿಯ ಬಗ್ಗೆ ಆಗಿನ ಕಾಲದ ಜನಗಳಲ್ಲಿ ವಿಭಿನ್ನ ಅಭಿಪ್ರಾಯಗಳಿತ್ತು. ನ್ಯಾಯಾಧೀಶರು, ವಕೀಲರು ಸಮಾಜದಲ್ಲಿ ಯಾವತ್ತೂ ಗೌರವಕ್ಕೆ ಪಾತ್ರರಾಗಿದ್ದವರೆ. ಆದರೂ ವಕೀಲರ ಬಗ್ಗೆ ಕೆಲವರು ಎರಡು ತರಹದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರು. ಅದೃಷ್ಟ ಮಾಡಿರಬೇಕು ವಕೀಲನಾಗುವುದಕ್ಕೆ ಎಂದು ಹೇಳಿದ್ದನ್ನೂ ಕೇಳಿದ್ದೇನೆ. ಅದಕ್ಕೆ ವಿರುದ್ಧವಾದ ಅಭಿಪ್ರಾಯವು ಹಳ್ಳಿಯ ಕೆಲವು ಜನರಲ್ಲಿ ಮೂಡಿತ್ತು. ಒಂದು ಪ್ರಸಂಗ ಜ್ಞಾಪಕಕ್ಕೆ ಬರುತ್ತದೆ. ಸಮಾರಂಭವೊಂದಕ್ಕೆ ನಮ್ಮೂರಿನ ದೊಡ್ಡ ವಕೀಲರೊಬ್ಬರನ್ನು ಅಧ್ಯಕ್ಷತೆಗೆ ಕರೆದುಕೊಂಡು ಹೋದ ಜೋರಲಿಂಗಯ್ಯನವರು, ಮರ್ಯಾದೆಗೋಸ್ಕರ ತಮ್ಮ ಮನೆಗೂ ಆಹ್ವಾನಿಸಿ, ಸತ್ಕರಿಸಿ, ಅವರ ತಾಯಿಗೆ ದೊಡ್ಡ ಲಾಯರನ್ನು ತೋರಿಸುತ್ತಾ, 'ಇವರು ತುಮಕೂರಿನಿಂದ ಬಂದಿದ್ದಾರೆ, ಪ್ರಸಿದ್ಧ ವಕೀಲರು' ಎಂದು ಹೇಳುತ್ತಾ ಗುಣಗಾನ ಮಾಡಿದರು. ಆ ಮುದುಕಿ ಥಟ್ಟನೆ, 'ಲೋ ಮಗ, ಲಾಯರನ್ನ ಮನೇಗೇಕೆ ಕರೆದುಕೊಂಡು ಬಂದ್ಯೋ ಈ ಮುಚ್ಚಂಜೇಲಿ, ಲಾಯರು ಮನ್ಯಾಗ ಕಾಲಿಟ್ಟರೆ ಮನೆ ಹಾಳಾಗುತ್ತೆ' ಎಂದು ಅವರ ಮುಂದೆ ಹೇಳಿದ್ದು ನನ್ನ ಕಿವಿಗೂ ಬಿತ್ತು. ವಕೀಲರ ಬಗ್ಗೆ ಆ ಮುದುಕಿ ಹೇಳಿದ ಮಾತು ಆ ತಲೆಮಾರಿನ ಅಭಿಪ್ರಾಯವನ್ನು ಪ್ರತಿಧ್ವನಿಸುತ್ತದೆಯೆ ಎಂಬುದನ್ನು ನಾನು ಅನೇಕ ದಿನಗಳು ಯೋಚಿಸಬೇಕಾಯ್ತು.



ವಕೀಲಿ ವೃತ್ತಿಯನ್ನು ಆರಂಭಿಸುವುದಕ್ಕೆ ಮುನ್ನ ಹಿಂದೆಮುಂದೆ ನೋಡುವ ದೌರ್ಬಲ್ಯ ಹೊಸಬರಿಗೆ ಆಗಲೂ ಇತ್ತು. ಇಂದಿಗೂ ಇದೆ. ನಾನು ವೃತ್ತಿಗೆ ಸೇರಿದ ಕಾಲದಲ್ಲೂ, 'profession is over crowded' ಎಂದು ಹೇಳುತ್ತಿದ್ದ ಲಾಯರುಗಳೂ ಇದ್ದರು. ಅವರು ಬದುಕಿದ್ದಿದ್ದರೆ ಈಗೇನು ಹೇಳುತ್ತಿದ್ದರೋ ತಿಳಿಯದು. ಆ ಅಭಿಪ್ರಾಯಕ್ಕೆ ಈಗ ಯಾರೂ ಮನ್ನಣೆ ಕೊಡುವುದಿಲ್ಲ. 'survival of the fittest' ಸೂತ್ರ ವಕೀಲಿ ವೃತ್ತಿಗೂ, ಆ ಕಾಲದಲ್ಲೂ ಅನ್ವಯಿಸುತ್ತಿತ್ತು. ಒಂದು ಗಣನೀಯವಾದ ವ್ಯತ್ಯಾಸವನ್ನು ಅಥವ ಬೆಳವಣಿಗೆಯನ್ನು ಈಗ ಗಮನಿಸಬಹುದು. 50 ವರ್ಷಗಳ ಕೆಳಗೆ ನಮ್ಮೂರಿನಲ್ಲಿ ಮಹಿಳಾ ವಕೀಲರುಗಳಿರಲಿಲ್ಲ. ಬೆಂಗಳೂರು ಬಾರ್‌ಲ್ಲಿ ಮೂರು ನಾಲ್ಕು ಮಹಿಳೆಯರು ಇದ್ದಿರಬಹುದು. ಈಗ ಗಣನೀಯವಾದ ಸಂಖ್ಯೆಯಲ್ಲಿ ಮಹಿಳಾ ಲಾಯರುಗಳು ಪ್ರಾಕ್ಟಿಸ್ ಮಾಡುತ್ತಿದ್ದಾರೆ. ಬೆಂಗಳೂರಿನಲ್ಲಿ ಅವರದೇ ಆದ ಸಂಘ ಸಂಸ್ಥೆಗಳಿವೆ. ಇವರಿಂದ ಬಾರ್‌ಗೆ ಒಂದು ಹೊಸ ಕಳೆ ಬಂದಿತಲ್ಲದೆ ಸತಿಪತಿಯರು ಒಟ್ಟಿಗೆ ಪ್ರಾಕ್ಟಿಸ್ ಮಾಡುವ ಉತ್ಸಾಹ ಚಿಮ್ಮಿದೆ.



ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಒಂದು ಕಳವು ಕೇಸಿನ ವಿಚಾರಣೆ ನಡೆಯುತ್ತಿತ್ತು. ಇಬ್ಬರು ಕಳ್ಳರು ಒಂದು ಕುರಿಮರಿಯನ್ನು ಕದ್ದು, ಒಬ್ಬ ಪೋಲೀಸರ ಕೈಗೆ ಸಿಕ್ಕಿಬಿದ್ದ. ಇನ್ನೊಬ್ಬ ತಪ್ಪಿಸಿಕೊಂಡು ಓಡಿಹೋಗಿದ್ದ. ಸಿಕ್ಕಿಬಿದ್ದ ಅಪರಾಧಿ ಪರ ವಕಾಲತ್ ಹಾಕಿದ್ದ ಲಾಯರು, ಭರ್ಜರಿಯಾಗಿ ವಾದ ಮಾಡಿ, ತಪ್ಪಿಸಿಕೊಂಡು ಓಡಿಹೋಗಿದ್ದ ಆಸಾಮಿ ನಿಜವಾದ ಕಳ್ಳ, ಈಗ ಕೋರ್ಟ್ ಮುಂದಿರುವವನು ನಿರಪರಾಧಿ ಎಂದು ಕೋರ್ಟಿಗೆ ಮನದಟ್ಟು ಮಾಡಿದರು. ಮ್ಯಾಜಿಸ್ಟ್ರೇಟರು ಅಪರಾಧಿಗೆ ಸಂಶಯ ಲಾಭ (benefit of doubt) ಕೊಟ್ಟು ಬಿಡುಗಡೆ ಮಾಡಿದರು. ಒಂದೆರಡು ವಾರಗಳಲ್ಲಿ ತಪ್ಪಿಸಿಕೊಂಡು ಓಡಿಹೋಗಿದ್ದ ಕಳ್ಳನನ್ನು ಹಿಡಿದು, ಪೋಲೀಸರು ಚಾರ್ಜ್‌ಷೀಟು ಹಾಕಿ ವಿಚಾರಣೆಗೆ ಗುರಿಪಡಿಸಿದರು. ಆ ಅಪರಾಧಿ ಪರವೂ ಈ ಲಾಯರೇ ಹಾಜರಾಗಿ ವಾದ ಮಾಡಿದರು. ವಾದ ಕೇಳಿದ ಮ್ಯಾಜಿಸ್ಟ್ರೇಟರು ಅವರ ಗಮನವನ್ನು ಸೆಳೆಯುತ್ತ, ''ವಕೀಲರೆ, 15 ದಿವಸಗಳ ಹಿಂದೆ ಇದೇ ಕೇಸಿನಲ್ಲಿ ತಪ್ಪಿಸಿಕೊಂಡು ಹೋಗಿದ್ದವನು ನಿಜವಾದ ಕಳ್ಳ ಎಂದು

ವಾದ ಮಾಡಿ ಖುಲಾಸೆ ಕೊಡಿಸಿದರಲ್ಲ. ಈಗ ನಿಜವಾದ ಕಳ್ಳ ನಮ್ಮ ಮುಂದೆ ನಿಂತಿದ್ದಾನೆ. ಅದಕ್ಕೇನು ಹೇಳುತ್ತೀರಿ'' ಎಂದು ಕೇಳೇಬಿಟ್ಟರು. ವಕೀಲರು ಜವಾಬು ಕೊಡುತ್ತ, ''ಈಗ ವಿಚಾರಣೆಗೆ ಗುರಿಯಾಗಿರುವ ಅಪರಾಧಿಯೂ ಹಾಗೇ ಹೇಳುತ್ತಿದ್ದಾನೆ ಸ್ವಾಮಿ, ಬಿಡುಗಡೆಯಾದವನೇ ನಿಜವಾದ ಕಳ್ಳ ಎಂದು ಖಡಾಖಂಡಿತವಾಗಿ ಹೇಳುತ್ತಿದ್ದಾನೆ'' ಎಂದರು. ಮ್ಯಾಜಿಸ್ಟ್ರೇಟರು ನಗುತ್ತ ಆರ್ಡರ್ ಬರೆದರು. 'ಇಬ್ಬರಲ್ಲಿ ಒಬ್ಬನಂತೂ ತಪ್ಪಿತಸ್ಥನೆಂದು ನಮಗೆ ಮಂದಟ್ಟಾದರೂ, ಅವರಲ್ಲಿ ಯಾರು ನಿಜವಾದ ತಪ್ಪಿತಸ್ಥನೆಂಬುದು ಮನವರಿಕೆಯಾಗುತ್ತಿಲ್ಲ. ಆದುದರಿಂದ ಈ ಅಪರಾಧಿಯೂ ಸಂಶಯ ಲಾಭಕ್ಕೆ ಅರ್ಹ'' ಎಂದು ಅವನನ್ನೂ ಖುಲಾಸೆ ಮಾಡಿದರು. ಕಾನೂನು ಒಂದು ಕತ್ತೆ ಎಂಬ ಮಾತು ತುಂಬಾ ಸೂಕ್ತ!



ಸಾಮಾನ್ಯವಾಗಿ ವೃತ್ತಿಗೆ ಸೇರಿದ ಲಾಯರುಗಳಿಗೆ ನಾಲ್ಕೈದು ವರ್ಷಗಳಾದರೂ ಸಂಪಾದನೆ ಇರುತ್ತಿರಲಿಲ್ಲ. ನಲವತ್ತು ವರ್ಷಗಳ ಹಿಂದೆ, ಹೊಸದಾಗಿ ಬಂದ ಜೂನಿಯರ್ ಲಾಯರುಗಳಿಗೆ ಸೀನಿಯರ್ ಲಾಯರುಗಳು ಹಣ ಕೊಡುತ್ತಿರಲಿಲ್ಲ. ಕಾಫಿ, ತಿಂಡಿ ಕೊಡಿಸುವ ರೂಢಿ ಇತ್ತು. ಸ್ವತಂತ್ರವಾಗಿ ಕೇಸ್ ನಡೆಸುವುದಕ್ಕೆ ಸೀನಿಯರ್‌ಗಳು ಬಿಡುತ್ತಿರಲಿಲ್ಲ. ಕಟ್ಟುಗಳನ್ನು ಹೊರುವುದು, ಹಿಯರಿಂಗ್ ತಾರೀಖುಗಳನ್ನು ಕೋರ್ಟ್ ಡೈರಿಯಲ್ಲಿ ನೋಡಿ ತಮ್ಮ ಡೈರಿಗೆ ಬರೆದುಕೊಳ್ಳುವುದು. ಕೇಸು ಕೂಗಿಸಿದಾಗ ಸೀನಿಯರ್ ಹೆಸರು ಹೇಳಿ 'ಬರುತ್ತಾರೆ' ಎಂದು ಕೋರ್ಟಿಗೆ ತಿಳಿಸುವುದು, ಇವು ಮುಖ್ಯವಾಗಿ ಜೂನಿಯರ್ ಲಾಯರುಗಳಿಗೆ ನಿಯೋಜಿಸಲ್ಪಡುತ್ತಿದ್ದ ಕೆಲಸಗಳು. ಈಗಲೂ, ನಗರದ ಸಿವಿಲ್ ಕೋರ್ಟುಗಳಲ್ಲಿ ಅಡ್ಜರ್ನ್‌ಮೆಂಟ್ ತೆಗೆದುಕೊಳ್ಳುವುದಕ್ಕೆ ಸೀನಿಯರ್‌ಗಳು ಆಗತಾನೆ ಸೇರಿದ ಜೂನಿಯರ್‌ಗಳನ್ನು ಕಳಿಸುತ್ತಾರೆ. ಕೇಸುಗಳ ವಿದ್ಯಮಾನ ಅವರುಗಳಿಗೆ ಸುತರಾಂ ಗೊತ್ತಿರುವುದಿಲ್ಲ. ಅಂದರೆ ಸೀನಿಯರುಗಳು ಹೇಳಿರುವುದಿಲ್ಲ. 'ಸೀನಿಯರ್ ಹೈಕೋರ್ಟಿನಲ್ಲಿ ವಾದ ಮಾಡುತ್ತಿದ್ದಾರೆ', 'ಟೈಮ್ ಬೇಕು' ಇತ್ಯಾದಿ ಕೋರ್ಟಿಗೆ ಹೇಳಿ ಇವರು ನ್ಯಾಯಾಧೀಶರ ಕೋಪಕ್ಕೆ ಪಾತ್ರರಾಗುವುದು ಕೋರ್ಟುಗಳಲ್ಲಿ ಕಾಣುವ ಒಂದು ಸಾಮಾನ್ಯ ದೃಶ್ಯ.



ಕೋರ್ಟಿನಲ್ಲಿ ಒಂದು ದಿನ ಕೇಸ್ ಕೂಗಿಸಿದಾಗ, ಜೂನಿಯರ್ ಲಾಯರೊಬ್ಬರು, ನ್ಯಾಯಾಧೀಶರ ಖಾರವಾದ ಟೀಕೆಯನ್ನು ತಪ್ಪಿಸಿಕೊಳ್ಳುವ ಸಲುವಾಗಿ, ಸಾಕ್ಷಿಗಳು ಬರದೇ ಇದ್ದರೂ, ಮೊದಲನೇ ಸುತ್ತಿನಲ್ಲೇ ಬಹಳ ಗತ್ತಿನಿಂದ 'Ready' ಎಂದಿದ್ದೂ ಅಲ್ಲದೆ, ಒಬ್ಬ ಸಾಕ್ಷಿ ಬಂದಿದ್ದಾನೆ ಅಂತಲೂ ಹೇಳಿದ. ಅಂದು ಹತ್ತಾರು ಕೇಸುಗಳು ವಿಚಾರಣೆಗೆ ಇದ್ದುದರಿಂದ ಕೇಸು ಹೇಗೂ ಅಡ್ಜರ್ನ್ ಆಗುತ್ತೆ ಎಂದು ಅವನ ನಂಬಿಕೆ. ದುರದೃಷ್ಟವಶಾತ್ ಹಾಗಾಗದೆ, ಒಂದು ಗಂಟೆ ಹೊತ್ತಿಗೆ ಎಲ್ಲಾ ಕೇಸುಗಳನ್ನು ಅಡ್ಜರ್ನ್ ಮಾಡಿ, ನ್ಯಾಯಾಧೀಶರು ಇವರ ಕೇಸನ್ನು ಮತ್ತೆ ಮತ್ತೆ ಕೂಗಿಸಿದರು.

ಜೂನಿಯರ್ ಲಾಯರು ಕಕ್ಕಾಬಿಕ್ಕಿಯಾಗಿ, ಬಾರ್ ರೂಮಿನಲ್ಲಿದ್ದ ಸೀನಿಯರ್‌ಗೆ ವಿಷಯ ತಿಳಿಸಿ, ತನ್ನ ಅಚಾತುರ್ಯಕ್ಕೆ ಕ್ಷಮೆ ಕೇಳಿದ. ಸೀನಿಯರ್ ಲಾಯರ್ ನಂಜುಂಡಪ್ಪನವರಿಗೆ ಒಂದು ಉಪಾಯ

ಹೊಳೆಯಿತು. ಬೇರೆ ಕೋರ್ಟಿಗೆ ಇನ್ನೊಂದು ಕೇಸಿನಲ್ಲಿ ಸಾಕ್ಷಿಯಾಗಿ ಬಂದಿದ್ದ ಒಬ್ಬ ಆಸಾಮಿ, ಆ ಕೇಸು ಅಡ್ಜರ್ನ್ ಆಗಿದ್ದರಿಂದ ಆಚೆಕಡೆ ಬಂದು ನಿಂತಿದ್ದ. ಲಾಯರು ಅವನ ಸಹಕಾರ ಕೋರಿ, ಅವನಿಗೆ ಕೆಲವು ಸಂಗತಿಗಳನ್ನು ರಹಸ್ಯವಾಗಿ ಹೇಳಿದರು. ಅವನು ನಿಮಿಷ ಮಾತ್ರದಲ್ಲಿ, ಕೋರ್ಟ್ ಮುಂಭಾಗದ ಕಟ್ಟೆ ಮೇಲೆ, ನ್ಯಾಯಾಧೀಶರಿಗೆ ಕಾಣಿಸುವಂತೆ ಕೈಕಾಲುಗಳನ್ನು ಚಾಚಿಕೊಂಡು ಶವಾಸನದಲ್ಲಿ ಮಲಗಿ ನರಳುವುದಕ್ಕೆ ಪ್ರಾರಂಭಿಸಿದ. ಕೋರ್ಟಿನ ಆವರಣದಲ್ಲಿ ನಿಂತಿದ್ದ ಜನರೆಲ್ಲ ಅವನನ್ನು ನೋಡಿಕೊಂಡು ಹೋಗುತ್ತಿದ್ದರು. ಲಾಯರ್ ನಂಜುಂಡಪ್ಪನವರು ತಕ್ಷಣ ಕೋರ್ಟ್ ಮುಂದೆ ಹಾಜರಾಗಿ, ''ಸ್ವಾಮಿ, ಸಾಕ್ಷಿ ಬೆಳಗಿನಿಂದ ಇಲ್ಲೇ ಕೂತಿದ್ದ. ಬಿಸಿಲಿಗೆ ಜ್ಞಾನ ತಪ್ಪಿ ಮೂರ್ಛೆ ಹೋಗಿದ್ದಾನೆ. ಇನ್ನೂ ಮಾತು ಬಂದಿಲ್ಲ'' ಎಂದರು. ಉತ್ತರವಿಲ್ಲದೆ ಮುನ್ಸೀಫರು ಕೇಸನ್ನು ಅಡ್ಜರ್ನ್ ಮಾಡಿದರು.



'ದೊಡ್ಡ ಲಾಯರಾಗುವ ತನಕ ಕೇಸ್ ಬರೋದಿಲ್ಲ. ಕೇಸು ಬಂದ ಹೊರತು ಕಾಸು ಬರೋದಿಲ್ಲ.' ಇದು ಜೂನಿಯರ್‌ಗಳ ಪರಿಸ್ಥಿತಿ. 'ನೀವಿನ್ನೂ ಚಿಕ್ಕವರು, ಈ ಕೇಸ್ ನಿಮಗೆ ಹೇಗೆ ಕೊಡಲಿ' ಎಂದ ಕಕ್ಷಿದಾರನಿಗೆ, 'ನಿನ್ನ ಕೇಸು ವಿಚಾರಣೆಗೆ ಬರುವ ಹೊತ್ತಿಗೆ ನನಗೆ ವಯಸ್ಸಾಗಿ ಅನುಭವ ಬಂದಿರುತ್ತೆ, ಕೊಡು' ಎಂದೆ. ಕಿರಿಯ ಲಾಯರುಗಳ ಹತ್ತಿರ ಕಿರಿಕಿರಿ ಇರೋದಿಲ್ಲ. ಅವರೇ ಸರಿ ಅಂತ ಕೆಲವು ಕಕ್ಷಿದಾರರು ಜೂನಿಯರ್‌ಗಳಿಗೇ ಸಣ್ಣಪುಟ್ಟ ಕೇಸುಗಳನ್ನು ವಹಿಸುತ್ತಿದ್ದರು. ಸೀನಿಯರ್ ಸಹಾಯ ತೆಗೆದುಕೊಂಡೇ ಅಂಥ ಕೇಸುಗಳನ್ನು ನಾವು ನಡೆಸಬೇಕಾಗಿತ್ತು.

'First Impression is the best impression' ಎನ್ನುವ ಮಾತು ವಕೀಲರಿಗೂ ಅನ್ವಯಿಸುತ್ತದೆ ನ್ಯಾಯಾಧೀಶರಿಗೂ ಅನ್ವಯಿಸುತ್ತದೆ. ವರ್ಗವಾಗಿ ಬಂದ ಹೊಸ ಸಿವಿಲ್ ನ್ಯಾಯಾಧೀಶರೊಬ್ಬರು ಮೊದಲನೇ ದಿನವೇ ತಮ್ಮ ಪ್ರತಿಭೆಯನ್ನು ತೋರಿಸಿ ವಕೀಲರನ್ನು ದಂಗು ಬಡಿಸಿದರು. ತುಂಬಾ 'ಸ್ಟ್ರಿಕ್ಟಾಗಿ' ನಡೆದುಕೊಂಡರು.

ಮೊದಲನೆ ದಿವಸವೇ ಅವರ ಮುಂದೆ ಸಾಮಾನ್ಯವಾದ ಕೇಸೊಂದರಲ್ಲಿ ವಾದ ಮಂಡಿಸಬೇಕಾಗಿತ್ತು. ವಾದ ಪ್ರಾರಂಭಿಸಿದೆ. ವಾದದ ಮಧ್ಯೆ ನ್ಯಾಯಾಧೀಶರು ನಿಮಿಷ ನಿಮಿಷಕ್ಕೂ ಪ್ರಶ್ನೆಗಳನ್ನು ಹಾಕಲು ಪ್ರಾರಂಭಿಸಿದರು. AIR ಪಾಟ್ನ 1945 ಪೇಜ್ 745 ನೋಡಿದ್ದೀರ? ಒರಿಸ್ಸಾ ಹೈಕೋರ್ಟು ತೀರ್ಪು ನಿಮಗೆ ವಿರೋಧವಾಗಿದೆ. I.L.R. ಕಲ್ಕತ್ತ 1965, A.I.R. ಮದ್ರಾಸ್ 1970 ಪೇಜ್ 615, ಸುಪ್ರೀಮ್ ಕೋರ್ಟ್ ಕೇರಳ 745 ನಿಮಗೆ ಅನುಕೂಲವಾಗಿದೆ ಅಂತ ಐದು ನಿಮಿಷಗಳಲ್ಲಿ ಇಷ್ಟೊಂದು ತೀರ್ಪುಗಳ ವಿವರಗಳನ್ನು ಹೇಳಿ ನನ್ನ ಬಾಯಿ ಮುಚ್ಚಿಸಿದರು. ಕೋರ್ಟ್ ಹಾಲ್‌ನಲ್ಲಿ ಕೂತಿದ್ದ ವಕೀಲರೆಲ್ಲ ಮಂಕಾದರು! 'ಅಳಿಯನ ಕುರುಡು ಬೆಳಗಾದ ಮೇಲೆ ಗೊತ್ತಾಯಿತು' ಎನ್ನುವಂತೆ, ಮಧ್ಯಾಹ್ನ ಲೈಬ್ರರಿಗೆ ಹೋಗಿ ಅವರು ಹೇಳಿದ ಸೈಟೇಷನ್ನುಗಳನ್ನು ಹುಡುಕಿದೆ. ಒಂದೂ ಸಿಗಲಿಲ್ಲ.



ಮಧ್ಯಾಹ್ನ ವಾದವನ್ನು ಮುಂದುವರಿಸಿದಾಗ, ಕೆಲವು ನನ್ನದೇ ಆದ 'ಅಥಾರಿಟಿ'ಗಳನ್ನು ಕೊಟ್ಟು, ಇನ್ನು ಕೆಲವನ್ನು ಅವರು ಹೇಳಿದ ಹಾಗೆ ಬಾಯಲ್ಲಿ ಹೇಳಿ, ಇದಕ್ಕೆ ಸಂಬಂಧಪಟ್ಟ ಪುಸ್ತಕಗಳು ಇನ್ನೂ ಸಿಕ್ಕಿಲ್ಲ ಸ್ವಾಮಿ, ನನ್ನ ವಾದ

ಇಷ್ಟೇ ಎಂದು ಹೇಳಿ ಕೂತುಕೊಂಡೆ. 'I am glad' ಎನ್ನುತ್ತ, ನೀವೊಬ್ಬರೇ ಇಷ್ಟು ಬೇಗ ಸೈಟೇಷನ್ನುಗಳನ್ನು ಹುಡುಕಿದ್ದು ಎಂದು ತಾರೀಫ್ ಮಾಡಿದರು. ಅವರಂತೆಯೇ ನಾನು 'First impression'ಗೆ ಬಲಿಯಾಗಿದ್ದೆ!



ಹಳ್ಳಿಯಿಂದ ಬರುತ್ತಿದ್ದ ಸಾಕ್ಷಿಗಳು ಗ್ರಾಮ್ಯ ಪದಗಳನ್ನು ಉಪಯೋಗಿಸಿ ಅವರದೇ ಆದ ಭಾಷೆಯಲ್ಲಿ ಸಾಕ್ಷ್ಯವನ್ನು ನುಡಿಯುತ್ತಿದ್ದರು. ಕೋರ್ಟುಗಳಲ್ಲಿ ಆ ಕಾಲದ ಆಡುಭಾಷೆಗೆ ಅಷ್ಟೇ ಗೌರವವಿತ್ತು. ಅದನ್ನು ತಿರಸ್ಕರಿಸುತ್ತಿರಲಿಲ್ಲ. ಒಂದು 'ಇನ್‌ಜಂಕ್ಷನ್' ದಾವಾದಲ್ಲಿ ಪ್ರತಿವಾದಿ ಹೆಂಗಸು, ತನ್ನ ಕೇಸ್ ಕೂಗಿಸಿ ಹೆಸರನ್ನು ಕರೆದಾಗ, ''ಟೈಮ್ ಬೇಕು ಸ್ವಾಮಿ, ಲಾಯರನ್ನ ಮಡುಕ್ಕೋತೀನಿ'' ಎಂದಾಗ, ನ್ಯಾಯಾಧೀಶರು, ಕೋರ್ಟಿನಲ್ಲಿ ಕೂತಿದ್ದ ವಕೀಲರ ಸಾಲಿನ ಕಡೆ ಬೆಟ್ಟು ಮಾಡಿ ತೋರಿಸುತ್ತ, ''ಇವರಲ್ಲಿ ಯಾರನ್ನ ಬೇಕಾದರೂ ಮಡಿಕ್ಕೊ'' ಎಂದರು. ಕೋರ್ಟಿನಲ್ಲಿ ನಗುವಿನಲೆ ಎದ್ದಿತು.

ಇನ್ನೊಮ್ಮೆ ರಾಣಿಬೆನ್ನೂರಿನಿಂದ ಬಂದಿದ್ದ ಒಬ್ಬ ಸಾಕ್ಷಿ, ಮುನಸೀಫ್ ಕೋರ್ಟಿನಲ್ಲಿ ಸಾಕ್ಷ್ಯ ಕೊಡುತ್ತಾ, ಬಾರಿ ಬಾರಿಗೂ ಪ್ರತಿವಾದಿಯನ್ನು 'ರಂಡೇ ಮಗ' ಎಂದು ಸಂಬೋಧಿಸುತ್ತಿದ್ದ. ಇದರಿಂದ ಬೇಸರಗೊಂಡ ಮುನ್ಸೀಫರು, ''ಬೈಗಳದ ಮಾತುಗಳನ್ನು ಕೋರ್ಟಿನಲ್ಲಿ ಹೇಳಬಾರದು, ಸುಮ್ಮನೆ ಹೆಸರು ಹೇಳಿ ಸಾಕು'' ಎಂದು ಎಚ್ಚರಿಕೆ ಕೊಟ್ಟರು. ಅದಕ್ಕೆ ಆ ಸಾಕ್ಷಿ, ''ರಂಡೇ ಮಗ ಅನ್ನೋದು ಬೈಗಳ ಅಂತ ಈ ರಂಡೇ ಮಗನಿಗೆ ಹೇಗೆ ಗೊತ್ತಾಗಬೇಕು ಸಾಹೇಬ್ರ'' ಎಂದು ಮತ್ತೆ ಅದೇ ಪ್ರಯೋಗವನ್ನು ಮಾಡಿದ! ಸಾಕ್ಷ್ಯವನ್ನು ನಿರಾಕರಿಸುವಂತಿಲ್ಲ. ಸಾಕ್ಷಿಯನ್ನು ದಂಡಿಸುವಂತೆಯೂ ಇಲ್ಲ!

ಕೋರ್ಟ್ ಭಾಷೆ ಇಂಗ್ಲಿಷ್ ಆಗಿದ್ದುದರಿಂದ ವಿಚಾರಣೆ ಕನ್ನಡದಲ್ಲಿ ನಡೆದರೂ ಸಾಕ್ಷಿಗಳು ಹೇಳಿದ್ದನ್ನು ಇಂಗ್ಲಿಷಿಗೆ ತರ್ಜುಮೆ ಮಾಡಿಕೊಂಡು ಬರೆದುಕೊಳ್ಳಲಾಗುತ್ತಿತ್ತು. ಭಾಷಾಂತರದ ಸಮಸ್ಯೆ ಆ ಕಾಲದಲ್ಲಿಯೇ ಉದ್ಭವವಾಗಿತ್ತು. 'ನನ್ನ ಚಿಕ್ಕಪ್ಪ' ಎನ್ನುವ ಮಾತಿಗೆ, 'My little father' ಎಂದು, 'ಭೂಮಿ ಮಾಡ್ತೀನಿ ಸ್ವಾಮಿ' ಎಂಬುದಕ್ಕೆ 'I am doing land' ಎಂದು, ಹೆಂಡತಿ ಸತ್ತು ಹೋಗಿದ್ದರೆ ಗಂಡ 'Male Widow' ಎಂದೂ ತರ್ಜುಮೆಯಾಗುತ್ತಿದ್ದುದುಂಟು.

ಒಮ್ಮೆ ಸೀನಿಯರ್ ಒಂದು ಸ್ವಾರಸ್ಯವಾದ ಪ್ರಸಂಗವನ್ನು ಹೇಳಿದರು. ಅವರು ನಗರದ ಒಬ್ಬ ಲಾಯರೊಬ್ಬರ ಆಫೀಸಿಗೆ ಹೋಗಿದ್ದರಂತೆ. ಸೊಗಸಾದ ಲೈಬ್ರರಿ; ನಾಲ್ಕೈದು ಬೀರುಗಳ ತುಂಬಾ ಪುಸ್ತಕಗಳು. A.I.R. ಬೌಂಡ್ ವಾಲ್ಯೂಮುಗಳು ಕಪಾಟದಲ್ಲಿ ಮಿಂಚುತ್ತಿದ್ದವಂತೆ. ಬೀರು ತೆಗೆದು ಅವರು, ಒಂದು ಅಥಾರಿಟಿಯನ್ನು ಕೈಗೆತ್ತಿಕೊಂಡು ರಟ್ಟು ಬಿಚ್ಚಿದರಂತೆ. ಒಳಗೆ ಪುಸ್ತಕವೇ ಇರಲಿಲ್ಲ! ಪರೀಕ್ಷೆ ಮಾಡಿದಾಗ, ಎಲ್ಲಾ ವಾಲ್ಯೂಮುಗಳೂ 'ಗಿಲ್ಟ್ ಎಡ್ಜ್' ಹೊದಿಕೆಗಳನ್ನು ತೊಟ್ಟು ಮೆರೆಯುತ್ತಿದ್ದವಂತೆ. ಒಳಗೆ ಪುಸ್ತಕ ಮಾತ್ರ ಇಲ್ಲ. ಇದರ ಮರ್ಮವನ್ನು ಕೇಳಿದ್ದಕ್ಕೆ ಆ ವಕೀಲರು, ''ನೋಡಿ, ವಕೀಲನ ಲೈಬ್ರರಿ ತುಂಬಾ ಆಕರ್ಷಕವಾಗಿರಬೇಕು. ಕಕ್ಷಿದಾರ ಆಫೀಸಿಗೆ ಕಾಲಿಟ್ಟ ತಕ್ಷಣ ಒಳಗಡೆ ಪುಸ್ತಕ ನೋಡುತ್ತಾನೆ. ಹೊರಗೆ ಬೋರ್ಡ್ ನೋಡ್ತಾನೆ. ಎಷ್ಟು ಪುಸ್ತಕಗಳನ್ನು ಕೊಳ್ಳಲು ಸಾಧ್ಯ? 'ಷೋ' ಇದೆಲ್ಲ' ಎಂದರಂತೆ! ಹಾಗೆಯೇ 'ಬೋರ್ಡು ಹಳೆಯದಾಗಿದ್ದರೆ ಲಾಯರು ಹಳಬರು, ಅನುಭವಸ್ಥರು ಎಂದು ಕಕ್ಷಿದಾರ ತಿಳಿಯುತ್ತಾನೆ. ಈ ವೃತ್ತಿಯಲ್ಲಿ ಇದೆಲ್ಲ ಮುಖ್ಯ' ಎಂದರಂತೆ!

ಈಗ ಪರಿಸ್ಥಿತಿ ಬದಲಾಯಿಸಿದೆ.



ಆ ಕಾಲದಲ್ಲಿ ವಕೀಲರು ಮತ್ತು ನ್ಯಾಯಾಧೀಶರ ಸಂಬಂಧ ತುಂಬಾ ಅನ್ಯೋನ್ಯವಾಗಿತ್ತು. ಆದರೆ ಅದು ಸ್ವಪ್ರಯೋಜನಕ್ಕೆ ಬಳಸಬಾರದಂಥ ಸಿರಿ! ನ್ಯಾಯಾಧೀಶರು ತುಂಬಾ ಸ್ನೇಹಪ್ರಿಯರು, ಮಾತುಕಥೆ ಚೆನ್ನಾಗಾಡ್ತಾರೆ ಎಂದು ವಕೀಲರು ಎಂಥ ಪರಿಸ್ಥಿತಿಯಲ್ಲೂ ತಮ್ಮ ಸಂಬಂಧವನ್ನು ದುರುಪಯೋಗ ಮಾಡಿಕೊಳ್ಳುತ್ತಿರಲಿಲ್ಲ. ಹಿರಿಯ ವಕೀಲರಾದ ಶ್ರೀ ರಾಮಸ್ವಾಮಿಯವರು, 'ನ್ಯಾಯಾಧೀಶರೂ, ವಕೀಲರೂ ಕಲೆತು ಇಸ್ಪೀಟ್ ಆಟವನ್ನು ಆಡುತ್ತಿದ್ದೆವು' ಎಂದು ಹೇಳಿದರೆ ಈಗ ನಂಬುವುದೇ ಕಷ್ಟ.

ಒಂದು ದಿನ ಒಬ್ಬ ನ್ಯಾಯಾಧೀಶರ ಮುಂದೆ ಒಂದು ಮೊಕದ್ದಮೆಯ ವಿಚಾರಣೆಯನ್ನು ಶಾಸ್ತ್ರಿ ಅವರು ನಡೆಸಬೇಕಾಗಿತ್ತು. ಅದರ ಹಿಂದಿನ ರಾತ್ರಿ, ನಡೆದ ಇಸ್ಪೀಟ್ ಕಛೇರಿ ಭರಾಟೆಯಿಂದ ಮಾರನೆ ದಿವಸ ಅವರು ಕೋರ್ಟಿಗೆ ಸಕಾಲಕ್ಕೆ ಹೋಗಲು ಆಗಲಿಲ್ಲವಂತೆ! ಜೂನಿಯರ್‌ಗೆ 'ಅಡ್ಜರ್ನ್‌ಮೆಂಟ್' ತೆಗೆದುಕೊಳ್ಳುವಂತೆ ಆದೇಶ ಕೊಟ್ಟು ಕಳಿಸಿದರಂತೆ. ಜೂನಿಯರ್ ಲಾಯರು, ''ಸೀನಿಯರ್ ಕೋರ್ಟಿಗೆ ಬಂದಿಲ್ಲ ಸ್ವಾಮಿ, ಕಾರಣ ನಿಮಗೇ ಗೊತ್ತು, ಅಡ್ಜರ್ನ್‌ಮೆಂಟ್ ಬೇಕು'' ಎಂದರಂತೆ. ನ್ಯಾಯಾಧೀಶರು ಹೇಳಿದ್ದಿಷ್ಟೆ: ''ಯಾಕೆ? ನಾವು ಬಂದಿಲ್ಲವೆ!''

ಇಂದಿನ ಪರಿಸ್ಥಿತಿಯೇ ಬೇರೆ. ನ್ಯಾಯಾಧೀಶರು ಹೊರಗಿನ ಪ್ರಪಂಚದ ಜನರ ಸಂಪರ್ಕವನ್ನಿಟ್ಟುಕೊಳ್ಳುವುದನ್ನು ಬಯಸುವುದಿಲ್ಲ. ಕೋರ್ಟ್ ಒಳಗೆ ಮಾತನಾಡುವಂತೆ ಸಲೀಸಾಗಿ ವಕೀಲರೊಂದಿಗೆ ಊರಿನ ಖಾಸಗಿ ಜಾಗಗಳಲ್ಲಿ ಮಾತಾಡುವುದಕ್ಕೂ ಹಿಂಜರಿಯುತ್ತಾರೆ.!

ನಾನು ಕಂಡ ಒಬ್ಬ ನ್ಯಾಯಾಧೀಶರು ಎಷ್ಟು ಬಿಗಿಮನಸ್ಸುಳ್ಳವರೆಂದರೆ ಅವರು ನಡೆದು ಹೋಗುತ್ತಿದ್ದ ದಾರಿಯಲ್ಲಿ ಲಾಯರೇನಾದರೂ ಬಂದರೆ, ಅವರು ಆ ರಸ್ತೆಯನ್ನೇ ಬಿಟ್ಟು ಬೇರೆ ದಾರಿ ಹಿಡಿದು ಬಿಡುತ್ತಿದ್ದರು.!



ನಾನು ಮತ್ತು ನನಗಿಂತಲೂ ಹಿರಿಯರಾದ ಸಹೋದ್ಯೋಗಿಗಳು ಸಾಮಾನ್ಯವಾಗಿ ಒಟ್ಟಿಗೆ ಮನೆಯಿಂದ ಕೋರ್ಟಿಗೆ ಹೋಗುತ್ತಿದ್ದೆವು. ಆಗಿನ್ನೂ ನಮ್ಮೂರಿಗೆ ಅಧಿಕ ಸಂಖ್ಯೆಯಲ್ಲಿ ಆಟೋಗಳು ಬಂದಿರಲಿಲ್ಲ. ಲಾಯರ್ ಆಫೀಸನ್ನು ಮನೆಯಲ್ಲೇ ನಡೆಸುತ್ತಿದ್ದುದರಿಂದ 10 ಗಂಟೆಗೆ ಊಟ ಮುಗಿಸಿ, ಕೋರ್ಟಿಗೆ ನಡೆದು ಹೋಗುವುದೇ ಅಂದಿನ ಪದ್ಧತಿ. ಬೆಂಗಳೂರಿನಂಥ ನಗರಗಳಲ್ಲಿ ಇಂದು ಪರಿಸ್ಥಿತಿಯೇ ಬೇರೆ. ವಕೀಲರ ಉಪಯೋಗಕ್ಕೆಂದು ಕೋರ್ಟ್ ಆವರಣದಲ್ಲಿ ತೆರೆಯಲ್ಪಟ್ಟಿರುವ ಕ್ಯಾಂಟೀನ್‌ಗಳು ಎಲ್ಲಾ ಊರುಗಳಲ್ಲಿಯೂ ಒಂದೇ ರೀತಿಯಲ್ಲಿರುವುದು ಆಶ್ಚರ್ಯವೇ ಸರಿ.



ಆಗಿನ ಕಾಲದಲ್ಲಿ 'ವಕೀಲರ ಮುಷ್ಕರ' ಎಂಬುದನ್ನು ನಾವು ಕೇಳೇ ಇರಲಿಲ್ಲ ಎನ್ನುತ್ತಾರೆ ಕಕ್ಷಿದಾರರು. ಸಾಮಾನ್ಯ ಜನರೂ ಕೂಡ. ಯಾವ ಕಾರಣಕ್ಕೂ ವಕೀಲರು ಕೋರ್ಟಿಗೆ ಬಹಿಷ್ಕಾರ ಹಾಕಿ ಮುಷ್ಕರ ಮಾಡುತ್ತಿರಲಿಲ್ಲ. ನ್ಯಾಯಾಧೀಶರ ಅಹಿತಕರ ವರ್ತನೆಗೆ ಅಥವಾ ವಕೀಲರನ್ನು ನಿಷ್ಕಾರಣವಾಗಿ ಟೀಕೆ ಮಾಡಿದರೆಂಬ ಕಾರಣಕ್ಕೆ ವಕೀಲರು, ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಲು ಸಂಬಂಧಪಟ್ಟ ನ್ಯಾಯಾಧೀಶರ ಕೋರ್ಟನ್ನು ಬಹಿಷ್ಕರಿಸಿದ ಉದಾಹರಣೆಗಳು ಮಾತ್ರ ಇದ್ದವು. ಅಂತಹ ಪ್ರಕರಣಗಳನ್ನು ಹಿರಿಯರ ಮಧ್ಯಸ್ಥಿಕೆಯಿಂದ ಅಲ್ಲಲ್ಲೇ ಸರಿಪಡಿಸಿಕೊಳ್ಳುತ್ತಿದ್ದವು.

'ಗೆದ್ದವನು ಸೋತ, ಸೋತವನು ಸತ್ತ' ಎನ್ನುವ ಮಾತು ಕೋರ್ಟು ವ್ಯವಹಾರಗಳಲ್ಲಿ ತೊಡಗಿರುವವರ ಬಗ್ಗೆ ಬಹಳ ಹಿಂದಿನ ಕಾಲದಿಂದಲೂ ಕೇಳಿಬರುತ್ತಿದೆ. ನ್ಯಾಯ ವಿತರಣೆಯ ವ್ಯವಸ್ಥೆಯನ್ನು ನಮ್ಮ ಸಮಾಜ

ವಿಮರ್ಶಿಸಿರುವ ಬಗೆ ಇದು. ಗಾದೆಯಂತಿರುವ ಈ ಮಾತಿನ ಅರ್ಥ ಕೋರ್ಟಿಗೆ ಅಲೆಯುವ ಕಕ್ಷಿದಾರರಿಗೆ ಚೆನ್ನಾಗಿ ತಿಳಿದಿದೆ! ಒಂದೊಂದು ಕೇಸಿಗೂ ಏಳು, ಎಂಟು ಸಾಕ್ಷಿಗಳನ್ನು ಕೋರ್ಟಿಗೆ ಪದೇಪದೇ ಕರೆದುಕೊಂಡು ಹೋಗಿ, ಅವರನ್ನು ಸಾಕ್ಷಿ ಕಟ್ಟೆಗೆ ಹತ್ತಿಸಿ, ವಿಚಾರಣೆ ನಡೆಸಬೇಕಾದರೆ ಎಷ್ಟು ಕಸರತ್ತು ಮಾಡಬೇಕೆಂಬುದೂ, ಎಷ್ಟು ಹಣ ಖರ್ಚಾಗುತ್ತೆಂಬುದೂ, ವಾದಿ ಪ್ರತಿವಾದಿಗಳಿಗೇ ಗೊತ್ತು. ವಿಚಾರಣೆ ಆಗಬೇಕಾಗಿದ್ದ ಕೇಸು ಅನಿವಾರ್ಯ ಕಾರಣಗಳಿಂದ ಮುಂದೂಡಲ್ಪಟ್ಟರೆ ಕಕ್ಷಿದಾರ ತಲೆಮೇಲೆ ಕೈ ಹೊತ್ತು ಕೂರುತ್ತಾನೆ. ಈ ಗಾದೆ ಬಹಳ ಕಾಲದಿಂದಲೂ ಚಾಲ್ತಿಯಲ್ಲಿರುವುದರಿಂದ ಹಿಂದೆಯೂ ಇಂಥ ಪರಿಸ್ಥಿತಿ ಇತ್ತೆಂದೇ ತಿಳಿಯಬೇಕಾಗುತ್ತದೆ. ಕೇಸುಗಳು ವಿಚಾರಣೆಯಾಗದೆ ಕೋರ್ಟುಗಳಲ್ಲಿ ಕೊಳೆಯುತ್ತಿರುವುದಕ್ಕೆ ಬೇಕಾದಷ್ಟು ಕಾರಣಗಳಿವೆ. ಕೋರ್ಟ್ ಹಾಲುಗಳ ಬದಲಾವಣೆ, ಕಟ್ಟುಗಳ ವರ್ಗಾವಣೆ, ಇದರಿಂದ ನ್ಯಾಯಾಧೀಶರ ಕೆಲಸದ ಮೇಲೆ ಬೀಳುವ ಒತ್ತಡ, ವ್ಯಾಜ್ಯ ಕಾರಣಗಳ ವ್ಯಾಪ್ತಿ (Jurisdiction) ಬಗ್ಗೆ ಕಾನೂನಿನಲ್ಲಾಗುವ ಬದಲಾವಣೆಗಳು, ಬಾಯ್‌ಕಾಟ್‌ಗಳ ಅವಾಂತರ, ನ್ಯಾಯಾಧೀಶರೇ ಇಲ್ಲದ ಕೋರ್ಟುಗಳು, ವಕೀಲರ ಗೈರು ಹಾಜರಿ ಮುಂತಾದ ನಾನಾ ಕಾರಣಗಳನ್ನು ಪಟ್ಟಿಮಾಡಬಹುದು. ಈ ಪಟ್ಟಿ ಅಪೂರ್ಣವಾಗಿಯೇ ಉಳಿಯುತ್ತದೆ.

'Justice delayed is Justice denied' ಎಂಬ ಸೂಕ್ತಿ ಸವಕಲು ನಾಣ್ಯದಂತೆ ಈಗ ಚಲಾವಣೆಯಲ್ಲಿಲ್ಲ! ಅದರ ಜಾಗದಲ್ಲಿ 'justice hurried, is justice buried' ಎಂಬ ಮಾತು ಕೇಳಿ ಬರುತ್ತಿದೆ.



ಒಂದು ಗಡಿಯಾರದ ಕಳವು ಕೇಸಿನಲ್ಲಿ ನ್ಯಾಯಾಧೀಶರು, ಅಪರಾಧಿಯನ್ನು ಮುಕ್ತಗೊಳಿಸಿ ನಿನ್ನನ್ನು 'ಅಕ್ವಿಟ್' ಮಾಡಿದ್ದೇನೆ ಎಂದರು. ಅಪರಾಧಿ ನಡುಗುತ್ತ, ''ಬೇಡ ಮಹಾಸ್ವಾಮಿ, ಇಷ್ಟು ಸಣ್ಣ ಅಪರಾಧಕ್ಕೆ ಅಷ್ಟು ದೊಡ್ಡ ಶಿಕ್ಷೆಯೆ? ಗಡಿಯಾರ ಮನೇಲಿದೆ. ತಂದು ಕೊಟ್ಟು ಬಿಡುತ್ತೇನೆ'' ಎಂದ.

ಸಿನಿಮಾ ಮಂದಿರದ ಎದುರಿಗೆ 'Wrong Side' ಹೋಗಿ, ಲೈಟ್ ಕಂಬಕ್ಕೆ ಡಿಕ್ಕಿ ಹೊಡೆದನೆಂದು ಸೈಕಲ್ ಸವಾರಿ ಮಾಡುತ್ತಿದ್ದ ಒಬ್ಬ ಯುವಕನನ್ನು ಕೋರ್ಟಿಗೆ ಎಳೆದುಕೊಂಡು ಬಂದು ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಿದರು. ಆ ಯುವಕ, ''ನನ್ನದೇನೂ ತಪ್ಪಿಲ್ಲ ಮಹಾಸ್ವಾಮಿ, ಆ ಸಿನಿಮಾ ಮಂದಿರದ ಮುಂದೆ ಹಾಕಿದ್ದ ಪೋಸ್ಟರ್ ಮೇಲಿದ್ದ ಅರೆನಗ್ನ ತಾರೆಯದು ತಪ್ಪು'' ಎಂದ.

ಒಂದು ಕೇಸಿನಲ್ಲಿ ಸಾಕ್ಷಿಯ ಪಾಟೀ ಸವಾಲು ನಡೆಯುತ್ತಿತ್ತು. ವಕೀಲರು, 'ಈ ಕೃತ್ಯ ನಡೆದಾಗ ನೀನು ಸ್ಥಳದಿಂದ ಎಷ್ಟು ದೂರದಲ್ಲಿದ್ದೆ' ಎಂದು ಸಾಕ್ಷಿಯನ್ನು ಕೇಳಿದರು. ಸಾಕ್ಷಿ ಕರಾರುವಾಕ್ಕಾಗಿ, 'ಐದು ಅಡಿ ಹತ್ತು ಅಂಗುಲ ದೂರದಲ್ಲಿದ್ದೆ' ಎಂದ. ನ್ಯಾಯಧೀಶರಿಗೆ ಆಶ್ಚರ್ಯವಾಯಿತು! 'ಇಷ್ಟೊಂದು ನಿಖರವಾಗಿ ಹೇಳುತ್ತೀಯಲ್ಲ, ಅದು ಹೇಗೆ' ಎಂದು ಕೇಳಿದರು. 'ನನಗೆ ಗೊತ್ತಿತ್ತು, ಯಾರಾದರೂ ಮೂರ್ಖರು ಇಂಥ ಪ್ರಶ್ನೆ ಕೇಳ್ತಾರೆ ಅಂತ, ಅದಕ್ಕೆ ಅಳೆದು ಇಟ್ಟುಕೊಂಡಿದ್ದೆ' ಎಂದ ಸಾಕ್ಷಿ. ■



(ಆಭಾರ – ಲಿಂಗರಾಜು)



## ವಿ.ಎಸ್. ಲಕ್ಷ್ಮೀನಾರಾಯಣ

# ಬಂಗಾರದ ಕಡಲೆ




ಅದೊಂದು ಪುಟ್ಟ ಸಂಸಾರ. ಒಂದು ಪುಟ್ಟ ಮನೆಯಲ್ಲಿ ಗಂಡ, ಹೆಂಡತಿ, ಒಂದು ಮಗು. ಗಂಡ ಕಂಪ್ಯೂಟರ್ ಪ್ರೋಗ್ರಾಮರ್. ಹೆಂಡತಿ ಪೋಸ್ಟ್ ಗ್ರ್ಯಾಜ್ಯುಯೇಟ್, ಕೆಲಸಕ್ಕೆ ಹೋಗಲು ಇಷ್ಟವಿಲ್ಲ. 'ಟ್ವಿಂಕಲ್ ಟ್ವಿಂಕಲ್ ಲಿಟ್ಲ್ ಸ್ಟಾರ್' ಹೇಳಿಕೊಳ್ಳುವ ಮುದ್ದಾದ ಮಗಳನ್ನು ನೋಡಿಕೊಂಡು, ಹಾಯಾಗಿ ಮನೇಲಿರೋದು ಬಿಟ್ಟು, ಹೊರಗಡೆ ಹೋಗಿ ದುಡಿಯೋಕೆ ನನಗೇನು ಕಷ್ಟವಾಗಿದೆ? ಎಂದು ಹೇಳಿ, 'ಪೋಸ್ಟ್ ಗ್ರಾಜುಯೇಟ್ ಆದ್ರೂ, ಈ ಕಾಲಕ್ಕೆ ಬೇಕಾದ ಆಟಿಟ್ಯೂಡ್ ಇಲ್ಲ' ಅಂತ ಅವಳ ಗೆಳತಿಯರ ಕೈಲೆಲ್ಲಾ ಬೈಸಿಕೊಂಡವಳು.

ಮನೆಯ ಮುಂದೆ ಯಾರೋ ಹಾಕಿದ ಪೆಕಸಿ. ಚಿತ್ರದಲ್ಲಿ ಸೀಬೆಯ ಗಿಡ. ಗಿಡದ ತುಂಬಾ ಹಣ್ಣು. ಕೊಂಬೆಗೆ ಕಟ್ಟಿದ ಜೋಕಾಲಿ, ಬಿಡುವಿದ್ದಾಗಲೆಲ್ಲಾ ದೋರೆಗಾಯಿ ಕಚ್ಚುತ್ತಾ, ಜೋಕಾಲಿಯಲ್ಲಿ ಕುಳಿತು ತೂಗಿಕೊಳ್ಳುವುದೆಂದರೆ ಸೀತ್ರೆಗೆ ಎಲ್ಲಿಲ್ಲದ ಸಂತೋಷ. ರಾಘುವನ್ನು ಆಫೀಸಿಗೆ ಕಳಿಸಿ, ಟಿಂಕಿಯನ್ನು ಶಾಲೆಗೆ ಬಿಟ್ಟುಬಂದು, ಹಾಡು ಹೇಳಿಕೊಳ್ಳುತ್ತಾ, ಬಟ್ಟೆ, ಪಾತ್ರೆ ಮುಗಿಸಿಕೊಂಡರೆ, ಸಾಯಂಕಾಲದ ತನಕವೂ ಓದುವುದು, ಇಲ್ಲ ಪಕ್ಕದ ಮನೆಯ ಕಾಲೇಜಿಗೆ ಹೋಗುವ ಹುಡುಗಿಯರ ಜೊತೆಗೆ ಹರಟೆ ಹೊಡೆಯುವುದು, ಗಡದ್ದಾಗಿ ಗಂಟೆ, ಅರ್ಧಗಂಟೆ ನಿದ್ದೆ ಮಾಡುವುದು, ಇಲ್ಲ ಸೀಬೆ

ಮರದ ಕೆಳಗೆ ಉಯ್ಯಾಲೆಯಾಡುವುದು... ಹೀಗೆ ಬಿಡುವು ಎಂದರೆ ಬಿಡುವೇ, ಜೊತೆಗೆ ಗಿಡಕ್ಕೆ ನೀರು, ದಿಂಬಿನ ಕವರು ಹೊಲಿಯುವುದು. ಹೊಂಚಿಕೊಂಡರೆ ಸಾಕಷ್ಟು ಕೆಲಸವೂ ಇದೆ. ಮಾಡಿದರೆ ಸಂತೋಷ. ಮಾಡದಿದ್ದರೆ ಕೇಳುವರ್‍ಯಾರು?

ಆದರೆ ಸೀಬೆ ಗಿಡದಲ್ಲಿ ಒಂದು ದೆವ್ವವಿದೆ ಎಂದು ಅಕ್ಕಪಕ್ಕದವರೆಲ್ಲಾ ಹೇಳಿದರು. ಮನೆ ಬಾಡಿಗೆಯದಾದರೂ ಒಂದು ರೀತಿಯಲ್ಲಿ ಸ್ವಂತದ್ದೆ. ಅದರ ಮಾಲೀಕ ಫಾರಿನ್ನಿನಲ್ಲಿ. ಯಾವಾಗಲೋ ಮೂರು ವರ್ಷಕ್ಕೋ, ಐದು ವರ್ಷಕ್ಕೋ ಒಮ್ಮೆ ಬರುತ್ತಾನೆ. ಪ್ರತೀ ತಿಂಗಳೂ ಬಾಡಿಗೆಯನ್ನು ಶೃಂಗೇರಿಯ ಹತ್ತಿರದ ಒಂದು ಹಳ್ಳಿಗೆ ಮನಿಯಾರ್ಡರ್ ಮಾಡಿದರೆ ತೀರಿತು. ಇಂಥ ಓನರ್ ಎಲ್ಲಾದರೂ ಸಿಕ್ಕುತ್ತಾರೆಯೆ? ಆದರೆ ಮನೆ ತುಂಬಾ ದಿನ ಖಾಲಿ ಬಿದ್ದಿತ್ತು. ಕಾರಣ ದೆವ್ವ. ದೆವ್ವದ ಮನೆಗೆ ಬಾಡಿಗೆಗೆ ಬರಲು ಯಾರು ತಯಾರಿರುತ್ತಾರೆ? ಸೀತೆಗೆ, ಸೀತೆ ಗಂಡನಿಗೆ ಮೊದಲು ಇದು ತಿಳಿಯಲಿಲ್ಲ. ಬ್ರೋಕರ್ ಮೂಲಕ ಮನೆ ನೋಡಿ, ಮಾಲೀಕನ ಕ್ಲಾಸ್‌ಮೇಟ್ ಮನೆಯಿಂದ ಕೀ ಪಡೆದು, ವ್ಯವಹಾರ ಕುದುರಿಸಿ, ಅಡ್ವಾನ್ಸ್ ಕೊಟ್ಟಮೇಲೆ ಅಕ್ಕ ಪಕ್ಕದವರು ಬಾಯಿಬಿಟ್ಟರು. ರಾಘು ಹೆದರಿದರೂ ಸೀತೆ ಹೆದರಲಿಲ್ಲ. ಅವಳ ಕಾಲೇಜು ಕ್ಲಾಸ್‌ಮೇಟ್‌ಗಳೆಲ್ಲಾ ಡ್ರ್ಯಾಕುಲಾ ಸಿನಿಮಾ ನೋಡಲು ಹೆದರುತ್ತಿದ್ದಾಗ, ತಾನೇ ಅವರನ್ನು ಕರೆದುಕೊಂಡು ಹೋಗಿ, ಸಿನಿಮಾ ತೋರಿಸಿ, ಮನೆಮುಟ್ಟಿಸಿ, 'ಧೈರ್ಯಸ್ಥೆ' ಎಂಬ ಸರ್ಟಿಫಿಕೇಟ್ ಸಂಪಾದಿಸಿದ್ದಳು. ಆದರೂ ಅಳುಕು. ನಮಗೇನಾದರೂ ಪರ್ವಾಗಿಲ್ಲ. ಟಿಂಕಿಗೇನಾದರೂ ಆದರೆ?

ಆದರೆ ಏನೂ ಆಗಲಿಲ್ಲ. ಹಿಂದಿದ್ದವರಿಗೆ ಅಷ್ಟೊಂದು ಕಾಟ ಕೊಡುತ್ತಿದ್ದ ದೆವ್ವ, ಸೀತೆ ಸಂಸಾರಕ್ಕೆ ಯಾವ ತೊಂದರೆಯನ್ನೂ ಮಾಡಲಿಲ್ಲ. ನಮಗಿಂತಾ ದೊಡ್ಡ ದೆವ್ವ ಯಾವುದಿದೆ? ಎಂದಳು ಸೀತೆ. 'ನಾವು ಒಳ್ಳೇರಾಗಿ, ನಮ್ಮ ಬುದ್ಧಿ ನಮ್ಮ ಕೈಲಿದ್ರೆ, ಯಾವ ದೆವ್ವಾನೂ ನಮಗೆ ಏನೂ ಮಾಡಲ್ಲ' ಎಂದು ಪಕ್ಕದ ಮನೆಯಾಕೆಯೂ ಧೈರ್ಯ ಹೇಳಿದಳು. ಹಾಗೆಂದ ಮಾರನೆಯ ದಿವಸವೇ, ಆ ಮನೆಯಲ್ಲಿ ರಾತ್ರಿಯ ಹೊತ್ತೆಲ್ಲಾ ಪಾತ್ರೆಗಳು ಶಬ್ದ ಮಾಡತೊಡಗಿದವು. ಹೆದರಿ ಕಂಗಾಲಾದ ನೆರೆಮನೆಯಾಕೆಗೆ ಸೀತೆ, 'ಅಯ್ಯೋ ಅದಕ್ಯಾಕೆ ಹೆದರ್‍ಕೋತೀರ, ಅಡುಗೆಮನೆ ಕಿಟಕೀಗೆ ಜಾಲರಿ ಹೊಡ್ಸಿ ಸರಿಹೋಗುತ್ತೆ' ಎಂದು ಸಲಹೆ ಮಾಡಿದಳು. ಆಮೇಲೆ ಅದು ಹೇಗೋ ಪಾತ್ರೆಗಳು ಶಬ್ದ ಮಾಡುವುದು ನಿಂತೇಹೋಯಿತು.

ಅಮೇರಿಕಾದಲ್ಲಿರೋ ಮನೆ ಮಾಲೀಕನಿಗೆ ಇಂಡಿಯಾಕ್ಕೆ ಬರಲು ಇಷ್ಟ. ಮಕ್ಕಳು ಭಾರತೀಯ ಸಂಸ್ಕೃತಿಯನ್ನು ಮರೆತು ಅಮೇರಿಕಾದೋರ ಥರವೇ ಕುಣಿಯೋದು, ಕಿರುಚೋದು, ಕಾರು ಜೋರಾಗಿ ಬಿಟ್ಟು ಡಿಕ್ಕಿ ಹೊಡೆಸೋದು, ಹ್ಯಾಂ ತಿನ್ನೋದು ಶುರು ಮಾಡಿದ್ರು. ಆತನ ಹೆಂಡತಿಗಂತೂ ಇಂಡಿಯಾ ಕಂಡ್ರೇ ಆಗಲ್ಲ. 'ಏನಿದೆ ಅಲ್ಲಿ ಮಣ್ಣು! ಜನ ಎಲ್ಲಾ ಬರೀ ಕಳ್ರು, ಸೋಮಾರಿಗಳು, ಯಾರಿಗೂ ಟೈಮ್ ಸೆನ್ಸೇ ಇಲ್ಲಾ. ಯಾವಾಗ್ಲೂ ಹರಟೇ ಹೊಡಿಕೊಂಡೇ ಕಾಲ ಕಳೀತಾರೆ. ನಿಜವಾದ ಬುದ್ಧಿವಂತ ರಾದೋರ್ಗೆ ಅಮೇರಿಕಾವೇ ಸರಿಯಾದ ಸ್ಥಳ' ಎಂಬುದು ಅವಳ ವಾದ. ಗಂಡನಿಗೆ ಇಲ್ಲೆ ಇದ್ದು ವೇದ ಕಲಿಯೋಕೆ ಇಷ್ಟ. 'ನೀವು ಬೇಕಾದ್ರೆ ಇಂಡಿಯಾದಲ್ಲೇ ಇರಿ, ನಾವು ಸ್ಟೇಟ್ಸ್‌ಗೆ ಹೋಗ್ತೇವೆ' ಎಂದರು ಮಕ್ಕಳು.

'ಅಲ್ಲಾ, ಹೊಟ್ಟೇಗೆ ಹೊಂಚ್ಕೊಂಡ್ ಮೇಲೆ, ಹಾಯಾಗಿ ಕಾಲ ಕಳೆಯೋದು ಬಿಟ್ಟು ಬೇರೆ ಏನು ಕೆಲಸ ಇದೆ ನಮಗೆ?' ಎಂಬುದು ಗಂಡನ ಫಿಲಾಸಫಿ.

'ಜೀವನ ಅಂದ್ರೆ, ಹೊಟ್ಟೆ ಒಂದೇ ಅಲ್ಲ, ಬೇರೆ ಬೇಕಾದಷ್ಟಿದೆ' ಎಂದು ಹೆಂಡತಿ. 'ಬೇರೆ ಅಂದ್ರೇನು?' ಗಂಡನ ಪ್ರಶ್ನೆ.

ಹೀಗೆ ಗಂಡ-ಹೆಂಡತಿ ಜಗಳ ಮಾಡುತ್ತಿದ್ದರೆ ಅಕ್ಕಪಕ್ಕದ ಮನೆಯವರಿಗೆ, 'ಫಾರಿನ್‌ನಲ್ಲಿದ್ದೋರೂ ಜಗಳಾಡ್ತಾರಾ!' ಎಂದು ಆಶ್ಚರ್ಯ.

ಶೃಂಗೇರಿ ಕಡೆಯ ಹಳ್ಳಿಯೊಂದರಲ್ಲಿ ಹುಟ್ಟಿದ ಆತ, ಸಂಸ್ಕೃತ ಓದಿ, ರ್‍ಯಾಂಕ್ ಪಡೆದು, ಕೆಲ್ಸ ಸಂಪಾದ್ಸಿ, ಅಮೇರಿಕಾಕ್ಕೆ ಹೋಗೋಕೆ ಛಾನ್ಸ್ ಸಿಕ್ಕಾಗ, ಅಪ್ಪ ಬೇಡ ಎಂದರು. 'ಹೋಗಲಿ ಬಿಡಿ, ಮಗನ ದಾರಿಗೆ ಅಡ್ಡ ಬರಬೇಡಿ' ಎಂದು ಹಟ ಹಿಡಿದಳು ಹೆಂಡತಿ. 'ಇಳಿವಯಸ್ಸಲ್ಲಿ ಮಕ್ಕಳು ಹತ್ರ ಇರ್ದೇ ಹೋದ್ರೆ, ಹೆತ್ತು ಏನು ಪ್ರಯೋಜ್ನ?' 'ಅದೆಲ್ಲಾ ನಿಮ್ಮ ಕಾಲಕ್ಕಾಯ್ತು. ಈಗ ಕಾಲ ಬದಲಾಗಿದೆ. ನಿಮ್ಗೆ ಗೊತ್ತಾಗೋಲ್ಲ'. ಯಾವಾಗಲೂ ಅಷ್ಟೆ. ವಯಸ್ಸಾಗುವ ತನಕ ಹೆಂಡತಿ ಗಂಡನ ಪರ. ವಯಸ್ಸಾದ ಮೇಲೆ ಗಂಡುಮಕ್ಕಳ ಪರ. ಇದ್ದ ಒಬ್ಬನೇ ಮಗ ಅಮೇರಿಕಾಕ್ಕೆ ಹೋದ. ಕೆಲಸ ಅಲ್ಲೇ ಖಾಯಂ ಆಯ್ತು. ಮದುವೆ ಮಾಡಿ ಕೊಳ್ಳಲು ಮಾತ್ರ ಇಂಡಿಯಾಕ್ಕೆ ಬಂದ. ಮತ್ತೆ ಅಮೇರಿಕಾ.

ಸೊಸೆಯ ಚೊಚ್ಚಲು ಬಾಣಂತನಕ್ಕೆ ಶೃಂಗೇರಿಯಿಂದ ಹಪ್ಪಳ, ಸಂಡಿಗೆ, ಜೇನುತುಪ್ಪ, ಸೌಭಾಗ್ಯ ಶುಂಠಿ ಎಲ್ಲಾ ತೆಗೆದುಕೊಂಡು ತಾಯಿ ಅಮೇರಿಕಾಕ್ಕೆ ಹೋದಳು. ಅಲ್ಲಿನ ಚಳಿ ತಡೀಲಾರ್ದೇನೋ, ನೀರು ಒಗ್ಗಲಿಲ್ಲವೋ, ಆ ಮುದುಕೀಗೆ ಇಂಡಿಯಾಕ್ಕೆ ವಾಪಸ್ಸು ಬರೋಕೆ ಮನಸ್ಸಿರಲಿಲ್ಲವೋ ಅಥವಾ ಸೊಸೇನೇ ಏನಾದ್ರೂ ವಿಷಗಿಷ ಹಾಕಿದ್ಲೋ ಅವಳು ವಾಪಸ್ಸು ಬರಲೇ ಇಲ್ಲ. ಮಗ ಆಕೆಯ ಚಿತಾಭಸ್ಮ ತಂದು, ತುಂಗೇಲಿ ವಿಸರ್ಜಿಸಿ, ತಾಯಿ ನೆಟ್ಟ ಈ ಮನೆ

ಲೀರೋ ಸೀಬೇ ಗಿಡದ ಬುಡಕ್ಕೂ ಸ್ವಲ್ಪ ಹಾಕಿ
ಅಂತ ಎಲ್ರೂ ಹೇಳೋದು. ಆ ಅಮೆರಿಂಡಿಯ
ತಾಯಿ, ದೆವ್ವ ಆಗಿ ಸೀಬೇ ಗಿಡದಲ್ಲಿ ಸೇರ್ಕೊಂ
ದ್ದಾಳೆ. ತೀರಾ ಸಂಪ್ರದಾಯಸ್ಥರು ಯಾರನ್ನೂ
ಮನೇಲಿರೋಕೆ ಬಿಡಲ್ಲ. ಅಮೇರಿಕಾದಲ್ಲ
ದೆವ್ವಗಳು ಜಾಸ್ತಿನಂತಲ್ಲ. ಅಲ್ಲಿರೋ ತ
ಪರಿಚಯಸ್ಥ ದೆವ್ವಗಳನ್ನು ಮಾತಾಡುಸ್ಕೊಂಡ
ಬರೋಕೋ ಅಥವಾ ಮಗನ್ನ, ಮೊಮ್ಮಕ್ಕಳ
ನೋಡ್ಕೊಂಡ್ ಬರೋಕೋ ಈ ಅ
ರಿಂಡಿಯಾ ದೆವ್ವ ನೆನೆಸಿಕೊಂಡಾಗ ಅಮೇರಿಕಾ
ಹೋಗಿಬರುತ್ತದೆ. ದೆವ್ವಗಳಿಗೇನು ಪಾಸ್‌ಪೋರ್ಟ್
ಬೇಕಿಲ್ಲ, ವೀಸಾ ಬೇಕಿಲ್ಲ. ವಿಮಾನ ಮೊದಲ
ಬೇಡ. ಕಾಲ ದೇಶಗಳ ಕಟ್ಟು ಅವಕ್ಕೆಲ್ಲಿದೆ?

'ಈ ಅಮೆರಿಂಡಿಯಾ ದೆವ್ವ ಅಮೇರಿ
ದಿಂದ ಇಂಡಿಯಾಕ್ಕೆ ಬಂದದ್ದು ಹೇ
ಗೊತ್ತಾಗುತ್ತೆ ಅಂದ್ರೆ, ಅದು ಬಂದಾಗ, ಸೀಬ
ಗಿಡದಲ್ಲಿ, ಅದು ಇರುವಷ್ಟು ದಿವ್ಸಾನೂ, ಬೆಳ
ಮರದಿಂದ ದಿನಾ ಒಂದೊಂದು ದೊ
ಸೀಬೆಹಣ್ಣು ಬಿದ್ದಿರುತ್ತೆ. ಅಮೇರಿಕಾದಲ್ಲಿ ಎಲ್ಲಾ
ದೊಡ್ಡ ದೊಡ್ಡದು ತಾನೆ! ಸುಮ್ನೆ ಹಾ
ನೋಡಿದರೆ ಅಷ್ಟು ದೊಡ್ಡ ಸೀಬೆಹಣ್ಣು ಮರದ
ಎಲ್ಲೂ ಕಾಣಿಸೋಲ್ಲ. ಅದಕ್ಕೇನೇ ದೊ
ಸೀಬೆಹಣ್ಣನ್ನ ಅಕ್ಕಪಕ್ಕದವರ್‍ಯಾದರೂ ಅಪ್ಪಿ ತ
ಕೂಡಾ ತಿನ್ನಲ್ಲ. ಬೇರೆ ತೊಂದ್ರೆ, ಏನೂ ಆಗ
ಇರಲಿ ಅಂತ ರಾಘವೇಂದ್ರ ಸ್ವಾಮಿಗಳ ಗುಡಿ
ಗುರುವಾರ ಗುರುವಾರ ತಪ್ಪದೆ ಹೋಗ್ತಾರೆ.'

ಪಕ್ಕದ ಮನೆ ಕಾಲೇಜು ಹುಡಿಗೇರು ಹೇಳಿ
ಕತೆ ಕೇಳಿ ಸೀತೆ ಗಟ್ಟಿಯಾಗಿ ನಕ್ಕುಬಿಟ್ಟಳು. ''
ಹಾಗೆ ನಗಬಾರ್ದು ಆಂಟೀ, ನೀವು ಪೋಸ್ಟ್ ಗ್ರಾ
ಯೇಟ್, ಮಾಡರ್ನ್, ಅಂಕಲ್‌ಗೆ ಕಂಪ್ಯೂಟ
ಗೊತ್ತೂ ಅಂತ ಆ ದೆವ್ವ ನಿಮಗೇನೂ ಮಾಡಿ
ತನ್ನನ್ನ ಆಡ್ಕೊಂತಾರೇ ಅಂತ ಅದಕ್ಕೇನಾದ
ತಿಳೀತೋ, ನಿಮ್ಮನ್ನ ಸುಮ್ನೆ ಬಿಡಲ್ಲ'' ಎಂದು ಆತ
ದಿಂದಲೇ ಹೇಳಿದರು, ಕಾಲೇಜು ಓದುವ ಹುಡಿಗೇರ

''ಗೊತ್ತಾಗ್ಲಿ ಬಿಡಿ, ಇದನ್ನೆಲ್ಲಾ ನೀವೇ ನನಗೆ ಹೇಳಿದ್ದು, ಅಂತ ಆ ದೆವ್ವಕ್ಕೆ ಹೇಳಿಬಿಡ್ತೀನಿ'' ಎಂದು ಮತ್ತಷ್ಟು ನಕ್ಕಳು ಸೀತೆ. ಹುಡುಗೀರು ಗಂಭೀರವಾಗೇ, ''ಲೊಟ್ಟೆ, ನಮ್ಗಂತೂ ಏನೂ ಮಾಡಲ್ಲ ಆ ದೆವ್ವ, ಯಾಕೆಂದ್ರೆ, ನಾವೆಲ್ಲ ಕಂಪ್ಯೂಟರ್ ಕೋರ್ಸ್‌ಗಳಿಗೆ ಸೇರ್‍ಕೊಂಡು ಬಿಟ್ಟಿದೀವಿ'' ಅಂದ್ರು. ಅದಾದ ಮಾರನೇ ದಿನವೇ ಒಂದು ದೊಡ್ಡ ಸೀಬೆಹಣ್ಣು ಬಿದ್ದಿತ್ತು. ಸೀತೆ ಸಂತೋಷದಿಂದ ಕಚ್ಚಿ ತಿಂದಳು. ಮಗಳಿಗೆ ಒಂದು ಹೋಳು ಕೊಟ್ಟಳು. ಗಂಡನಿಗೂ ಒಂದು ಹೋಳು ತೆಗೆದಿಟ್ಟು ಸಂಜೆ ಬಂದಾಗ ಕೊಟ್ಟಳು. ಅವನೂ ತಿಂದು ಸಂತೋಷ ಪಟ್ಟ. ಮರದಲ್ಲೇ ಹಣ್ಣಾದಾಗ ಅದಕ್ಕೆ ರುಚಿ ಜಾಸ್ತಿ. ಮರುದಿನ ಮತ್ತೊಂದು ದೊಡ್ಡ ಹಣ್ಣು, ಹೀಗೆ ದಿನಾ ಒಂದೊಂದು ಎರಡೆರಡು, ತಿಂದೂ ತಿಂದೂ ಸಾಕಾಯಿತು. ಸೀಬೆಹಣ್ಣು ಎಂದರೆ ಪ್ರಾಣ ಬಿಡುವ ವಯಸ್ಸಿನ ಪಕ್ಕದ ಮನೆ ಹುಡುಗೀರಿಗೆ ಕೊಡಹೋದರೆ ಅವರ್‍ಯಾರೂ ತೆಗೆದುಕೊಳ್ಳಲಿಲ್ಲ. 'ಬೇಡಾ ಆಂಟೀ ಶೀತಾ ಆಗುತ್ತೆ' ಎಂದು ಒಬ್ಬಳು, 'ನಂಗೆ ಟಾನ್ಸಿಲ್ಸ್ ಇದೆ' ಎಂದಳು ಮತ್ತೊಬ್ಬಳು, 'ತಿಂದ್ರೆ ನಮ್ಮಮ್ಮ ಬಯ್ತಾರೆ' ಎಂದು ಓಡಿಹೋದಳು ಎಲ್ಲರಿಗಿಂತ ಚಿಕ್ಕವಳು.

ಒಂದು ದಿನವಂತೂ ಒಟ್ಟಿಗೆ ನಾಲ್ಕು ಹಣ್ಣು ಬಿದ್ದಿದ್ದವು. ಒಳ್ಳೇ ಬೇಲದ ಗಾತ್ರದ, ಚಿನ್ನದ ಬಣ್ಣದ ಹಣ್ಣುಗಳು. ಕಚ್ಚಿದರೆ ಒಳಗೆ ರೆವಲಾನ್ ಲಿಪ್‌ಸ್ಟಿಕ್ ಬಣ್ಣದ ತಿಳುಗಂಪಿನ ತಿರುಳು. 'ಪೆದ್ದು ಹುಡುಗೀರು' ಎಂದುಕೊಂಡು ಸೀತೆ, ಅಲ್ಲೇ ಒಂದು ತಿಂದಳು. 'ಇನ್ನು ಟಿಂಕಿಗೊಂದು, ಗಂಡನಿಗೊಂದು, ಇನ್ನೊಂದು? ಫ್ರಿಜ್ ಇದ್ದಿದ್ದರೆ ಅದರಲ್ಲಿಟ್ಟು ನಾಳೆ ತಿನ್ನಬಹುದಾಗಿತ್ತು' ಅನ್ನಿಸಿತು.

ರಾತ್ರಿ ಊಟವಾದ ಮೇಲೆ ಸೀಬೆಹಣ್ಣು ಕಚ್ಚುತ್ತಾ ಫ್ರಿಜ್ ಸುದ್ದಿ ತೆಗೆದಳು ಸೀತೆ. ರಾಘು ''ಸರೀ ಆದ್ರೆ, ಅದ್ರಿಂದ ನಮಗೇನೂ ಉಪಯೋಗ ಇಲ್ವಲ್ಲಾ?'' ಎಂದು ರಾಗ ತೆಗೆದ.

''ಏನಂತಾ ಕಂಪ್ಯೂಟರ್ ಕೋರ್ಸ್ ಮಾಡಿ ದೀರೋ ನೀವು? ನಿಮಗೆ ಕಂಪ್ಯೂಟರ್ ಯಾತಕ್ಕೆ?''

''ಉತ್ತರ ಭಾಳ ಸುಲಭಾ. ಎಲ್ಲಾ ಕಡೆ ಕಂಪ್ಯೂಟರ್ ಇದೆ. ನಮ್ಮ ಆಫೀಸಿನಲ್ಲೂ ಕಂಪ್ಯೂಟರ್ ಇದೆ. ಕಂಪ್ಯೂಟರ್ ಇಲ್ದೆ ಕೆಲಸ ನಡೆಯೊಲ್ಲ ಅದಕ್ಕೇ''

''ಆಹಾ, ಹೌದಾ, ಹಾಗೇನೇ ಫ್ರಿಜ್ ಎಲ್ಲಾ ಕಡೇನು ಇಲ್ವಾ? ನಮ್ಮ ಮನೇಲೂ ಒಂದು ಯಾಕೆ ಇರಬಾರ್ದು?''

''ನೀನ್ಹೇಳೋದೂ ಸರಿ, ಆದ್ರೆ ಕಂಪ್ಯೂಟರ್‌ನಿಂದ ಬೇಕಾದಷ್ಟು ಉಪಯೋಗ ಇದೆ. ನೀನು ಫ್ರಿಜ್ ತಗೊಂಡು ಏನ್ಮಾಡ್ತೀಯಾ? ಜಾಗ ಬೇರೆ ಇಲ್ಲಾ!''

''ಫ್ರಿಜ್‌ನಿಂದಲೂ ಬೇಕಾದಷ್ಟು ಉಪಯೋಗ ಇದೆಯೆಲ್ಲಾ! ಜಾಗ ಯಾಕಿಲ್ಲ? ಇವೆಲ್ಲಾ ನಾವು ಹೇಗೆ ಬಳಸಿದ್ರೆ, ಹಾಗೆ. ಫ್ರಿಜ್ ಮನೇಲಿದ್ರೆ, ತರಕಾರಿ, ಹಾಲು ಹಣ್ಣುಹಂಪಲು ಎಲ್ಲಾ ಕೆಡದೆ ಇಡಭೋದು. ಅಡುಗೆ ಜಾಸ್ತಿ ಮಾಡಿದ್ರೆ ಇಡಭೋದೂ... ಆಂ ಐಸ್‌ಕ್ರೀಂ ಮಾಡಭೋದೂ.''

''ಸರಿ, ಅದೆಲ್ಲಾ ಗೊತ್ತಿರೋದೇ, ನೀನು ದಿನಾ ಎರಡು ಹೊತ್ತೂ ಬಿಸಿಬಿಸಿಯಾಗಿ ಅಡುಗೆ ಮಾಡಿ ಹಾಕ್ತೀಯ, ಮನೆ ಮುಂದೇನೇ ತರಕಾರಿ ಸಿಗುತ್ತೆ. ಹಾಲೂ ದಿನಾ ಸಿಗುತ್ತೆ. ಸಾಲ್ದೇ ಇದ್ರೆ ಪಕ್ಕದ ಮನೇಲಿ ಒಂದು ಲೋಟ ಕೇಳಿದ್ರೆ ಕೊಡ್ತೊಲ್ಲ ಅಂತಾರ್‍ಯೆ?'' ಸೀತೆಗೆ ತಡೆಯಲಾಗಲಿಲ್ಲ. ''ಅದಲ್ಲಾರೀ, ಫ್ರಿಜ್ ಇದ್ರೆ ಸೀಬೆಹಣ್ಣು ಕೆಡದೆ ತುಂಬಾ ದಿವಸ ಇಡಭೋದು. ಸೀಬೆ ಹಣ್ಣು ಯಾವಾಗ್ಲೂ ಬಿಡುತ್ತಾ?''

ರಾಘು ಗಟ್ಟಿಯಾಗಿ ನಕ್ಕುಬಿಟ್ಟ. ''ಸೀಬೆಹಣ್ಣು ಯಾರಾದ್ರೂ ಫ್ರಿಜ್‌ನಲ್ಲಿ ಇಡ್ತಾರಾ? ಇಟ್ರೆ ಸೇಬು, ದ್ರಾಕ್ಷಿ ಅಂಥಾದ್ದು ಇಡ್ತಾರೆ''

''ಆಗಲಿ ಸೇಬೇ ತರೋಣ ಇನ್ಮೇಲಿಂದ'' ಎಂದಳು ಸೀತೆ.

ಗಂಡ, ಹೆಂಡತಿ, ಸೀಸನಲ್ ಡಿಸ್ಕೌಂಟ್ ಲಿಸ್ಟ್ ಕಳೆದು, ಲೆಕ್ಕಹಾಕಿ, ಹಣ ಜೋಡಿಸಿ ಕೊಂಡು, ಟಿಂಕಿನ್ನೂ ಕರ್ಕೊಂಡು ಸಂಜೆ ಫ್ರಿಜ್ ಷೋರೂಂಗೆ ಹೋದರು. ಮ್ಯಾನೇಜರು ಅವರನ್ನು ನಗುನಗುತ್ತಾ ಕರೆದು, ಕೂಡಿಸಿ, ಟಿಂಕಿಗೂ ಒಂದು ಸಣ್ಣ ಕುರ್ಚಿ ಕೊಟ್ಟು, ಮೂವರಿಗೂ ತಂಪಾದ ಪೆಪ್ಸಿ ಕೊಡಿಸಿದ. ತಂಪಾದ ಪೆಪ್ಸಿ ರಸ ಹೊಟ್ಟೆಗೆ ಹೋಗುತ್ತಿದ್ದಂತೆ 'ಆಹ್' ಎಂದಳು ಸೀತೆ. 'ವಾಹ್' ಎಂದ ರಾಘು. ಟಿಂಕಿ ಪೆಪ್ಸಿ ಕುಡಿದು ಷೋರೂಮಿನಲ್ಲೇ ಬ್ರೇಕ್ ಡ್ಯಾನ್ಸ್ ಮಾಡಿದಳು.

ಫ್ರಿಜ್ ಅಂಗಡಿಯ ಮ್ಯಾನೇಜರು, ನಗು ನಗುತ್ತಾ, ಸೀತೆ ಕೇಳಿದ ಎಲ್ಲಾ ಅನುಮಾನ ಗಳಿಗೂ, ಪ್ರಶ್ನೆಗಳಿಗೂ ಸ್ವಲ್ಪವೂ ಬೇಸರಿಸದೆ ಉತ್ತರ ಕೊಟ್ಟು, ಸೀತೆ ಆರಿಸಿದ ಚೆರ್ರಿ ಬಣ್ಣ ಇದೆಯೋ ನೋಡಿ, ''ಇದೆ, ಗೋಡೌನ್ ನಿಂದ ತರಿಸಬೇಕು, ರೆಡಿ ಇದೆ. ಡೆಲಿವರಿ ಈಗಲೇ ಬೇಕಾದ್ರೂ ಕೊಡುತ್ತೇನೆ'' ಎಂದ. ''ಆದರೆ ಮ್ಯಾಡಂ, ಒಂದು ಮಾತು, ನೀವು ಏನೂ ತಿಳಿದುಕೊಳ್ಳದಿದ್ದರೆ ಒಂದು ಸಲಹೆ. ಒಂದು ಕ್ಷಣ ನಾನು ನಿಮ್ಮ ಬ್ರದರ್ ಎಂದು ತಿಳಿಯಿರಿ. ಮ್ಯಾನೇಜರ್ ಅನ್ನುವುದನ್ನು ಮರೆತುಬಿಡಿ. ನೀವು ಬರೀ ಫ್ರಿಜ್ ಯಾಕೆ ಕೊಳ್ಳುತ್ತೀರಿ? ನಮ್ಮಲ್ಲಿ ಒಂದು ಪ್ಯಾಕೇಜ್ ಡೀಲ್ ಇದೆ. ಮೂವತ್ತೆಂಟು ಸಾವಿರಕ್ಕೆ, ಒಂದು ಫ್ರಿಜ್, ಒಂದು ಕಲರ್ ಟೀವಿ, ಒಂದು ವಾಷಿಂಗ್ ಮಷೀನ್. ಇದರ ಜೊತೆಗೆ ಒಂದು ಮ್ಯೂಸಿಕ್ ಸಿಸ್ಟಮ್ ಫ್ರೀ. ಆಬ್ಸಲ್ಯೂಟ್ಲಿ ಫ್ರೀ, ನೋಡಿ, ಯೋಚಿಸಿ ನೋಡಿ. ಬೇಕಾದ್ರೆ ನಾಳೆ ಬಂದು ಹೇಳಿ ಪರವಾಗಿಲ್ಲ. ಬರೀ ಒಂದು ಫೋನ್ ಮಾಡಿದ್ರು, ಸಾಕು. ಮನೇಗೇ ಕಳಿಸ್ತೀನಿ''

ಸೀತೆ ಗಂಡನ ಕಡೆ ನೋಡಿದಳು. ರಾಘು ಕಣ್ಣರಳಿಸಿ ಅವಳ ಕಡೆಯೇ ನೋಡಿದ. ಇಬ್ಬರೂ ಲೆಕ್ಕಹಾಕಿ ನೋಡಿದರು. ಮ್ಯಾನೇಜರ್ ಅವರಿಗೆ ಸಹಾಯ ಮಾಡಲೆಂದು ತಾನೇ ಟಕ್ ಟಕ್

ಎಂದು ಲೆಕ್ಕ ಹಾಕಿ ತೋರಿಸಿದ. ಹೇ
ನೋಡಿದರೂ, ಅವುಗಳೆಲ್ಲದರ ಬೆಲೆ-ಫ್ರೀ ಗಿ
ಸೇರಿ ಒಟ್ಟು ಬೆಲೆ-ಬಿಡಿಬಿಡಿಯಾಗಿ ಲೆಕ್ಕ ಹಾಕಿ
ಬೆಲೆಗಿಂತ ಐದು ಸಾವಿರ ರೂ ಕಮ್ಮಿ.

ಗಂಡ-ಹೆಂಡತಿ ಯೋಚಿಸಿದರು. ಒಂದ
ಕಲ್ಲಿನಲ್ಲಿ ನಾಲ್ಕು ಹಕ್ಕಿ. ನೋಡಿ, ಇವತ್ತಲ್ಲಾ ನಾ
ವಾಷಿಂಗ್ ಮಷೀನ್, ಕಲರ್ ಟೀವಿ, ಮ್ಯೂಸಿ
ಸಿಸ್ಟಂ ಕೊಂಡುಕೊಳ್ಳಲೇಬೇಕು. ಆಮೇ
ಬೇಕೂ ಅಂದಾಗ ಬೆಲೆ ಜಾಸ್ತಿ. ''ಇಂಥವನ್ನೇ
ಜೀವನದಲ್ಲಿ ಪದೇಪದೇ ಕೊಂಡ್ಕೊಳ್ಳೋ
ಆಗಲ್ಲ. ಅಥವಾ ಸ್ವಲ್ಪ ವರ್ಷ ಕಳೆದ ಮೇ
ನಿಮಗೆ ಈ ಐಟಂಗಳಲ್ಲಿ ಯಾವುದು ಬೇಡ
ಅನ್ನಿಸಿದರೂ, ನಮ್ಮ ಎಕ್ಸ್‌ಛೇಂಜ್ ಆಫರ್‌ನ
ನಿಮಗೆ ಬೇಕಾದರ ಬದಲಾಯಿಸಿಕೊಳ್ಳಬಹುದು
ಡಿಫರೆನ್ಸು ಕೊಟ್ಟರೆ ಆಯಿತು'' ಎಂದು ವಿವರಿಸಿ
ಮ್ಯಾನೇಜರ್.

ಸೀತೆ ಧೈರ್ಯ ಮಾಡಿ, ''ಇಲ್ಲ ಅದ
ನಾವು ಫ್ರಿಜ್‌ಗೆ ಆಗೋವಷ್ಟು ಹಣ ಮಾ
ತಂದಿದ್ವಿ. ಅದಕ್ಕೇ...''

ಮ್ಯಾನೇಜರ್ ಗಟ್ಟಿಯಾಗಿ ನಕ್ಕುಬಿಟ್ಟ.

''ನಾನೆಲ್ಲಿ ಹಣ ಕೇಳ್ದೆ? ಈಗ ತಂದಿರು
ಹಣ ಡೌನ್ ಪೇಮೆಂಟ್ ಅಂತ ಕೊ
ಉಳಿದುದಕ್ಕೆ ಈಸಿ ಇನ್‌ಸ್ಟಾಲ್‌ಮೆಂಟು.'' ಗಂ
ಹೆಂಡತಿಯ ಮುಖಗಳು ಒಟ್ಟಿಗೆ ಅರಳಿದವು.
ಮ್ಯಾನೇಜರ್ ಎಷ್ಟೊಂದು ಒಳ್ಳೆಯವನು.

ಅವರು ಫಾರಂಗಳಿಗೆ ಸಹಿ ಹಾಕಿದರು. ಮ
ವಿಳಾಸ ಕೊಟ್ಟು, ಗುರುತು ಹೇಳಿದ
ಮಾರ್ಕೆಟ್ ಸುತ್ತಿ ಎರಡು ಪ್ಲಾಸ್ಟಿಕ್ ಬಾಟ
ಗಳನ್ನು ಕೊಂಡುಕೊಂಡರು. ಒಂದು ಕೆ.
ಸೇಬು, ಒಂದು ಐಸ್‌ಕ್ರೀಂ ಮಿಕ್ಸ್ ಕೊಂ
ಕೊಂಡು ರಿಕ್ಷಾದಲ್ಲಿ ಮನೆಗೆ ತಲುಪುವ ಹೊ
ಗಾಗಲೇ, ಗಾಡಿಯವನು ಗಾಡಿಯನ್ನು ಮನೆ
ಮುಂದೆ ನಿಲ್ಲಿಸಿ ಅವರಿಗಾಗಿ ಕಾಯುತ್ತಿದ್ದ.

ಈ ಜನ ಎಷ್ಟೊಂದು ಫ್ರಾಂಪ್ಟ್. ಬಿಸಿನ



ಪೀಪಲ್ ಇಷ್ಟೊಂದು ಒಳ್ಳೆಯವರೆಂದು ಗೊತ್ತೇ ಇರಲಿಲ್ಲ.



ಪುಟ್ಟಮನೆ ಈಗ ತೀರಾ ಚಿಕ್ಕದಾಯಿತೆನ್ನಿಸಿತು. ಎಡಗಡೆ ತಿರುಗಿದರೆ ಫ್ರಿಜ್. ಬಲಗಡೆಗೆ ತಿರುಗಿದರೆ ವಾಷಿಂಗ್ ಮಷಿನ್. ಎದುರುಗಡೆ ಟೇಬಲ್ಲಿನ ಮೇಲೆ ಟೀವಿ ಕಪಾಟಿನಲ್ಲಿ ಮ್ಯೂಸಿಕ್ ಸಿಸ್ಟಂ. ಮನೆಯ ಮೇಲೆ ಆಂಟೆನಾ. ಅಕ್ಕಪಕ್ಕದವರೆಲ್ಲಾ ಬಂದು ಬಂದು ನೋಡಿಕೊಂಡು ಹೋದರು. ಎಲ್ಲರದೂ ಒಂದೇ ಪ್ರಶ್ನೆ. 'ಎಷ್ಟು ಕೊಟ್ರಿ? ಎಲ್ಲಿಂದ ತಂದ್ರಿ? ಸ್ವೀಟೆಲ್ಲಿ?' ಸೀತೆ ತಾನೇ ಸ್ವೀಟು ತಯಾರಿಸಿ, ಒಬ್ಬರನ್ನೂ ಮರೆಯದೆ ಎಲ್ಲರಿಗೂ ಕೊಟ್ಟಳು. ಮನೆ ಗಿಜಿಗಿಜಿ ಎನ್ನುತ್ತಿತ್ತು.

ಆದರೇನಂತೆ?

ಫ್ರಿಜ್‌ನಲ್ಲಿ ಪೆಪ್ಸಿ, ತರಕಾರಿ, ಸೇಬು, ಹಾಲಿನ ಪ್ಯಾಕೆಟ್, ಸೀಬೆಹಣ್ಣು. 'ಆಂಟೀ, ಎರಡು ಐಸ್‌ಬಾಕ್ಸ್ ಕೊಡ್ತೀರಾ? ಫ್ರಿಜ್ ಕಲರ್ ಬೊಂಬಾಟಾಗಿದೆ. ಮನೆಗ್ಯಾರೋ ಬಂದಿದ್ದಾರೆ, ಜ್ಯೂಸ್ ಮಾಡಬೇಕು ಅದಕ್ಕೆ.'

ವಾಷಿಂಗ್ ಮಷೀನ್‌ನಲ್ಲಿ, ಸ್ನಾನ ಮಾಡಿ ಬಿಚ್ಚಿದ ಬಟ್ಟೆಗಳು. ಮೂಲೆಯ ಗೂಡಿನಲ್ಲಿ ಸರ್ಫ್. 'ಆಂಟೀ, ಬಟ್ಟೆ ತುಂಬಾ ಚೆನ್ನಾಗಿ ಬೆಳ್ಳಗಾಗುತ್ತೆ. ಕಾಲರ್ ಮಾತ್ರ ಕೈಯ್ಯಲ್ಲೆ ಉಜ್ಜಬೇಕೇನೋ ಅಲ್ವಾ?'

ಟೀವಿಯಲ್ಲಿ ಕ್ರಿಕೆಟ್! ಏರೊಬಿಕ್ಸ್, ಕಾರ್ಟೂನು, ಸೀರಿಯೆಲ್‌ಗಳು, ಸಿನಿಮಾ! ಯಾವುದನ್ನು ನೋಡುವುದು? ಯಾವುದನ್ನು ಬಿಡುವುದು?

'ಆಂಟೀ ಆಂಟೀ, ಸ್ವಲ್ಪ ಕನ್ನಡಾ ಸಿನಿಮಾ ಹಾಕಿ ಆಂಟೀ,' 'ಈ ಡಿಸ್ಕವರಿ ಚಾನಲ್ ನೋಡೋವಾಗ್ಲೇ ಹಾಳಾದ್ದು ಕರೆಂಟು ಹೋಗುತ್ತೆ.' ಮ್ಯೂಸಿಕ್ ಸಿಸ್ಟಂನಲ್ಲಿ ಸುಬ್ಬುಲಕ್ಷ್ಮಿಯ ಸುಪ್ರಭಾತ, ರಾಜಕುಮಾರ್ ಹಾಡಿದ ರಾಘವೇಂದ್ರ ಸ್ವಾಮಿಯ ಭಜನೆ. ಜೋಷಿ ತಾತನ ದಾಸರ ಪದಗಳು. ಟಿಂಕಿಗೆಂದು ಥೆಯ್ಯ ಥೆಯ್ಯ... ಮತ್ತು ರತ್ತೋ ರತ್ತೋ ಕ್ಯಾಸೆಟ್ಟುಗಳು.

ಫ್ರಿಜ್ ಅಂಗಡಿಯವರು ತುಂಬಾ ಒಳ್ಳೆಯವರು. ಪ್ರತೀ ತಿಂಗಳು ಹತ್ತನೇ ತಾರೀಖಿನ ಹೊತ್ತಿಗೆ, ತಾವೇ ಒಬ್ಬನನ್ನು ಮನೆಗೆ ಕಳಿಸಿ, ಇನ್‌ಸ್ಟಾಲ್‌ಮೆಂಟ್ ಹಣ ಪಡೆದು ರಸೀತಿ ಕೊಡುತ್ತಿದ್ದರು. 'ಏನಾದ್ರೂ ತುಂಬಾ ನಂಬಿಕೆ ಈ ಜನಕ್ಕೆ.' ಸ್ವಲ್ಪ ದಿನ ಕಳೆದಮೇಲೆ ವ್ಯಾಕ್ಯೂಮ್ ಕ್ಲೀನರನ್ನು ಅವರೇ ಮನೆಗೆ ಕಳಿಸಿಬಿಟ್ಟರು.

ಈಗೆಲ್ಲಾ ಟೀವಿ ಮುಂದೆ ಊಟ. ಟೀವಿ ಮುಂದೆ ಕಾಫಿ. ಟೀವಿ ಸೀರಿಯಲ್ ಮುಗಿದ ಮೇಲೆಯೇ ಹಾಸಿಗೆ ಹಾಸುವುದು. ಭಾನುವಾರ ಮನೆಗೆ ಯಾರೇ ಬರಲಿ ಟೀವಿ ಸಿನಿಮಾದ ಆತಿಥ್ಯ. 'ಈ ಸೀರಿಯಲ್ ತುಂಬಾ ಚೆನ್ನಾಗಿದೆ ನೋಡ್ಕೊಂಡ್ ಹೋಗಿ.' ರಾತ್ರಿ ಮಲಗುವಾಗ ಅದು ಹೇಗೋ ಹನ್ನೊಂದುವರೆ-ಹನ್ನೆರಡು. ಬೆಳಗ್ಗೆ ಏನು ಮಾಡಿದರೂ ಏಳಕ್ಕಿನ್ನ ಮುಂಚೆ ಎಚ್ಚರವೇ ಆಗುವುದಿಲ್ಲ. ಮಧ್ಯಾಹ್ನ ಸೀಬೆಯ ಮರದ ಕೆಳಗೆ ಉಯ್ಯಾಲೆ ಆಡಲು ಪುರುಸೊತ್ತೇ ಇಲ್ಲ. ಮನೆ ತುಂಬಾ ಸಾಮಾನು. ಆದರೂ ಕ್ಲೀನಾಗಿದೆ, ಡಸ್ಟ್ ಫ್ರೀ.



ರಾಘು ಈಚೀಚೆಗೆ ಕಣ್ಣು ಉರಿಯುತ್ತೆ ಎನ್ನುತ್ತಿದ್ದ. 'ನೀವು ದಿನಕ್ಕೆ ಎಂಟುಗಂಟೆ ಕಂಪ್ಯೂಟರ್ ಮುಂದೆ ಕುಳಿತು ಕೆಲಸ ಮಾಡಿದರೆ ಇನ್ನೇನಾಗುತ್ತೆ. ಟೆಸ್ಟ್ ಮಾಡಿಸಿಕೊಳ್ಳಿ' ಎಂದಳು ಸೀತೆ. ರಾಘು ಕನ್ನಡಕ ಹಾಕಿಕೊಂಡ. ಸೀತೆಗೆ ಗಾಗಲ್ಸ್ ತಂದುಕೊಟ್ಟ. ಟಿಂಕಿಗೆ ಈಗೀಗ ತಿಂಡಿ ಸರಿಯಾಗಿ ಸೇರುವುದಿಲ್ಲ. ಹಸಿವಾದರೆ ಮ್ಯಾಗಿ ಬೇಕು. 'ತಿಂಡಿ ಮಾಡಲು ಲೇಟಾಗುತ್ತದೆ. ಈವತ್ತು ಬ್ರೆಡ್, ಜಾಮ್ ತಿನ್ನು' ಅಂದರೆ ಟಿಂಕಿಗೆ ಸಂತೋಷ. ಟಿಫನ್ ಬಾಕ್ಸಿಗೂ ಅದೇ ಬೇಕು. ಸೀತೆಗೆ ಈಗ ಅಡುಗೆ ಕೆಲಸ ಮೊದಲಿಗಿಂತ ಎಷ್ಟೋ ಸುಲಭ ಅನ್ನಿಸಿತು. ಕ್ಯಾಸೆಟ್ ಕೇಳ್ತಾ

ಅಡಿಗೆ ಮಾಡಿ, ಟೀವಿ ಮುಂದೆ ಬಂದು ಕುಳಿ
ಸುಧಾರಿಸಿಕೊಳ್ಳಬಹುದು. ಅಡಿಗೆ, ದಿನ
ಮಾಡ್ಬೇಕು ಅಂತ ಇಲ್ಲ. ಎರಡು ಮೂ
ದಿನಕ್ಕೊಂದು ಸಲ ಮಾಡಿಟ್ರೆ ಸಾಕು. ತಿನ್ನುವಾ
ಬಿಸಿ ಮಾಡಿಕೊಂಡರಾಯಿತು. ತರಕಾರಿ ದಿನ
ತರೋಕ್ಷಿಲ್ಲ. ಎಷ್ಟೋ ಕೆಲಸ ಉಳೀತು. ಸು
ಕೆಲಸಾ ಕೆಲಸ ಅಂತ ಯಾಕೆ ಒದ್ದಾಡಬೇಕು?



ಸ್ವಲ್ಪ ದಪ್ಪಗಾದ ಸೀತೆ ಬೆಳಗಾಗೆದ್ದು ನೈ
ಧರಿಸಿಯೇ ಜಾಗಿಂಗ್ ಹೊರಟಳು. ಗಂಡನಿ
ಸ್ವಲ್ಪ ಹೊಟ್ಟೆ ಬರುತ್ತಿದೆ ಎಂದು ಅವನನ
ಬಲವಂತವಾಗಿ ಎಬ್ಬಿಸಿಕೊಂಡು ಓಡಿದಳ
ಬೆಳಗಿನ ಗಾಳಿ ತುಂಬಾ ಒಳ್ಳೆಯದ
ಕೊಲೆಸ್ಟರಾಲ್ ಕೂಡ ಕಮ್ಮಿಯಾಗುತ್ತೆ. ಸದ
ಗೇಟಿನ ಬಳಿ ಮಲಗಿರುತ್ತಿದ್ದ ಬೀದಿ ನಾಯಿ, ಈ
ಪಕ್ಕದ ಮನೆ ಗೇಟಿನ ಬಳಿ ಮಲಗಿರುತ್ತಿತ
ಟಿಂಕಿಗೆ ನಾಯಿಯಿಲ್ಲದೆ ಬೇಜಾರಾಗುತ್ತೆ ಅಂ
ಒಂದು ನಾಯಿ ಬೊಂಬೆ ತಂದರು. ಅದು ಬಾ
ಅಲ್ಲಾಡಿಸಲ್ಲ ಅಂತ ಟಿಂಕಿ ಗಲಾಟೆ ಮಾಡಿದ್ದರಿಂ
ಐನೂರು ರೂಪಾಯಿ ಕೊಟ್ಟು, ಕಂಡರೆ ಬಾ
ಅಲ್ಲಾಡಿಸುವ ನಾಯಿಮರಿ ತಂದರು. ಅದೇ ಟ
ಇನ್ ವನ್. ಯಾರೇ ಮನೆಗೆ ಬಂದರೂ ತಕ್ಷ
ತಿಳಿಸುವ ಕಾಲಿಂಗ್ ಬೆಲ್, ಗೇಟಿನ ಕಾವಲುಗಾರ

ಸಂಜೆ ನಾಯಿ ವಾಕಿಂಗ್. ಷಟಲ್ ಕಾ
ಬ್ಯಾಡ್‌ಮಿಂಟನ್. 'ಫಿಟ್‌ನೆಸ್ ಈಸ್ ವ
ಇಂಪಾರ್ಟಂಟ್.' ಭಾನುವಾರ ಗಂಡನ್ನು ಗೋಗರೆ
ಲೂನಾ ಕಲಿಯಲು ಪ್ರಾರಂಭಿಸಿದಳು ಸೀ
ಟೂವೀಲರ್ ಓಡ್ಸೋದ್ ಗೊತ್ತಿದ್ರೆ ಒಳ್ಳೇದಲ್ವಾ

ಈಚೆಗೆ ಸೀಬೆಯ ಮರದಿಂದ ಹಣ್ಣುಗ
ಬೀಳುತ್ತಲೇ ಇರಲಿಲ್ಲ. ಅಮೆರಿಂಡಿಯಾ ದ
ಅಮೇರಿಕಾಕ್ಕೆ ಹೋಗಿರಬೇಕು. ಎಂದೋ
ಫ್ರಿಜ್‌ನಲ್ಲಿ ಇಟ್ಟು ಮರೆತಿದ್ದ ಸೀಬೆಹಣ್ಣು ಇ

ಕಡೆಯೇ ಪೆಪ್ಸಿಬಣ್ಣಕ್ಕೆ ತಿರುಗಿತ್ತು. ಸೀತೆ ಅದನ್ನು ಆಚೆ ಎಸೆದಳು.



ಚರಿತ್ರೆಯಲ್ಲಿ ಬೇರೆ ಬೇರೆ ಯುಗಗಳಿದ್ದಂತೆ, ಈಗಲೂ ಬೇರೆ ಬೇರೆ ಯುಗಗಳು ಒಟ್ಟೊಟ್ಟಿಗೆ ಇವೆ. ಫ್ರೀಯುಗ, ಡಬಲ್‌ಯುಗ, ಶ್ಯಾಂಪೂ, ಸೋಪಿನ ಯುಗ, ಪೇಸ್ಟ್ ಯುಗ, ಬೆಳ್ಳಿ ನಾಣ್ಯಗಳ ಯುಗ, ಸುವರ್ಣ ಯುಗ ಎಂದೆಲ್ಲಾ ಕರೆಯಬಹುದಾದ ಯುಗಗಳನ್ನು ಈ ಶತಮಾನ ಒಟ್ಟಿಗೆ ಸೃಷ್ಟಿಸಿದೆ ಎಂದು ಸೀತೆ ಹೆಮ್ಮೆಯಿಂದ ಅಂದುಕೊಂಡಳು. ಏಕೆಂದರೆ ಒಂದು ಹೇರ್‌ಡೈ ಕೊಂಡರೆ ಒಂದು ಫ್ರೀ. ಒಂದು ಪ್ಯಾಕೆಟ್ ಬ್ಲೇಡ್ ಕೊಂಡುಕೊಂಡಾಗ ಒಂದು ಕಾರು ಬಹುಮಾನ. ಅದೃಷ್ಟ ಬೇಕಷ್ಟೆ. ಒಂದು ಮೆಣಸಿನ ಪುಡಿ ಪ್ಯಾಕೆಟ್ ಕೊಂಡರೆ ಒಂದು ಕೇಜಿ ಚಿನ್ನದ ಗಟ್ಟಿ. ಒಂದು ಕೇಜಿ ತೊಗರಿ ಬೇಳೆಯಲ್ಲಿ ಒಂದು ಚಿನ್ನದ ಕಡಲೇಕಾಳು ಅಡಗಿರಬಹುದು. ಅದೃಷ್ಟ ಬೇಕು. ಅದೃಷ್ಟ ಬೇಕು. ಒಂದು ದಿನಪತ್ರಿಕೆ ಕೊಂಡರೆ ಅರ್ಧ ಕಿಲೋ ಗೋಧಿ ಹಿಟ್ಟು ಫ್ರೀ! ಒಂದು ಊದಿನಕಡ್ಡಿ ಪ್ಯಾಕೆಟ್ ಕೊಂಡರೆ ಒಂದು ಬೆಳ್ಳಿ ನಾಣ್ಯ ಬಹುಮಾನ. ಅದೃಷ್ಟ ಬೇಕು ಅಷ್ಟೆ.

ಸೀತೆಯ ಬಚ್ಚಲುಮನೆಯ ತುಂಬಾ ಟೂತ್‌ಬ್ರಷ್‌ಗಳು, ಶ್ಯಾಂಪೂಗಳು, ನೂರು ಗ್ರಾಂ ಬೆಲೆಯ ನೂರ ಇಪ್ಪತ್ತೈದು ಗ್ರಾಂ ಟೂತ್‌ಪೇಸ್ಟ್‌ಗಳು! ಇನ್ನೂ ಏನೇನೋ.

ಎಷ್ಟೋ ದಿನಗಳಾದ ಮೇಲೆ ಮತ್ತೆ ಸೀತೆ ಸೀಬೆ ಗಿಡದ ಉಯ್ಯಾಲೆಯಲ್ಲಿ ಕುಳಿತು ತೂಗಿಕೊಂಡಳು. ಹಗ್ಗ ಹಳೆಯದಾಯಿತು. ಬೇರೆ ತರಬೇಕು. ಟೈಮೇ ಇಲ್ಲ.

ಸೀಬೆ ಮರದಲ್ಲಿ ಕಾಯಿಗಳು ತುಂಬಾ ಕಮ್ಮಿಯಾಗಿದ್ದವು. ಈ ಪಕ್ಕದ ಮನೆ ಹುಡಿಗೇರು ತುಂಬಾ ಸೋಮಾರಿಗಳು. ಯಾವಾಗ ನೋಡಿದರೂ ಟೀವಿ ಮುಂದೆ ಕುಳಿತುಕೊಳ್ಳ



ಬೇಕೆನ್ನುತ್ತಾರೆ. ಟೀವಿ ಟ್ಯೂಬ್ ಹಾಳಾಗುವುದಿಲ್ಲವೆ? 'ಆಂಟಿ, ಟೀವಿ ಆನ್' ಮಾಡಿ ಅಂದರೆ ಅದೇನು ಬಿಟ್ಟ ಬಂದಿದೆಯಾ. ಇವರಿಗೇ ಒಂದು ಟೀವಿ ಕೊಂಡ್‌ಕೊಳ್ಳೋಕೆ ಏನು ಧಾಡಿ? ಹಾಂ ಟೀವಿ ಒಂದು ಎಜುಕೇಶನ್ ಸಾಧನವೂ ಹೌದು ತಾನೆ! ಈಗ ಸೀತೆಯ ಮನೆಯಲ್ಲಿ ಎಲ್ಲರಿಗೂ ಹಿಂದಿ ಬರುತ್ತದೆ. ಇಂಗ್ಲಿಷ್ ಮೊದಲೇ ಬರುತ್ತಿದೆ. ಇಡೀ ಪ್ರಪಂಚವೇ ಮನೆಯೊಳಕ್ಕೆ ನುಗ್ಗಿ ಬಂದರೆ ಯಾರು ತಾನೆ ಅವಿದ್ಯಾವಂತರಾಗಿ, ಗಮಾರರಾಗಿ ಇರಲು ಸಾಧ್ಯ? ಈಚೆಗ ಸೆಕೆ ಜಾಸ್ತಿ, ಏರ್ ಕೂಲರ್ ಇದ್ರೆ ಚೆನ್ನ.



ಟೀವಿ ಸೀರಿಯಲ್ ನೋಡುತ್ತಿದ್ದ ಗಂಡನನ್ನು ಒರಗಿ ಕುಳಿತು ಸೀತೆ ಕೇಳಿದಳು, "ನಿಮ್ಮನ್ನೊಂದು ಮಾತು ಕೇಳಲೇ?" ಟೀವಿ ನೋಡುತ್ತಿದ್ದ ಟಿಂಕಿ ತಿರುಗಿ, "ಏಕ್ ಬಾತ್ ಪೂಛೂ?" ಎಂದು ನಕ್ಕಳು.

"ಹ್ಞಾಂ. ಹ್ಞಾಂ ಕೇಳು" ಎಂದ ಗಂಡ.

"ನಾನೂ ಕೆಲಸಕ್ಕೆ ಸೇರಿಕೊಂಡರೆ ಹೇಗೆ?"



ರಾಘು, ಸೀತೆಯನ್ನು ಜಿಗಿದಪ್ಪಿದ. ಇದ್ದರೆ ನಿನ್ನಂಥ ಹೆಂಡತಿ ಇರಬೇಕು ಎಂದ. ಆದರೆ ಕೆಲಸ ಸಿಗಬೇಕಲ್ಲವೆ?

ಎರಡು ತಿಂಗಳು ಸತತವಾಗಿ ಪ್ರಯತ್ನಿಸಿದ ಮೇಲೆ, ಟಿಂಕಿ ಓದುವ ಕಾನ್ವೆಂಟಿನಲ್ಲಿ ಕ್ಲಾರ್ಕ್ ಕೆಲಸ ಸಿಕ್ಕಿತು. ಸಂಬಳ ಕಮ್ಮಿ, ಆದರೂ ಪರವಾಗಿಲ್ಲ. ಟಿಂಕಿಯೊಂದಿಗೆ ಹೋಗಿ ಟಿಂಕಿಯೊಂದಿಗೆ ವಾಪಾಸ್ಸಾಗಬಹುದು. ದಿನಾ ಅಡಿಗೆ ಮಾಡಬೇಕಿಲ್ಲ. ಬ್ರೆಡ್, ಜಾಮ್, ಮ್ಯಾಗಿ ಇದೆ. ಫ್ರಿಜ್ ಕೊಂಡುಕೊಂಡಿದ್ದು ಎಷ್ಟು ಒಳ್ಳೆಯದಾಯಿತು.

ಮನೆಯಲ್ಲಿ ಸೀತೆಗೆ ಈಚೆಗೆ ಕೋಪ ಬೇಗ ಬಂದುಬಿಡುತ್ತದೆ. ಸ್ಕೂಲಿನಲ್ಲಿದ್ದಾಗ ಚೆನ್ನಾಗಿರುತ್ತದೆ. ಮನೆಗೆ ಬಂದ ತಕ್ಷಣ ಸಿಡಿಮಿಡಿ. ಸಣ್ಣ ಸಣ್ಣದಕ್ಕೆಲ್ಲಾ ಅಸಾಧ್ಯ ಕೋಪ. ಪಕ್ಕದ ಮನೆಗೆ ಬಂದಿದ್ದ ನೆಂಟರ ಹುಡುಗಿ ಸೀಬೆ ಮರದಲ್ಲಿ ಉಯ್ಯಾಲೆ ಆಡುತ್ತಿದ್ದುದನ್ನು ನೋಡಿದ ಮೇಲೆ ಕೆಂಡ ಕಾರಿದಳು. ''ಕತ್ತೆ ಇದ್ದ ಹಾಗೆ ಇದ್ದೀಯಾ ಅಷ್ಟು ಗೊತ್ತಾಗೊಲ್ವಾ? ನಿನ್ನ ಭಾರ ಈ ಉಯ್ಯಾಲೆ ತಡ್ಕೊಳ್ಳುತ್ತಾ?'' ಹುಡುಗಿ ದೆವ್ವ

ಕಂಡವಳಂತೆ ಹೆದರಿ, ಜಿಗಿದು ಓಡಿಹೋದಳು
ಪಕ್ಕದ ಮನೆಯವರು ಸೀತೆಯೊಂದಿ
ಮಾತು ಬಿಟ್ಟರು. ಪೀಡೆ ಹೋಯಿತು ಎಂ
ಕೊಂಡಳು ಸೀತೆ. ಆದರೂ ಹಾಗೆ ರೇಗಬಾ
ದಿತ್ತು ಅಂದುಕೊಂಡಳು. ಪಕ್ಕದ ಮನೆಗೊಂ
ಟೀವಿ ಬಂತು.

ಸೀತೆಗೆ ಮೊದಲ ತಿಂಗಳ ಸಂಬಳ ಬಂದಾ
ಮಾರ್ಕೆಟ್ಟಿಗೆ ಹೋಗಿ, ಗಂಡನಿಗೊಂದು ಷರ್ಟ್
ಪೀಸ್, ಒಂದು ಸೆಂಟ್ ಬಾಟಲ್, ಒಂದಿ
ಸಿಹಿತಿಂಡಿ, ಹೂವು, ತನಗೊಂದು ವಾಯಿ
ಸೀರೆ ಕೊಂಡು, ರಿಕ್ಷಾದಲ್ಲಿ ಟಿಂಕಿಯೊಂದಿ
ಮನೆಗೆ ಬಂದಳು. ಗಂಡ ಆಗಲೇ ಬಂದು ಟೀ
ನೋಡುತ್ತಾ ಕುಳಿತಿದ್ದ. 'ತುಂಬಾ ಹೊತ್ತಾಯ್ತಾ
ಎಂದಳು. ಮಾತನಾಡಲಿಲ್ಲ. ಸೀತೆ ಕೊ
ಷರ್ಟ್‌ಪೀಸ್, ಸೆಂಟ್ ನೋಡಿ, 'ಇದೆ
ಯಾಕೆ ತಂದೆ, ಸುಮ್ನೆ ದುಡ್ಡು ದಂಡ' ಅಂ
ಸೀತೆ ಫ್ಲಾಸ್ಕ್‌ನಿಂದ ಕಾಫಿ ಬಗ್ಗಿಸುವಾಗ, ಅ
ಬಿದ್ದು ಒಡೆದುಹೋಯಿತು. ಧುಮುಗುಡು
ಬಂದು, ಟಿಂಕಿಯ ಮುಂದೆ ಪುಸ್ತಕದ ಚೀಲವ
ಕುಕ್ಕಿ, 'ಮೊದಲು ಹೋಂವರ್ಕ್ ಮಾಡ
ಆಮೇಲೆ ಟೀವಿ' ಎಂದಳು. ಟಿಂಕಿ ಸೀತೆ
ಮುಖ ನೋಡಿದಳು. 'ನಾನು ಟಾಯಿಲೆಟ್
ಹೋಗಬೇಕು' ಎಂದು ಎದ್ದುಹೋದಳು.

ಸೀತೆ ಎರಡನೇ ತಿಂಗಳ ಸಂಬಳವ
ಹಾಗೇ ತಂದು ಗಂಡನ ಕೈಗೆ ಕೊಟ್ಟಳು. ರಾ
ಟೀವಿಯಿಂದ ಮುಖ ತೆಗೆದು ಸೀತೆಯ ಮು
ನೋಡಿದ. ಸೀತೆ ನಕ್ಕಳು. ರಾಘುವೂ ನಕ್ಕ.

ಮದರ್ ಸುಪೀರಿಯರ್ ಸೀತೆ
'ನೀವೊಂದು ಟೂವೀಲರ್ ತಗೋಬಹುದಲ
ಎಂದರು. ಸೀತೆ ನೇರವಾಗಿ, 'ಹಣವಿ
ಎಂದಳು. ಒಂದು ಕ್ಷಣ ಯೋಚಿಸಿದ ಮದ
'ಮ್ಯಾನೇಜ್‌ಮೆಂಟ್‌ನಿಂದ ಲೋನ್ ಕೊ
ಸ್ತೀನಿ. ಇನ್‌ಸ್ಟಾಲ್‌ಮೆಂಟ್‌ನಲ್ಲಿ ರೀಪೇ ಮಾಡ
ರಾಯ್ತು ಅಲ್ವಾ?' ಎಂದರು.

ಸೀತೆ ಯೋಚಿಸದೇ 'ಹ್ಞೂ' ಎಂದಳು. ಫಾರಂ ಸೈನ್ ಮಾಡಿದಳು. ರಾಘು, 'ಹ್ಞೂ' ಎನ್ನುವ ಮೊದಲು ನನ್ನನ್ನೊಂದು ಮಾತು ಕೇಳಬಾರದಿತ್ತೆ' ಎಂದ. ಸೀತ ಏನೂ ಹೇಳಲಿಲ್ಲ.

ಮಾರನೆಯ ದಿನ ಸೀತೆ ಷೋರೂಮಿಗೆ ತಾನೇ ಹೋಗಿ, ಲೂನಾ ಪಡೆದು, ಮಗಳನ್ನು ಕೂರಿಸಿಕೊಂಡು ಮನೆಗೆ ಬಂದಳು. ಹಣೆಯ ಮೇಲೆ ಮುಂಗುರುಳು ಹಾರಾಡುತ್ತಿತ್ತು.

ಮನೆ ಇನ್ನಷ್ಟು ಚಿಕ್ಕದಾಯಿತು. ಇರುವ ಜಾಗದಲ್ಲೇ ಎರಡು ದ್ವಿಚಕ್ರ ವಾಹನಗಳು. ಸೀತೆ ಲಾಟರಿ ಟಿಕೆಟ್ ಕೊಂಡುಕೊಳ್ಳಲು ಪ್ರಾರಂಭಿಸಿದಳು.

ಒಂದು ದಿನ ಸೀಬೆ ಮರದ ಉಯ್ಯಾಲೆಯ ಹಗ್ಗವನ್ನು ಯಾರೋ ತುಂಡು ಮಾಡಿದ್ದರು. ಹೀಚುಗಳನ್ನು ಕಿತ್ತು ಎಸೆದಿದ್ದರು. ಹಿಂದೆ ಮುಂದೆ ನೋಡದೆ ಸೀತೆ, ರಾಘುವಿಗೂ ಹೇಳದೆ, ಪೊಲೀಸ್ ಸ್ಟೇಷನ್‌ಗೆ ಹೋಗಿ, ಪಕ್ಕದ ಮನೆಯವರ ಮೇಲೆ ಕಂಪ್ಲೇಂಟ್ ಕೊಟ್ಟಳು. ಪೊಲೀಸರು ಬಂದು ವಿಚಾರಿಸಿ, ಎರಡೂ ಮನೆಯವರನ್ನು ಕರೆಸಿ, 'ಇಂಥ ಸಣ್ಣ ಸಣ್ಣ ವಿಷಯಗಳಿಗೆ ಪೊಲೀಸ್ ಕಂಪ್ಲೇಂಟ್ ಕೊಡ್ತಾರೇನಮ್ಮ? ನೀವ್ ನೀವೇ ಬಗೆಹರಿಸಿ ಕೊಳ್ಳಬೇಕು' ಎಂದು ಬುದ್ಧಿವಾದ ಹೇಳಿ ಹೋದರು.

ಸೀತೆಗೆ ತುಂಬಾ ಅವಮಾನವಾದಂತಾಯಿತು. ಗಂಡ ಬಂದ ಮೇಲೆ ತಾನು ಮಾಡಿದ್ದನ್ನೆಲ್ಲಾ ಅವನಿಗೊಪ್ಪಿಸಿದಳು. ಗಂಡನೂ ಸೀತೆಯದೇ ತಪ್ಪು ಎಂದು ಖಡಾಖಂಡಿತವಾಗಿ ಹೇಳಿದ. 'ಅವರಿಗೆ ಸ್ವಲ್ಪಾನೂ ಸೆನ್ಸ್ ಬೇಡ್ವೇನ್ರಿ?' ಎಂದರೆ, 'ಇಂಥದಕ್ಕೆ ಪೊಲೀಸನವರತ್ರ ಹೋಗ್ತಾರಾ? ಕಡೇ ಪಕ್ಷ ನಾನು ಬರೋವರ್ಗಾದ್ರೂ ಕಾಯಬಾರದಿತ್ತಾ? ಪೊಲೀಸ್‌ನೋರು ಸರಿಯಾಗೇ ಹೇಳಿದ್ದಾರೆ. ಉಯ್ಯಾಲೆ ಹಗ್ಗ ಹರಿದು ಹೋದ್ರೆ ಇನ್ನೊಂದು ಹಗ್ಗ ತಂದು ಕಟ್ಟಿದ್ರಾಯ್ತು. ಗೌರೀಹಬ್ಬ ಬಂದ್ರೆ ಸೀಬೇಕಾಯಿ ಬಿಡೋಲ್ವೆ? ನೀನ್ಯಾಕೆ ಹೀಗೆ ಆಗ್ಬಿಟ್ಟೆ ಸೀತೆ?' ಎಂದ.

ಸೀತೆ ಏನೂ ಹೇಳಲಿಲ್ಲ. ಊಟ ಬೇಡ ಎಂದು ಪೆಪ್ಸಿ ಕುಡಿದು ಮಲಗಿದಳು. ಆ ರಾತ್ರಿ ಒಂದು ಹೊತ್ತಿನಲ್ಲಿ ರಾಘುವಿಗೆ ದಡಕ್ಕನೆ ಎಚ್ಚರವಾಯಿತು. ಅಡುಗೆ ಮನೆಯಿಂದ ಪಾತ್ರೆಗಳ ಶಬ್ದ ಕೇಳಿಸಿತು. ಎದ್ದು ಲೈಟು ಹಾಕಿದ. ಸೀತೆ ಪಕ್ಕದಲ್ಲಿರಲಿಲ್ಲ. ಅಡುಗೆ ಮನೆಗೆ ಹೋಗಿ ನೋಡಿದ. ಸೀತೆ ಪಾತ್ರೆಗಳನ್ನು ಎತ್ತಿ ಎತ್ತಿ ನೆಲಕ್ಕೆ ಕುಕ್ಕುತ್ತಿದ್ದಳು.





ಶಬ್ದತೀರ



# ನಮ್ಮ ಹೊಸ ಹೀರೋ

ತನ್ನ ಪುಟ್ಟ ಸಂಸಾರದ ಬಗ್ಗೆ ಅಕ್ಕರೆಯಿಂದ ಮಾತಾಡುವ ಶಾಹರೂಖ್ ಖಾನ್, ಈಗ ಹದಿಹರೆಯದವರ
ಕಣ್ಮಣಿಯಾಗಿದ್ದುಕೊಂಡೂ ತನ್ನ ಪ್ರೇಯಸಿಯ ಕುರಿತು ಸಂಕೋಚ, ಮೆಚ್ಚುಗೆ, ಅಭಿಮಾನದಿಂದ
ಮಾತಾಡುವ ಹೃತಿಕ್ ರೋಷನ್, ಜನಪ್ರಿಯತೆಯ ತುಟ್ಟ ತುದಿಯಲ್ಲೂ ವಿಚಿತ್ರ ಕ್ಷೋಭೆಗೆ ತುತ್ತಾಗಿ, ತನ
ಮನೆ, ತನ್ನ ಮೌನವೇ ತನಗೆ ಪ್ರಿಯ ಎಂದು ಹಠಾತ್ತನೆ ಎಲ್ಲ ತೊರೆಯಲು ಸಿದ್ಧನಾಗಿದ್ದ ಕ್ರಿಕೆಟಿಗ ಲಾರಾ..
ಬುದ್ಧ ಪೂರ್ಣಿಮೆಯ ಬೆಳದಿಂಗಳಿಗೆ ಮಾರುಹೋಗಿ ಹಾಲಿವುಡ್‌ನಿಂದ ಉತ್ತರ ಭಾರತದ ಧರ್ಮಸಾಲೆ
ಬಂದು ನಾದದ ಜಾಗರಣೆಗೆ ಕಿವಿ ತೆರೆದು ಕೂತ ರಿಚರ್ಡ್ ಗೀರ್...

ಇವರೆಲ್ಲ ಥಳುಕು ಬೆಳಕಿನ ಪ್ರತಿಭೆಗಳಾಗಿದ್ದರೂ, ಇವರ ಇಂಥ ನಿಲುವುಗಳು ಕೃತಕವೆನ್ನಿಸಲಿಲ್ಲ
ಪ್ರಖರವಾದ ಫ್ಲಾಶ್ ಲೈಟಿನ ಎದುರು ಅವರಾಡಿದ ಮಾತು ಅಸಹಜವೆನ್ನಿಸಲಿಲ್ಲ; ಅವರದೇ ಅನಿಸಿತು
ಅವರ ಒಳಗಿಂದೇ ಬಂತು ಅನಿಸಿತು. ಯಾಕೆ?

(ಅದೇ, ಅರುಂಧತಿ ರಾಯ್, ನರ್ಮದಾ ಬಚಾವು ಮಾಡಲು ನಡೆದಾಗ, ಸುಶ್ಮಿತಾ ಸೇನ್ ರಂ
'ವಿಶ್ವರೂಪ'ಸಿಯರು-'ನನ್ನ ಬದುಕಿನ ಗುರಿ ಬಡಮಕ್ಕಳ ಸೇವೆ', 'ಕರುಣೆಯೇ ಪರಮ ಮೌಲ್ಯ'-ಎಂದೆ
ಮುತ್ತು, ರತುನ ಉದುರಿಸುವಾಗ, ಅವರ ಆಶಯ ಪ್ರಾಮಾಣಿಕವೇ ಇದ್ದಿದ್ದರೂ ಸಹ ಅದು ಅಸಹ
ಅನಿಸಿತು; ಇದಲ್ಲ... ಇದಲ್ಲ... ಅನಿಸಿತು. ಯಾಕೆ?)

ಒಂದು ಕಾಲದಲ್ಲಿ ಸಿನಿಮಾ ನಟ, ನಟಿಯರು ತಮ್ಮ ಒಂದು Imageಅನ್ನು ಸ್ಥಾಪಿಸಿಕೊಂಡು ಅದ
ಉಳಿವಿಗಾಗಿ ಹೆಣಗುತ್ತಿದ್ದರು. ದೇವಾನಂದನ ಹೆಂಡತಿ ಯಾರು ಅಂತ ಜನಸಾಮಾನ್ಯರಿಗೆ ತಿಳಿಯುತ್ತಿರಲಿಲ್ಲ
ರೇಖಾ, ಶ್ರೀದೇವಿಯಂಥ ತಾರೆಯರು ತಮ್ಮ ಮದುವೆ, ಸಂಸಾರಗಳನ್ನು ವಿಚಿತ್ರವಾದ ರೀತಿಯಲ್ಲಿ 'ಪಬ್ಲಿಕ್
ಕಣ್ಣಿನಿಂದ ಮರೆಯಾಗಿಡುತ್ತಿದ್ದರು. ರಾಜೇಶ ಖನ್ನಾನಂತೂ ಎಂಥ ಸುದೀರ್ಘ ಪ್ರಯಾಣದಲ್ಲೂ ನಿದ್ದೆಯ
ಹೋಗದಂತೆ ಎಚ್ಚರವಹಿಸುತ್ತಿದ್ದನಂತೆ-ಗೊರಕೆ ಗಿರಕೆ ಹೊಡೆದುಬಿಟ್ಟರೆ ಅಂತ! ಅವನ ಒಂದು ಗೊರ
ಅವನ ಸಿನಿಮಾವನ್ನೇ ಉರುಳಿಸಿಬಿಡುವ ಭಯ ಆತನಿಗೆ.

''ಅವಳು ತನ್ನ ಮಗುಗೆಲ್ಲ ಎದೆ ಹಾಲು ಕುಡಿಸುವುದಿಲ್ಲ. ಅದಕ್ಕೇ ಆಕೆಯ ಫಿಗರ್ ಹಾಗಿದೆ...'' ಎಂದ
ತಮ್ಮ ಸೆಚ್ಚಿನ ನಟಿಯ ಕುರಿತು ಫಿಕರ್ ಮಾಡುವ ಅಭಿಮಾನಿಗಳ ಕಾಲ ಅದು. ಹೇಮಮಾಲಿನಿ ಒಮ್ಮೆ ಉ
ಸೀರೆ ಮತ್ತೆ ಉಡುವುದಿಲ್ಲ, ದೇವಾನಂದ ನೀರಿನಲ್ಲಿ ಮುಳುಗಿದರೂ ಅವನ ತಲೆಗೂದಲ 'ಪುಗ್ಗ
ಹಾಳಾಗೋದಿಲ್ಲ-ಇವೆಲ್ಲ ಬರೇ ರಮ್ಯ ವದಂತಿಗಳಾಗದೆ, ತಮ್ಮ ನಿತ್ಯದ ಕೌಟುಂಬಿಕ ಕಟ್ಟುಕಟ್ಟಳೆಯ
ಬಗ್ಗಡದ ಬದುಕಿಗೆ ತೀರ ವ್ಯತಿರಿಕ್ತವಾದ ಸಾಮ್ರಾಜ್ಯವೊಂದನ್ನು ಕಲ್ಪಿಸಿಕೊಳ್ಳುವ ವಿಧಾನಗಳಾಗಿದ್ದವು.

'ನೆಹರೂಗೆ ಮಕ್ಕಳು ಪ್ರೀತಿ,' 'ನೆಹರೂಗೆ ಗುಲಾಬಿ ಪ್ರೀತಿ'... 'ಇಂದಿರಾ ಗಾಂಧಿಗೆ ಚಹಾ ಸ
ಮಾಡಲು ಬರುವುದಿಲ್ಲ', 'ಲತಾ ಮಂಗೇಶ್ಕರ ತನ್ನ ಕಲಕಂಠವನ್ನು ಕೋಟಿ ರೂಪಾಯಿಗೆ ಇನ್‌ಶ್ಯೂರ

ಮಾಡಿದ್ದಾಳೆ; ಬೋಂಡ ತಿನ್ನುವುದಿಲ್ಲ'... ಹೀಗೆ, ನಮ್ಮ ಸರಳ ಸಾಂಸಾರಿಕ ಲಯಗಳನ್ನು ಭಂಗ ಮಾಡುವಂಥ ವದಂತಿಗಳು ನಮಗೆ ಬೇಕಾಗಿದ್ದವು.

ಮನೆ, ಸ್ನಾನ, ಬಚ್ಚಲು, ಅಮೃತಾಂಜನ, ಗೋಲ ಹರಿದ ಬನಿಯನ್ನು, ಕಿವಿ ಮುರಿದ ಕಪ್ಪು, ತೇಪೆ ಹಾಕಿದ ಪ್ಯಾಂಟು, ಇಸ್ತ್ರಿ ಇಲ್ಲದ ಬ್ಲೌಸು... ಇವುಗಳ ಕಕ್ಷೆಯ ಆಚೆಗೇ, ನಮ್ಮ ರಂಜನೆಯ ಮಾಯಾ ಸರೋವರ. ಆ ಪನ್ನೀರಲ್ಲಿ ಚಿನ್ನದ ಮೀನುಗಳು, ಹಂಸಪಲ್ಲಂಗದ ಮೇಲೆ ಇನಿಯನ ತೆರೆದ ಬಾಯಿಯಿಂದ ಕೊಂಚವೇ ದೂರ 'ಆಮ್ರಪಾಲಿಬ್ಲೌಸ್'ನ ಚೆಲುವೆ, ಒನಪಿನಲ್ಲಿ ಅಲ್ಲಾಡಿಸುತ್ತಿರುವ ನೇರಳೆ ವರ್ಣದ ಗೊಂಚಲ ದ್ರಾಕ್ಷಿಗೆ- ವಾಹ್ ಅದೆಂಥ ರುಚಿ ಇದ್ದೀತು!

ಆದರೆ ಕಳೆದ ನಾಲ್ಕಾರು ದಶಕಗಳಲ್ಲಿ ನಮ್ಮ ನಿತ್ಯಜೀವಿತದ ವ್ಯಾಕರಣಗಳು ಬದಲಾಗಿವೆ. 'ಸಮಪಾಲು, ಸಮಬಾಳು' ದಾರಿಯಲ್ಲಿ ಜೀವನ ಕಲೆಯಾಗಿ ಅರಳಬೇಕಿದ್ದ ಆಧುನಿಕತೆ, ಸಂತೆಯ ಸರಕಾಗಿಬಿಟ್ಟು, ಹಣದ ವಿಜೃಂಭಣೆಯೇ ನಾಗರಿಕತೆಯ ಭಾಷೆಯಾಗತೊಡಗಿದೆ. ಹಿತ್ತಲಲ್ಲಿ ಮಾವಿನ ಮರ ಇದ್ದವನೂ ಹಸಿರು ಪ್ಲಾಸ್ಟಿಕ್ ಎಲೆಗಳನ್ನು ತನ್ನ ಬಾಗಿಲಿಗೆ ಕಟ್ಟಿಕೊಂಡಿದ್ದಾನೆ. ಬೃಹದಾಕಾರದ ಸುವಿಹಾರಿ ಬಸ್ಸುಗಳಂತಿರುವ ಹೋಟೆಲುಗಳಲ್ಲಿ, ಪುಟ್ಟ ಹಾಲುಗಲ್ಲದ ಹಸುಳೆಯರಿಗೆ ಲಿಪ್‌ಸ್ಟಿಕ್ ಹಚ್ಚಿ, ಅತ್ಯಂತ ಕರ್ಕಶವಾಗಿ 'ಹೆಪಿ ಬರ್ಥ್‌ಡೇ ಟೂಯೂ'' ಎಂದು 'ಚಿನ್ನ'ದ ಕಂಠದಿಂದ ರೋದಿಸುತ್ತಿದ್ದಾರೆ. ಎಲ್ಲರೂ, ಮನೆಯಲ್ಲೂ, ಒಂದು ಸುದೀರ್ಘವಾದ ದೈನಿಕ ಧಾರಾವಾಹಿಯಲ್ಲಿ ಚಿತ್ರವಿಚಿತ್ರ ಪಾತ್ರಗಳನ್ನು ಅಭಿನಯಿಸುತ್ತಿದ್ದೇವೆ!

ನಮ್ಮ ಮಧ್ಯಮ ವರ್ಗದ ಸೋಲು-ಗೆಲುವು, ನೋವು-ನಲಿವುಗಳ ಜೀವಾಳವಾದ ಕೌಟುಂಬಿಕತೆಯೇ ಸೂಕ್ಷ್ಮವಾಗಿ ನಷ್ಟವಾಗುತ್ತ ಹೋಗಿದೆ. ಮೊಮ್ಮಗಳನ್ನು ಗದರಿಸಿದರೆ ಮಕ್ಕಳೆಲ್ಲಿ ಸಿಟ್ಟಾಗುತ್ತಾರೋ ಎಂದು ಅಜ್ಜ ಅಜ್ಜಿಯರು ತೆಪ್ಪಗೆ ಬಾಯ್ಮುಚ್ಚಿ ಟಿವಿ ನೋಡುತ್ತಿದ್ದಾರೆ. ಟೇಬಲ್ ಮೇಲಿಡಲ್ಪಟ್ಟ ಎಂದೋ ಸಿದ್ಧವಾಗಿದ್ದ ಅಡಿಗೆಯ ಹಾಗೆ, ಮಾತಿಲ್ಲ ಕತೆಯಿಲ್ಲ; ಎಲ್ಲ ತಣ್ಣಗಿದೆ.

ಅದಕ್ಕೇ ಮತ್ತೆ, ಈಗ, ಕೌಟುಂಬಿಕತೆಯ ಸಿಂಚನ ತುಸುವೇ ಬಂದರೂ ಸಾಕು, ಗಾಯ ಸವರಿದಂತೆ ನಮಗೆ ಹಾಯಾಗುತ್ತದೆ. ''ಜೀವನ್ಮರಣದ ಮಧ್ಯೆ ತುಯ್ಯುತ್ತಿದ್ದ ನನ್ನ ತಂದೆಯನ್ನು ಕಂಡಾಗ ನನ್ನ ಇಡೀ ತಾರಾಪಟ್ಟದ ನಶ್ವರತೆಯನ್ನು ಮನಗಂಡೆ'' ಎನ್ನುವ ಹೃತಿಕ್ ರೋಷನ್ ಸಹಜವಾಗೇ ನಮ್ಮ ಹೊಸ ಹೀರೋ ಆಗುತ್ತಾನೆ. ತನ್ನ ಬಾಳ ಸಂಗಾತಿಯಾಗಲಿರುವ ಹುಡುಗಿಯನ್ನು ಆತ, ಲಜ್ಜೆಯಿಂದ ಮೆಲುವಾಗೇ ವರ್ಣಿಸುವಾಗ, ನಮಗೆ ಆತನ ಬಗ್ಗೆ ಅಸೂಯೆಯಿಲ್ಲದ ಅಕ್ಕರೆ ಉಕ್ಕುತ್ತದೆ. ತನ್ನ ಹೆಸರಿಂದಾಗಿ, ತನ್ನ ಅಷ್ಟೊಂದು ಪ್ರತಿಭಾವಂತನಲ್ಲದ ಸೋದರ ಪಡುತ್ತಿರಬಹುದಾದ ವಿಚಿತ್ರ, ಕ್ಷೋಭೆಯ ಕುರಿತು ಕಳವಳದಿಂದ ಮಾತಾಡುವ ಸಚಿನ್ ತೆಂಡೂಲ್ಕರ್, ''ಯಾವ ಮಾಯಾ ಮೋಹನಾಂಗಿಗಾಗೂ ನಾನು ನನ್ನ ಕೌಟುಂಬಿಕ ಖುಷಿಯನ್ನು ಧ್ವಂಸಗೊಳಿಸಿಕೊಳ್ಳುವ ಮೂರ್ಖನಲ್ಲ'' ಎನ್ನುವ ಶಾಹರೂಖ್ ಖಾನ್, ಹೀಗೆ, ಈ ಸಮಯದಲ್ಲಿ ಅತ್ಯಂತ ಸಹಜವಾಗಿ ಆಡುವವರು ಕೌಟುಂಬಿಕತೆಯನ್ನು, ವ್ಯಕ್ತಿಗತ ವಿಶ್ವವನ್ನು ಸೂಕ್ಷ್ಮವಾಗಿ ಪುನಶ್ಚೇತನಗೊಳಿಸುವ ಶುದ್ಧ ಬಿಂಬಗಳಾಗುತ್ತಾರೆ. ಒಂದು ಹಿತವಾದ ಅನುಭೂತಿಯನ್ನು ದಯಪಾಲಿಸುತ್ತಾರೆ.



ಕೃತಕತೆಯ ಕೂಪದಲ್ಲಿ ತಳಮಳಿಸುತ್ತಿರುವ ನಮ್ಮನ್ನು, ಜಾತಿ, ಕೋಮು, ವರ್ಗ, ದೇಶ, ಕಾಲಗಳಾಚೆ ಒಯ್ಯುವವರು ಈಗ ಈ ಸರಳ ಹೊಸ ಹೀರೋಗಳು ಮಾತ್ರ!

**ಜಯಂತ ಕಾಯ್ಕಿಣಿ**

jayantkaikini@vsnl.net




# ಸಾರಿನ ಸಡಗರ!

## ಅಶೋಕ ಚೊಳಚಗುಡ್ಡ




“ರಿ, ರೀss... ಅದೇನ್ರಿss... ಗೌಳಿಗ್ಯಾರ ಎಮ್ಮಿ ಮುಸರಿ ನೀರು ಕುಡಧಂಗ, ಬಟ್ಟಲದಾಗ ಸಾರು ಸೊರss ಸೊರ್‍ರss ಅಂತ ಕುಡೀಲಿಕ್ಕೆ ಹತ್ತೀರಿ'' ಎಂದು ನನ್ನಾಕೆ ಕಣ್ಣು ಬಿಟ್ಟು ಅದೆಷ್ಟು ಜೋರಾಗಿ ಗದರಿಸಿದರೂ, ನಾನು ಈವರೆಗೆ ಅವಳ (ಗಂಡು) ಧನಿಗೆ ಬೆಚ್ಚಿಲ್ಲ, ಬೆದರಿಲ್ಲ! 'ವರಡಿ ರುಚಿ ಕರಡಿಗೇನು ಗೊತ್ತು?' ಎಂದು ನನ್ನವಳ ಮೇಲೆ ಒಳ ಗೊಳಗೆ ಸಿಟ್ಟಾಗಿ, ಬಟ್ಟಲದಲ್ಲಿಯ ಸಾರು ಸೊರ್‍ರSS... ಸೊರ್‍ರ... ಅಂತ ಹೀರುವು ದನ್ನು ಕೈಬಿಟ್ಟಿಲ್ಲ!

'ಸೊರ್‍ರ, ಸೋರ್ ಎಂದು ತುಸು ತುಸುವೇ ಬಟ್ಟಲದೊಳಗಿನ ಸಾರು ಹೀರಿದಾಗ, ಬಾಯಲ್ಲಿ ಲಾಲಾರಸ ಹೆಚ್ಚು ಹೆಚ್ಚು ಉತ್ಪತ್ತಿಯಾಗಿ, ಜಠರಕ್ಕೆ ಇಳಿದು, ಉಂಡ ಊಟ ಪಚನ ಮಾಡುತ್ತದೆ ಈ ಸಾರು!' ಎಂದು ಅದಾರೊ ಹಿರಿಯರು ಹೇಳಿದ ಮಾತು ನನ್ನ ಕಣ್ಮುಂದೆ ಸದಾ ಸುಳಿದಾಡುತ್ತಿರುತ್ತದೆ!

ನಿಮಗೆ ಬಿಡಿಸಿ ಹೇಳಬೇಕೆಂದರೆ, ಘಮ್ ಘಮ್ ಸುವಾಸನೆಯ ದಟ್ಟ ಆವಿ ಹೊರ ಸೂಸುತ್ತಿರುವ ಸುಡು ಸುಡು ಸಾರನ್ನು ನಿಮ್ಮ ಬಟ್ಟಲಕ್ಕೆ ಹಾಕಿಸಿಕೊಳ್ಳಿ. ನಿಮ್ಮ ಬಾಯಿ ರುಚಿಗೆ ಬೇಕಾದಷ್ಟು ತುಸು ತುಸು ನಿಂಬೆ ರಸ ಸಾರಿಗೆ ಸೇರಿಸಿ, ನಿಧಾನವಾಗಿ ನಿಮ್ಮ ತುಟಿ ಅರಳಿಸಿ ಬಟ್ಟಲಲ್ಲಿಯ ಸಾರು ಮೆಲ್ಲ ಮೆಲ್ಲನೆ ಸೊರ್ರ... ಸೊರ್ರ... ಎಳೆದುಕೊಳ್ಳಿರಿ! ಖಡಕ್ ಸಾರು ನಾಲಿಗೆಗೆ ಬಂದಾಗ ಆಹಾss; ಅದೆಷ್ಟು ಆನಂದ! ಈ ಸಾರು ನಿಧಾನವಾಗಿ ಗಂಟಲಿಗೆ ಇಳಿದು, ಗಂಟಲಿನ ದಾರಿ ಕ್ಲೀನ್ ಮಾಡಿ, ಹೊಟ್ಟೆ ಚೀಲ ಸೇರಿದರಂತೂ ತೀರೇಹೋಯಿತು, ಜೀವಕ್ಕೆ ಪರಮಾನಂದ!

ಯಾವುದೆ ಸಭೆ ಸಮಾರಂಭ, ಜಾತ್ರೆ-ಉತ್ಸವಗಳಿಗೆ ನಾನು ಹೋದಾಗ, ನನ್ನ ಕಣ್ಣು-ಮೂಗು, ಮನಸ್ಸು ಅಲ್ಲಿಯ ಅಡಿಗಿಯ ಉಗ್ರಾಣ (ಮನೆ)ಗಳತ್ತ ಕೇಂದ್ರೀಕೃತವಾಗಿರುತ್ತದೆ. ದೂರದಿಂದಲೆ ತೂರಿಬರುವ ಸಾರಿನ ಘಮ್ ಪರಿಮಳಕ್ಕೆ ನನ್ನ ಚಿತ್ತವೆಲ್ಲ ದುಂಬಿಯಾಗಿ, ಸಾರಿನ ದೊಡ್ಡ ದೊಡ್ಡ ಕೊಳಗ, ತಪ್ಪಲೆ, ಹಂಡೆಗಳ ಸುತ್ತ-ಮುತ್ತ ಗುಂಯ್‌ಗುಡುತ್ತಿರುತ್ತದೆ. ಇದಕ್ಕೆ ಕಾರಣ ಬಾಲ್ಯದಿಂದಲೇ ನಾನು ಸಾರು ಕುಡಿಯುವುದರಲ್ಲಿ ಬೆಳೆಸಿಕೊಂಡು ಬಂದ ಅಪಾರ ಪ್ರೀತಿ!

ಆಗ ನಮಗೆಲ್ಲ ಮನೆಯಲ್ಲಿ ಸಾಕಷ್ಟು ಅಕ್ಕಡಿಕಾಳು, ಚೀಲಗಟ್ಟಲೆ ಹೆಸರು, ಅಲಸಂದಿ, ತೊಗರಿ! ಊಟಕ್ಕೆ ಮನೆಯಲ್ಲಿ ಗಟ್ಟಿ ಗಟ್ಟಿಯಾದ ಹೆಸರು, ಅಲಸಂದಿಯ ಆಮಟಿ (ಸಾಂಬಾರು), ಹಾಗೆಯೇ ಮನೆಯಲ್ಲಿಯೇ ಒಡೆದ ಜವಾರಿ ತೊಗರಿ ಬೇಳೆ ಸಾರು ದೊರಕುತ್ತಿತ್ತು. ಅದೂ ಒಲೆಯ ಮೇಲೆ ಕಲ್ಲುಗಡಿಗಿ (ಕಾಗಡಿಗೆ)ಯಲ್ಲಿ ಹದವಾಗಿ ಕುದ್ದ, ಶುದ್ಧ ರುಚಿಕಟ್ಟಾದ ಸಾರು! ಆಹ್ಹಾ ಅದಕ್ಕೇನು ಪರಿಮಳ, ಅದೆಷ್ಟು ಸುವಾಸನೆ! ಆ ಬೇಳೆ ಕಟ್ಟಿನ ಸಾರು ಊಟ ಮಾಡಿದ ನಂತರ ತಾಸು ತಾಸುಗಟ್ಟಲೆ ಕೈಬೆರಳಿನ ವಾಸನೆ ಹಾರಿಹೋಗುತ್ತಿರಲಿಲ್ಲ. (ಎಲ್ಲಿ ಹೋಯಿತು ಆ (ಅಡಿಗಿಯಾ) ಪರಿಮಳ? ಅದೆಲ್ಲಿ ಕಣ್ಮರೆಯಾಯಿತು ಆ ರುಚಿ?) ಈಗ ಕುಕ್ಕರು ಬೇಳೆಯ ಸಾರಿಗೆ ನಮ್ಮ-ನಿಮ್ಮ ನಾಲಿಗೆ ಹೊಂದಿಕೊಂಡಿವೆ. ಆ ಮಾತು ಬೇರೆ! ಇರಲಿ.

ನನಗಂತೂ, ಅಂದಿನ ಆ ದಿನಗಳ ಮದುವೆ ಸಮಾರಂಭಗಳಲ್ಲಿಯ 'ಸಾರಿನ ಸಡಗರ' ನೆನಪಿಸಿಕೊಂಡರೆ, ಈಗಲೂ ಅಪರಿಮಿತ ಆನಂದವಾಗುತ್ತದೆ.

ಊಟದ ದೊಡ್ಡ ಸಾಲು. ಮುಂದೆ ಬಾಳೆ ಎಲೆ. ಎಡ ಭಾಗಕ್ಕೆ ಸಾರಿನ ದೊನ್ನೆ. ಒಂದೊಂದಾಗಿ ಊಟದ ಐಟಂ ಬಡಿಸುತ್ತಿದ್ದ ಹಾಗೆ ಸಾರಿನ ಪಾತ್ರೆ ಹಿಡಿದುಕೊಂಡವರ ಆಗಮನ! ನಮ್ಮ ಹಸಿವೆಗೆ ಕಿಕ್ ಕೊಡಲು ದೂರದಿಂದಲೇ ಸಾರಿನ ಘಮ ಘಮ ಪರಿಮಳ. ಎಲ್ಲರ ನೋಟ ಆ ಸಾರಿನ ಕಡೆಗೆ, ಸಾರು ತುಂಬಿದ ಆ ಪಾತ್ರೆಗಳ ಕಡೆಗೆ.

'ದೊನ್ನಿ ಗಟ್ಟಾಗಿ ಹಚ್ಚರಿ!', ಯಜಮಾನರು, ವ್ಹಾಲಂಟಿಯರುಗಳು ಕೂಗಿ ಹೇಳುತ್ತಿದ್ದ ಹಾಗೆ, ನಾವೆಲ್ಲ ಮೈಯೆಲ್ಲ ಕಣ್ಣಾಗಿ, ದೊನ್ನೆಯ ತಳವನ್ನು ಅನ್ನ ಇಲ್ಲಾ ಪಾಯಸದಲ್ಲಿ ಅದ್ದಿ, ಎಲೆಯ ಎಡ ಭಾಗದಲ್ಲಿ ಭದ್ರವಾಗಿ ಹಚ್ಚಿಡುತ್ತಿದ್ದೆವು. ಆಗ ಸುಕೋಮಲವಾದ, ದಟ್ಟವಾಗಿ ಹೊಗೆಯಾಡುತ್ತಿರುವ, ಬಂಗಾರ ವರ್ಣದ, ನೊರೆ ನೊರೆಯಾದ ಸುಡು ಸುಡು ಸಾರು ದೊನ್ನೆಗಳಿಗೆ ಅವತರಿಸುತ್ತಿತ್ತು. ಎಲೆಯೊಳಗಿನ ಮಲ್ಲಿಗಿಯಂಥ ಬಿಸಿ ಬಿಸಿ ಅನ್ನವನ್ನು ನಾವೆಲ್ಲ, ಹೂಗಿಡಕ್ಕೆ ಪಾತಿ ಕಟ್ಟಿದ ಹಾಗೆ ಪಾತಿ ಕಟ್ಟಿ,



ನಿಧಾನವಾಗಿ ದೊನ್ನೆ ಎತ್ತಿ ಸಾರು ಸುರಿದುಕೊಳ್ಳುತ್ತಿದ್ದೆವು. (ಏತಸ್ಮಧ್ಯೆ ದೊನ್ನೆ ಹರಿದವರ ಸಾರಿನ ಸೋರಿಕೆ, ದೊನ್ನೆ ಎತ್ತಲು ಹೋಗಿ ಮೈಯೆಲ್ಲ ರಾಡಿ ಮಾಡಿಕೊಂಡವರ ತೊಳಲಾಟ, ಹಾಸ್ಯಪ್ರಿಯರ ಚಟಾಕಿಗಳಿಗೆ ವಸ್ತುವಾಗುತ್ತಿದ್ದವು.)

ಊಟದ ಮೊದಲು, 'ಎಲ್ಲಾರಿಗೂ ತುಪ್ಪಾ ಬಡಿಸಿದರೇನಪಾ?ss' 'ರ್‍ರೀss ಯಜಮಾನರು ನೀವು ಆ ಮೂಲ್ಯಾಗ ಕೂಡ್ರಿ...' ದನಿಗಳ ಮಧ್ಯೆ, ಮನೆ ಮುಖ್ಯಸ್ಥರು ಊಟದ ಪಂಕ್ತಿಗೆ ನಮಸ್ಕರಿಸುತ್ತ ''ಎಲ್ಲಾರೂ ತೊಗೋಳ್ರಿ... ತೊಗೋಳ್ರಿ... ನಮಸ್ಕಾರ ತೊಗೋಳ್ರಿ'' ಎಂದು ಊಟ ಆರಂಭಿಸುತ್ತಿದ್ದಂತೆ, ಹಠಾತ್ತನೆ ಕವಿದ ದಿವ್ಯ ನಿಶ್ಶಬ್ದದಲ್ಲಿ, ಎತ್ತ ನೋಡಿದರತ್ತ, ಅದೇ ಸಾರಿನ ಸೊರ್‍ರ... ಭರ್‍ರ... ಸೊರ್‍ರ ಭರ್‍ರ... ಸುಕೋಮಲವಾದ ಮಂಜುಳ ನಿನಾದ! ಕ್ಷಣಾರ್ಧದಲ್ಲಿಯೇ ಎಲ್ಲರ ದೊನ್ನೆಗಳಲ್ಲಿಯ ಸಾರು ಮಟಾಮಾಯ!

ಅಷ್ಟರಲ್ಲಿಯೇ, ''ಸಾರುss... ಸಾರುss... ಸಾರ್‍ರಿ... ನಿಮಗರ್‍ರಿ...!'' ಎಂದು ಸಾರಿನ ಹುಡುಗರು ದಿಢೀರನೇ ಸಾರಿನೊಂದಿಗೆ ಬಂದೇಬಿಡುತ್ತಿದ್ದರು. ಸಾರಿನವರ ಪ್ರೀತಿಯ ಕರೆಗೆ, ಒತ್ತಾಯಕ್ಕೆ, ಮತ್ತಿಷ್ಟು ಬಿಸಿ ಬಿಸಿ ಸಾರು ದೊನ್ನೆಗಳಿಗೆ ಇಳಿಯುತ್ತಿತ್ತು! ''ಸಾರ ಅನ್ನೂಬೇಕು, ನಮ್ಮ ಶೀನ್ಯಾನ ಸಾರ ನೋಡ್ರಿ!'' ''ನೀವು ಏನs ಹೇಳಿ, ನಮ್ಮ ತುಂಗಕ್ಕನ ಸಾರಿನ ಮುಂದ, ಉಳಿದವರ ಕೈಯಾನ ಸಾರು ಹೇಳss ಬ್ಯಾಡ್ರಿ, ಎಂಟೆಂಟ ದಿನ ಬೇಕಾಧಂಗ ಕುದಿಸಿ ಊಟ ಮಾಡ್ರಿ... ದಿನದಿಂದ ದಿನಕ್ಕ ರುಚಿ ಹೆಚ್ಚ ಆಗತೈತಿ!'' ''ನಮ್ಮ ಬಸವರಾಜನ ಸಾರಿನ ಕೈ ವಾಸನಿ ಎರಡೆರಡ ದಿನಾ ಆದರೂ ಆರೂ ಹಂಗಿಲ್ಲ... ಕುಡದರ ಅಮೃತ ಕುಡಧಂಗ... ಹೊಟ್ಯಾನ ಹಳ್ಳ ಕರಗಬೇಕು...'' ಹೀಗೆ ನೂರಾ ಎಂಟ ನಮೂನಿ ಭೋಜನ (ಸಾರು) ಪ್ರಿಯರ ತಲೆಗೊಂದೊಂದು ಸಾರಿನ ಮಾತು! ನಡು ನಡುವೆ ಅದೇ ಸಾರಿನ ಸೊರ್‍ರ... ಭರ್‍ರ... ಸೊರ ಭರ್‍ರ ಸೆಳೆತ, ಎಳೆತ. ಹೀರಿದ್ದೇ ಹೀರಿದ್ದು ಮತ್ತೆ ಕುಡಿದದ್ದೆ ಕುಡಿದದ್ದು!

ನಮ್ಮ ಸೋದರಮಾವ ಕೃಷ್ಣಣ್ಣನ ಸಾರು ಕುಡಿಯುವ ಸುಖಾನುಭವ ಕೇಳಿದರಂತೂ ಮನಸ್ಸು ಮಲ್ಲಿಗೆ ಹೂವಾಗಿ ಅರಳುತ್ತದೆ. ನಮ್ಮ ಮಾವ ಊಟದಲ್ಲಿ ಬಲು ಹದಗಾರ. ಸಾರುಗಳಲ್ಲಿ ಡಿಪ್ಲೋಮಾ ಊಟ ಮಾಡುವುದರಲ್ಲಿ ಪಿಎಚ್‌ಡಿ, ಗೋಲ್ಡ ಮೆಡಲ್ ಪಡೆಯುವ ಅರ್ಹತೆಯುಳ್ಳವ! ''ಸಾರು ನಮ್ಮ ಹಸಿವೆ ಹೆಚ್ಚಿಸತದ, ಅದು ಪಿತ್ತನಾಶಕ, ಒಳ್ಳೆಯ ಜೀರ್ಣಕಾರಿ, ಹಾಂಗಂತ ನಾ ದೊನ್ನಿ ದೊನ್ನಿ ಸಾರು ಊಟದ ನಡುನಡುವೆ ಸೊರಾ ಸೊರಾ ಕುಡಿತೀನಿ. ಸಾರು ಕುಡಿಯುವ ಸುಖದ ಮುಂದ ಯಾವ ಸುಖಾನೂ ಹೇಳಬ್ಯಾಡ! ಹೋಳಿಗಿ ಹುಗ್ಗಿ ಹೊಡಿಯೂ ಮುಂದ, ನಡ ನಡಕ ಬಿಸಿ ಬಿಸಿ ಸಾರು ಸುರಕೊಂಡ್ರ, ನಾಲಿಗೆ ಹದಕ್ಕ ಬರತದ, ಮತ್ತೆರಡ ಹೋಳಿಗಿ ಹೆಚ್ಚಿಗೆ ಹೋಗತಾವು; ನಾಲ್ಕ ಚಮಚಾ ಪಾಯಸ ಹೊಟ್ಯಾಗ ಸರಳ ಇಳತೈತಿ!''-ಇದು ಅವನ ಉವಾಚ.

ಅಂದಹಾಗೆ, ಸಾರಿನ ಬಗ್ಗೆ ನಮ್ಮ ತುಂಗಜ್ಜಿ ಹೇಳುವ ಮಾತೊಂದು ಇಲ್ಲಿ ನೆನಪಿಗೆ ಬರುತ್ತಿದೆ. ಅದನ್ನಿಷ್ಟು ಇಲ್ಲಿ ಹೇಳಿ ಮುಗಿಸಿಬಿಡುತ್ತೇನೆ. ''ಅಡಿಗಿ ಮಾಡುವವರ ಸಾಮರ್ಥ್ಯಾ ಪರೀಕ್ಷಾ ಮಾಡಬೇಕಂದರ ಅವರು ಮಾಡುವ ಸಾರ ನೋಡಬೇಕಂತ! ರುಚಿಕಟ್ಟಾದ ಸಾರ ತಯಾರಿಸೂ ವಿದ್ಯಾ

ಎಲ್ಲಾರಿಗೂ ಬರೂದಿಲ್ಲೋs ಪುಟ್ಯಾ... ಅದಕ್ಕ, 'ಕೈಗುಣ' ಒಂದ ಇರಬೇಕು ನೋಡು!'' ಎಂದು ಹೇಳುತ್ತಿದ್ದಳು.

'ಸಾರು ಇಲ್ಲದ ಊಟ ತೇರು ಇಲ್ಲದ ಜಾತ್ರೆಗೆ ಸಮಾನ' ಅನ್ನುತ್ತಾರೆ. ತೇರು ಇಲ್ಲದ ಜಾತ್ರೆ ಬಲು ಸಪ್ಪೆ; ಸಾರು ಇಲ್ಲದ (ಅಡಿಗೆ) ಊಟ ಒಣ ಒಣ, ಭಣ ಭಣ! ಒಬ್ಬೊಬ್ಬರ ಸಾರಿನ ರುಚಿ ಒಂದೊಂದು ವಿಧ! ಉಪ್ಪು-ಹುಳಿ-ಖಾರ ಮುಂತಾದವುಗಳ ಸಮರಸವಾದ, ಹದವಾದ ಮಿಶ್ರಣವೇ ಈ ಸಾರು! ಹುಣಸೆ ಹಣ್ಣು, ಟೊಮಾಟೊ, ಲಿಂಬೆಹಣ್ಣು ಇತ್ಯಾದಿ ತಿಳಿಸಾರು... ಬೇಳೆ ಸಾರು, ಕಾಳಿನ ಸಾರು, ನಾನಾ ಬಗೆಯ ತೊಪ್ಪಲು ಇಲ್ಲಾ ಗಡ್ಡೆ-ಗೆಣಸು ಸೇರಿದ ಗಟ್ಟಿ ಸಾರು... (ಸಾಂಬಾರ) ಹೀಗೆ, 'ದೇವನೊಬ್ಬ ನಾಮ ಹಲವು' ಅನ್ನುವಂತೆ ಸಾರಿಗೆ ಹಲವು ಮುಖಗಳು. ಮೆಣಸು, ಮಸಾಲೆ, ವನಸ್ಪತಿಗಳ ತಿಳಿಸಾರು (ಕಷಾಯ) ಕೆಮ್ಮು, ನೆಗಡಿ, ಸಣ್ಣಪುಟ್ಟ ಜಡ್ಡು-ಜಾಪತ್ರಿಯವರಿಗೆ ರಾಮಬಾಣ! ಹಬ್ಬದ ಕಟ್ಟಿನ ಸಾರಿಗೆ ಸಮನಾವುದು ಹೇಳಿರಿ?

ಇಂದು ಒಳ್ಳೆಯ ಸಾರು ಅಪರೂಪವಾಗಿರುವಂತೆ, ಅದನ್ನು ಆಸ್ವಾದಿಸಿ, ಆನಂದಿಸುವವರೂ ಅಪರೂಪವಾಗುತ್ತಿದ್ದಾರೆ. ಸಮಾರಂಭಗಳಿಗೆ ಉತ್ತಮವಾದ ಸಾರು ಮಾಡಿಸಬೇಕೆಂಬ ಧಾರಾಳ ಮನಸ್ಸು ಕೆಲವರಿಗೆ ಇರುತ್ತದೆ. ಸಾರಿಗೆ ಅಷ್ಟೇಕೆ ಕಷ್ಟ ಪಡಬೇಕು ಎಂಬ ಸಣ್ಣತನ ಇನ್ನು ಕೆಲವರಿಗೆ! ರುಚಿಕಟ್ಟಾದ ಸಾರು ಮಾಡುವ ಪರಿಪಕ್ವ ಬಾಣಸಿಗರ ಕೊರತೆ (ಹಿಂದೆ ಸಾರು ಮಾಡಲೆಂದೇ ಊರಿಂದೂರಿಗೆ ಸಾರು ಮಾಡುವವರನ್ನು ಕರೆಸುತ್ತಿದ್ದರಂತೆ), ಮಾರುಕಟ್ಟೆಯಲ್ಲಿ ಉತ್ತಮವಾದ ಮಸಾಲೆ ಸಾಮಾನುಗಳ ಅಭಾವ (ಎಲ್ಲಾ ಹೈಬ್ರಿಡ್ ಮಿಲಾವಟ), ಸಮಾಧಾನದಿಂದ ಕೂತು ಸಾರು ಊಟ ಮಾಡಲು ಸಮಯ, ಸದವಕಾಶ ಇಂದು ನಮಗೆಲ್ಲಿದೆ?

ಇತ್ತೀಚಿನ ದಿನಗಳಲ್ಲಿ ತಟ್ಟೆ ಊಟ, ಬಫೆ ಹಾವಳಿ ಜೋರಾಗಿ, ನಮ್ಮ ರುಚಿಕಟ್ಟಾದ ಸಾರಿಗೆ ಭಾರೀ ಪೆಟ್ಟು ಬಿದ್ದಿದೆ. ಇಂದಿನ ಮದುವೆ-ಮುಂಜಿವೆ, ಗೃಹ ಪ್ರವೇಶ ಮುಂತಾದ ಸಮಾರಂಭಗಳಲ್ಲಿ ಸಾರು ಬಲು ಲಿಮಿಟೆಡ್ ಆಗಿ ಬಳಕೆಯಾಗುತ್ತಿದೆ. ಸಾರು ಸವಿಯುವ ಸುಖ ಇಲ್ಲದಾಗಿ ಬಾಯಿ ಕೆಟ್ಟುಹೋಗಿದೆ. ಇನ್ನು ಕೆಲವರಿಗೆ ಸಾರಿನ ಗದ್ದಲವೇ ಬೇಡವಾಗಿದೆ. ಕೆಲವು ಸಮಾರಂಭಗಳಲ್ಲಿಯಂತೂ ಸಾರು ಸಂಪೂರ್ಣವಾಗಿ ಕಣ್ಮರೆಯಾಗಿ, ಪಲಾವು, ಬಿಸಿಬೇಳೆ ಭಾತ್, ವಾಂಗಿಭಾತ್, ಆ ಭಾತ್, ಈ ಭಾತ್, ಫ್ರೈಡ್ ರೈಸ್, ಕರ್ಡ್ ರೈಸ್‌ಗಳು ಹಾರಾಡುವ ತಟ್ಟೆಗಳನ್ನು ಆಕ್ರಮಿಸಿ, ನಮ್ಮ ಸ್ವಾದಿಷ್ಟವಾದ ಸಾರಿಗೆ ಭಾರೀ ಅನ್ಯಾಯ ಮಾಡಿವೆ. ■

[illegible]



ಲಘು ಕತೆ



ವಿಭಾ ತಿರಕಪಡಿ

# ಕಹೋ ನಾ ಪ್ಯಾರ್ ಹೈ

ರಾಚನಿಗೇಕೋ ಇಂದು ಕ್ಲಾಸ್ ಕೇಳುವ ಹುಮ್ಮಸ್ಸೇ ಇಲ್ಲ. ಪ್ರೀತಿಯ ಗಣಿತ ಪೀರಿಯಡ್‌ನಲ್ಲೇ ಸಣ್ಣದಾಗಿ ಆಕಳಿಸಿ, ಅಂಗಾಲು ಕೆರೆಸಿದಂತಾಗಿ ತುಸು ಚಡಪಡಿಸಿದ. ಜೇಬಿನ ಮೇಲೆ ಕೈಯಿಟ್ಟು ಸಣ್ಣಗೆ ಕಂಪಿಸಿದ. ಬೆಲ್ ಬಾರಿಸುವುದೇ ತಡ, ಒಂದೇ ಹೆಜ್ಜೆಯಲ್ಲಿ ಗ್ರೌಂಡಿನಲ್ಲಿದ್ದ. ಶಾಲೆಯ ಮೂಲೆಯ ಗಡಿಯಾರದಲ್ಲಿ ಸಮಯ ನೋಡಿಕೊಂಡ. ಒಂದೂವರೆ... ಇಲ್ಲಿಂದ 'ಲಕ್ಷ್ಮೀ ಟಾಕೀಸ್'ನವರೆಗೆ ನಡೆದು ಹೋಗಲು ಹೆಚ್ಚು-ಕಡಿ ಅರ್ಧಗಂಟೆಯೇ ಬೇಕು. ಆಮೇಲೆ ಅಲ್ಲಿಯೇ ಗಿಡದ ಕೆಳಗೆ ಕುಳಿತು ಮನೆಯಿಂದ ತಂದ ರೊಟ್ಟಿ ತಿಂದರಾಯ್ತು.

ಜೇಬಿನಲ್ಲಿದ್ದ ಇಪ್ಪತ್ತು ರೂಪಾಯಿಯ ನೋಟು ಅವನಲ್ಲಿ ಎಲ್ಲಿಲ್ಲದ ಸಂಭ್ರಮ, ಖುಶಿ, ದಿಗಿಲು ಮೂಡಿಸಿತ್ತು. ಆ ಉದ್ವೇಗದಲ್ಲೇ ಓಡುವವರಂತೆ ನಡೆಯತೊಡಗಿದ, ಓಡುವ ದಾರಿಯಲ್ಲಿ ಬೆಳಗಿನ ನೆನಪು ಸುಳಿಯತೊಡಗಿತು. ಅವ್ವನೊಡನೆ ದೇವರ ಜಗಲಿಯ ಮುಂದೆ ಕೈ ಮುಗಿದು, ಕಣ್ಣುಮುಚ್ಚಿ ನಿಂತುಕೊಳ್ಳುವುದು, ಸ್ನಾನವಾದೊಡನೆಯೇ ನಿತ್ಯದ ಪರಿಪಾಠ ಅವನಿಗೆ. ಇಂದೂ ಹಾಗೆಯೇ ನಿಂತಾಗ ಅವ್ವ ಉಸಿರು ಬಿಡುತ್ತಾ, 'ತಾಯಿ-ನಮ್ಮ ರಾಚನ್ನ ಪಿ.ಯು.ಸಿ. ಪರೀಕ್ಷಾಸ್ಯಾಗ ಫಸ್ಟ್‌ಕ್ಲಾಸ್ ಪಾಸ್ ಮಾಡವ್ವಾ' ಎನ್ನುತ್ತಾ ರಾಚನ ತಲೆಸವರಿ, 'ತಮಾ, ಈ ಸಲ ಚಲೋತಂಗೆ ಪಾಸ ಆದ್ಯಂದ್ರ ನಿಮ್ಮಪ್ಪನ ನೌಕರಿ ನಿನಗ ಬರ್ರೈತಿ, ನನ್ನ ಇಷ್ಟ ವರ್ಸದ ಕಸ್ಟೆಲ್ಲ ಪರಿಹಾರ ಆದಂಗನು' ಎಂದು ಮತ್ತೊಮ್ಮೆ ನಿಟ್ಟುಸಿರು ಬಿಟ್ಟು, ಜಗಲಿಯ ಮೇಲಿನ ಅಂಗಾರ ಹಣೆಗೊತ್ತಿ, ನಾಲಿಗೆಗೆ ಸವರಿಕೊಂಡಳು. ನಂತರ ಇಪ್ಪತ್ತು ರೂಪಾಯಿಯ ನೋಟೊಂದನ್ನು ರಾಚನ ಕೈಗಿಟ್ಟು, ದೇವರ ಮುಂದಿನ ಹುಂಡಿಯೊಳಗೆ ಹಾಕಲು ಹೇಳಿ, ಅವನ ಹಣೆಗೂ ಅಂಗಾರ ಹಚ್ಚಿ, ನಾಲಿಗೆಗೂ ಸವರಿ ನಿಧಾನಕ್ಕೆ ಒಳಸರಿದಳು.

ರಾಚನಿಗೆ ತನ್ನ ಕೈಯಲ್ಲಿನ 20 ರೂ ನೋಟು ಕಂಡು ಗಲಿಬಿಲಿಯಾಗತೊಡಗಿತು. ತನ್ನ ಕಾಲೇಜಿನ ಎದುರಿನ ಬೇವಿನ ಮರದ ಕೆಳಗಿನ ತಗಡಿನ ಚಾದಂಗಡಿಯ ಗೋಡೆಗೆ ಬಡಿದ 'ಕಹೋ ನಾ ಪ್ಯಾರ್ ಹೈ' ಸಿನಿಮಾದ ಪೋಸ್ಟರ್ ಥಟ್ಟನೇ ನೆನಪಾಗಿ ಬೆವರತೊಡಗಿದ. ನಿನ್ನೆಯೇ ಚಿದು ಆ ಸಿನಿಮಾ ತಾನು ಮೂರು ಸಲ ನೋಡಿದ್ದಾಗಿ ತುಂಬ ಜಂಬದಿಂದ ಹೇಳಿಕೊಂಡಿದ್ದ. ಇಡೀ ಕ್ಲಾಸಿನಲ್ಲಿ ತನ್ನನ್ನುಳಿದು ಎಲ್ಲರೂ ನೋಡಿದ್ದರು! ಆ ರಾಜಿ ಕೂಡ!! ಮೊನ್ನೆ ಆಕೆ ಗೆಳತಿಯರೊಡನೆ ಮಾತಾಡುತ್ತ, ಕಿಲಕಿಲ ನಗುತ್ತ, ಹೃತಿಕ್‌ನ ಕಣ್ಣುಗಳು, ಅವನ ಪರ್ಸ್‌ನ್ಯಾಲಿಟಿಯ ಬಗ್ಗೆ ಹೆಮ್ಮೆಯಿಂದ ಹೊಗಳುತ್ತಿದ್ದುದನ್ನು ಕೇಳಿಸಿಕೊಂಡಿದ್ದ ರಾಚನಿಗೆ ಅಸೂಯೆಯೆನ್ನಿಸಿ, ಮರುದಿನ ಕ್ಲಾಸಿಗೆ ಹೋಗುವ ಮುನ್ನ ಹಲವಾರು ಬಾರಿ ಕನ್ನಡಿಯಲ್ಲಿ ತನ್ನನ್ನು ನೋಡಿಕೊಂಡಿದ್ದ. ಮೈಯೆಲ್ಲಾ ಸಾವಿರ ಇರುವೆಗಳು ಮುತ್ತಿ ಕಚ್ಚಿದಂತೆನ್ನಿಸಿತು.

ಇಪ್ಪತ್ತು ರೂಪಾಯಿ...! ಎಷ್ಟೊಂದು ವರ್ಷಗಳಾದವು ತಾನು ಸಿನಿಮಾ ನೋಡಿ? ಅಪ್ಪ ಇದ್ದಾಗ ಜಾತ್ರೆಯ ದಿನವೋ, ಹಬ್ಬದ ದಿನವೋ ಕರಕೊಂಡು ಹೋಗುತ್ತಿದ್ದ. ಈಗ 15 ರೂ. ಟಿಕೆಟ್ಟಿಗೆ, ಉಳಿದ ರೂ. ಇಂಟರ್‌ವಲ್‌ನಲ್ಲಿ ಏನಾದರೂ ತಿನ್ನಬಹುದೆಂದು ಒಳಗೊಳಗೇ ಹಿಗ್ಗಿದ. ಆಗ ಅಪ್ಪನೊಡನೆ ಸಿನಿಮಾಕ್ಕೆ ಹೋದ್ರೆ, ಚಾನ್ಸೋ ಚಾನ್ಸು! ಮಧ್ಯಂತರ ಮೂಡುವುದಕ್ಕಾಗಿಯೇ ತಾನು ಕಾಯುತ್ತಿದ್ದ ನೆನಪು


ಶೇಷಾದ್ರಿ

ಅಪ್ಪನ ಕೈಹಿಡಿದು, ಬೆವರೊರೆಸಿಕೊಂಡು ಥೇಟರಿನಿಂದ ಹೊರಬಂದರೆ, ಯಾವುದೋ ಲೋಕದಿಂದ, ಈ ಲೋಕಕ್ಕೆ ಇಳಿದಂತೆ ಭಾಸವಾಗುತ್ತಿತ್ತು ಅವನಿಗೆ. ಭಡಂಗನ್ನೋ, ಚಿಪ್ಸನ್ನೋ, ಕುಲ್ಫಿಯನ್ನೋ ಅಪ್ಪನಿಂದ ಕೊಡಿಸಿಕೊಂಡು ತಿನ್ನುವುದು, ಅಪ್ಪ ಬೀಡಿ ಹಚ್ಚಿಕೊಂಡು ಗುರ್ತಿನವರೊಡನೆ ಮಾತಾಡುತ್ತಾ ನಿಲ್ಲುವುದು, ತಾನು ಸಿನಿಮಾಕ್ಕೆ ಬಂದ ಎಂಥೆಂಥಾ ಜನ ಇಂಟರ್‌ವಲ್‌ನಲ್ಲಿ ಏನೇನು ತಿಂತಾರೆ, ಮಾಡ್ತಾರೆ ಅಂತೆಲ್ಲ ಗಮನಿಸುತ್ತ ನಿಂತುಕೊಳ್ಳುವುದು ನೆನಪಿಗೆ ಬಂದು, ಈಗ ಕೊಂಚ ದೊಡ್ಡವನಾದ ರಾಚನಿಗೆ ನಾಚಿಕೆಯಾಯ್ತು.

ಅಪ್ಪ-ಅವ್ವ ಇಬ್ಬರೂ ಜೊತೆಯಲ್ಲಿದ್ದರೆ ಸಿನಿಮಾದ ಮಜಾನೇ ಬೇರೆ ಅಂದುಕೊಂಡ. ರಿಕಾರ್ಡ್ ಹತ್ತಿದ ತಕ್ಷಣವೇ ಅಪ್ಪ, ಅವ್ವನ ಭುಜಕ್ಕೆ ಭುಜ ತಾಕಿಸಿ ಕಣ್ಣು ಮಿಟುಕಿಸಿದರೆ, ಅವ್ವ ನಾಚಿಕೊಂಡು, ಕಣ್ಣಲ್ಲೇ ಅಪ್ಪನನ್ನು ಗದರಿಸಿ, ಸಾಧ್ಯವಾದರೆ ಮೆಲ್ಲಗೆ ತೊಡೆಗೊಂದು ಹೊಡೆದು, ಹೀರೋಯಿನ್ ಹಾಕಿದ ಸರ ತೋರಿಸಿಯೋ, ಅವಳ ಸಂಗಡಿಗರ ಅಂಬ್ರೆಲ್ಲಾ ಲಂಗಗಳ ಮೇಲಿರುವ ನವಿಲಿನ ಚಿತ್ರ ತೋರಿಸುತ್ತಲೋ, ಹಿಂದೆ ಬೀಳುವ ಜಲಪಾತವನ್ನು ಗಾಬರಿಯಿಂದ ನೋಡುತ್ತಲೋ ತನ್ನತ್ತ ಜರುಗಿ ಕೂತುಬಿಡುತ್ತಿದ್ದಳು.

ಇದನ್ನೆಲ್ಲ ನೆನೆಯುತ್ತ, ಈಗ ಅದೆಲ್ಲ 'ಸಾಧ್ಯವೇ ಇಲ್ಲವಲ್ಲ' ಅನ್ನಿಸಿ, 'ಥತ್' ಎಂದುಕೊಂಡ. ಟಾಕೀಸು ಸಮೀಪ ಬರುತ್ತಿದ್ದಂತ, ಅವನ ಎದೆ ಗಂಟೆಗೆ 100 ಕಿಲೋ ಮೀಟರ್ ವೇಗವಾಗಿ ಹೊಡೆದುಕೊಳ್ಳಲಾರಂಭಿಸಿತು. ಸುಮ್ಮನೇ ಥೇಟರ್ ಎದುರುಗಡೆ ಒಂದೆಡೆ ನಿಂತ. ಆಗಲೇ ಜನ ಬಂದು 'ಕ್ಯೂ'ನಲ್ಲಿ ನಿಂತಿದ್ದರು! ಸಿನಿಮಾಗೆ ಬಂದವರನ್ನು, ನೋಡಿ ಹೊರಬಂದವರನ್ನು ಬರೀ ವಾಸನೆಯ ಮೇಲೆಯೇ ಗುರುತಿಸಬಹುದು ಅನ್ನಿಸಿತು ರಾಚನಿಗೆ. ಪಕ್ಕಕ್ಕೇ ಹಾದು ಹೋದ ಒಬ್ಬನನ್ನು ಟೈಮ್ ಕೇಳಿದ. ಇನ್ನೂ ಇಪ್ಪತ್ತು ನಿಮಿಷ ಟಿಕೆಟ್ ಕೊಡಲು. ಏನು ಮಾಡುವುದು ಎಂದುಕೊಳ್ಳುತ್ತಲೇ ದೂರದ ಗಿಡದ ಕೆಳಗಿನ ಕಟ್ಟೆಯೊಂದರ ಮೇಲೆ ನಿಧಾನವಾಗಿ ಹೋಗಿ ಕುಳಿತ, ಎದೆಯಿನ್ನೂ ಹೊಡೆದುಕೊಳ್ಳುತ್ತಲೇ ಇತ್ತು.

ಆ ಮರವೇನು ಬೋಧಿವೃಕ್ಷವೋ ಎಂಬಂತೆ, ಯಾಕೋ, ಏನೋ ನೆನೆದು, ಅವನ ಕಣ್ಣುಗಳು ಮೆಲ್ಲಗೆ ಹಸಿಯಾಗತೊಡಗಿದವು. ನಿನ್ನೆ ಅವ್ವ ಉಟ್ಟಿದ್ದ ಸೀರೆ ಮೂರ್‍ನಾಲ್ಕು ಕಡೆ ಹರಿದಿದೆ, ಬೆಳಿಗ್ಗೆ ರೊಟ್ಟಿ ಹಿಟ್ಟು ಮುಗಿಯಿತು ಎಂದಳಲ್ಲ, ಸಂಜೆಗೇನು ಮಾಡಬಹುದು? ರಾತ್ರಿಯ ಎರಡೂ ರೊಟ್ಟಿ ನನ್ನ ಡಬ್ಬಿಗೇ ಹಾಕಿದ್ದಾಳೆ-ಇವತ್ತು ಅವಳೇನು ತಿಂತಾಳೆ? ತನ್ನ ಪರೀಕ್ಷಾ ಫಾರ್ಮ್‌ಗೇಂತ ದುಡ್ಡು ಕೊಡಿಸತೊಡಗಿದಂದಿನಿಂದ ಅವ್ವ ತನಗೆಂದು ಏನೂ ತೆಗೆದುಕೊಂಡಿಲ್ಲ, ತಿಂದಿಲ್ಲ ಅನ್ನಿಸಿ ರಾಚನಿಗೆ ತನ್ನ ಬಗ್ಗೆ ಅಸಾಧ್ಯ ಕ್ಷೋಭೆ ಆಯಿತು.



ಎದುರಿಗೆ ಜೀನ್ಸ್ ಹಾಕಿದ್ದ ಹೃತಿಕ್‌ನ ಕಣ್ಣುಗಳು ಫಳಫಳ ಹೊಳೆಯುತ್ತಿದ್ದವು, ರಾಚನ ಕಣ್ಣಲ್ಲಿ ದಳದಳ ನೀರಿಳಿಯತೊಡಗಿತು. ರಾಚ ಒಂದು ಕ್ಷಣ ಜೇಬು ಮುಟ್ಟಕೊಂಡ. ಕಾಗದದ ಚೂರೊಂದು ಕೈಗೆ ತಟ್ಟಿದಂತೆ 20 ರೂಪಾಯಿಯ ನೋಟು! ಜೇಬನ್ನು ಗಟ್ಟಿಯಾಗಿ ಒಂದು ಕೈಯಿಂದ ಹಿಡಕೊಂಡು, ಹೆಗಲಿಗೆ ಚೀಲ ಹೇರಿಕೊಂಡು ರಾಚ ಒಂದೇ ಸಮನೆ ದುಡುದುಡು ಓಡತೊಡಗಿದ. ಅವ ಓಡಿದ ರಭಸಕ್ಕೆ ಥೇಟರಿನ ಗೇಟು ಮೆಲ್ಲಗೆ ಮುಚ್ಚಿಕೊಂಡಿತು.



# ಎಕರೆಗಟ್ಟಲೆ ವಜ್ರಗಳು

ಬಹಳ ವರ್ಷಗಳ ಹಿಂದೆ ಭಾರತದಲ್ಲಿ ಅಲಿ ಹಾಫೆದ್‌ನೆಂಬ ರೈತ ತನ್ನ ಹೊಲ, ಮನೆ, ತೋ
ಮಾಡಿಕೊಂಡು ಶಾಂತಜೀವನ ನಡೆಸುತ್ತಿದ್ದ.

ಒಂದು ದಿನ, ಪ್ರತಿವರ್ಷದಂತೆ, ಒಬ್ಬ ಬೌದ್ಧ ಸನ್ಯಾಸಿ ಅವನಲ್ಲಿಗೆ ಬಂದ. ಅವರಿಬ್ಬರೂ ಮಾತನಾಡ
ಕುಳಿತಾಗ ಸನ್ಯಾಸಿಯು ಈ ಜಗತ್ತನ್ನು ದೇವರು ಹೇಗೆ ಸೃಷ್ಟಿಸಿದ, ಇಲ್ಲಿಯ ವಿವಿಧ ವಸ್ತುಗಳು ಹೆ
ತಯಾರಾದವು ಎಂದು ಹೇಳುತ್ತ, 'ಭೂಮಿಯೊಳಗಿನ ಕುದಿಯುತ್ತಿರುವ ರಸವು ಕ್ರಮೇಣ ಸಾವಕಾಶವಾ
ಅತಿ ಸಾವಕಾಶವಾಗಿ ಆರುತ್ತ ತಣ್ಣಗಾಗಿ ಸೂರ್ಯ ಪ್ರಕಾಶವೇ ಘನೀಕೃತವಾಯಿತೋ ಎಂಬಂತೆ ವ
ತಯಾರಾಯಿತು. ನಿನ್ನ ಹೆಬ್ಬಟ್ಟಿನಷ್ಟು ಗಾತ್ರದ ಒಂದು ವಜ್ರದಿಂದ ಈ ನಾಡನ್ನೆಲ್ಲ ಕೊಂಡುಕೊಳ್ಳಬಹು
ಒಂದು ವೇಳೆ ಇಂಥ ವಜ್ರದ ಖಣಿಯೇ ನಿನ್ನದಾದರೆ ಅದರ ಬಲದಿಂದ ಈ ದೇಶದ ರಾಜನಾಗಬಹು
ಎಂದನು.

ಅಲಿ ಹಾಫೆದ್‌ನಿಗೆ ಆ ರಾತ್ರಿ, ನಿದ್ರೆಯೇ ಬರಲಿಲ್ಲ. ತಾನೆಷ್ಟು 'ಬಡವ' ಎಂಬ ಭಾವನೆ ಮ
ಅಸಮಾಧಾನಗೊಂಡ. ಇಡೀ ರಾತ್ರಿ ವಜ್ರದ ಖಣಿಯ ಬಗ್ಗೆಯೇ ಯೋಚಿಸಿದ.

ಮರುದಿನ ನಸುಕಿನಲ್ಲಿಯೇ ಸನ್ಯಾಸಿಯನ್ನು ಎಬ್ಬಿಸಿ, 'ವಜ್ರದ ಖಣಿಗಳೆಲ್ಲಿವೆ? ಹೇಳು' ಎಂ
ಒತ್ತಾಯಿಸಿದ. ರೈತನ ಅತಿ ಆಸೆಯನ್ನು ಗಮನಿಸಿದ ಸನ್ಯಾಸಿಯು ಆ ವಿಚಾರದಿಂದ ರೈತನ ಮನ ಹೊರಳಿಸ
ಪ್ರಯತ್ನಿಸಿ, ವಿಫಲನಾಗಿ ಕೊನೆಗೆ ಹೇಳಿದ, ''ಎತ್ತರವಾದ ಪರ್ವತಗಳ ನಡುವೆ ಹರಿಯುವ ನದಿಯ
ಉಸುಕಿನಲ್ಲಿ ವಜ್ರಗಳನ್ನು ಕಾಣಬಹುದು.''

ಮರುದಿನವೇ ಅಲಿ ಹಾಫೆದ್, ತನ್ನ ಹೊಲ, ಮನೆ, ತೋಟವನ್ನೆಲ್ಲ ನೆರೆಯವನಿಗೆ ಮಾರಿ, ತನ್ನ ಹೆಂ
ಮಕ್ಕಳನ್ನು ಸಂಬಂಧಿಕರ ರಕ್ಷಣೆಯಲ್ಲಿಟ್ಟು ವಜ್ರ ಹುಡುಕಲು ಹೊರಟನು. ಹುಡುಕುತ್ತಾ ಹುಡುಕ
ಮುಂದೆ ಮುಂದೆ ಸಾಗಿ, ತನ್ನ ಕೈಯಲ್ಲಿದ್ದ ಹಣವನ್ನೆಲ್ಲಾ ಖರ್ಚು ಮಾಡಿಕೊಂಡ. ಕೊನೆಗೆ ಒಂದು
ಹಸಿವಿನಿಂದ ಬಳಲುತ್ತ, ನಿರಾಶಗೊಂಡು ಸಮುದ್ರಕ್ಕೆ ಹಾರಿ ಪ್ರಾಣ ಕಳೆದುಕೊಂಡ.

ಅಲಿ ಹಾಫೆದ್‌ನ ಹೊಲ, ಮನೆ, ತೋಟ ಕೊಂಡುಕೊಂಡ ರೈತನು ಒಂದು ದಿನ ತನ್ನ ಒಂಟೆಗೆ ನಿ
ಕುಡಿಸಲು ತನ್ನ ತೋಟದಲ್ಲಿರುವ ಹಳ್ಳಕ್ಕೆ ಕರೆದೊಯ್ದನು. ಒಂಟೆ ನೀರು ಕುಡಿಯುತ್ತಿರುವಾಗ ಅದರ



ಬಳಿ ಕಣ್ಣು ಕುಕ್ಕುವಂತೆ ಹೊಳೆಯುತ್ತಿರುವ ವಸ್ತುವೊಂದನ್ನು ನೋಡಿ, ಕೈಗೆತ್ತಿಕೊಂಡು ಮನೆಗೆ ತಂದನು. ಅದನ್ನು ತಾನೀಗ ವಾಸಿಸುತ್ತಿರುವ ಹಾಫೆದ್‌ನ ಮನೆಯ ಮುಂಬಾಗಿಲ ಎದುರಿಗಿರುವ ಗೂಡಿನಲ್ಲಿಟ್ಟನು.

ಎಂದಿನಂತೆ ಮರುವರ್ಷ ಆ ಮನೆಗೆ ಬಂದ ಸನ್ಯಾಸಿ, ಮುಂಬಾಗಿಲು ತೆರೆದೊಡನೆ, ಕಣ್ಣು ಕುಕ್ಕಿಸುವ ವಸ್ತುವನ್ನು ನೋಡಿ ಅದರ ಬಳಿ ಹೋದ. ''ಇದು ವಜ್ರ! ಹಾಗಾದರೆ ಅಲಿ ಹಾಫೆದ್ ತಿರುಗಿ ಬಂದಿದ್ದಾನೆ! ಈ ವಜ್ರ ತಂದಿದ್ದಾನೆ!'' ಎಂದು ಸಂತೋಷದಿಂದ ಗಟ್ಟಿಯಾಗಿ ಕೂಗಿದ. ಈ ಕೂಗನ್ನು ಕೇಳಿ ಹೊರಬಂದ ಹೊಸ ರೈತ, ''ಇಲ್ಲ. ಅವನು ಬಂದಿಲ್ಲ. ಹೊಳೆಯುವ ಈ ಕಲ್ಲು ತೋಟದಲ್ಲಿ ಹರಿಯುವ ಹಳ್ಳದ ಉಸುಕಿನಲ್ಲಿ ನನಗೆ ದೊರಕಿತು'' ಅಂದ.

''ತಪ್ಪು. ಇದು ಹೊಳೆಯುವ ಕಲ್ಲಲ್ಲ. ಇದು ಖಂಡಿತವಾಗಿಯೂ ಬೆಲೆ ಬಾಳುವ ವಜ್ರ!'' ಎನ್ನುತ್ತ ಸನ್ಯಾಸಿಯು ಹೊಸ ರೈತನೊಡಗೂಡಿ ತೋಟದ ಹಳ್ಳಕ್ಕೆ ಹೋದನು. ಅಲ್ಲಿಯ ಉಸುಕನ್ನು ಗೆಬರಿದಾಗ ಮೊದಲಿನಕ್ಕಿಂತ ಸುಂದರವಾದ ಮತ್ತು ಅಮೂಲ್ಯವಾದ ಅನೇಕ ವಜ್ರಗಳು ದೊರೆತವು.

ಈ ಸಂಗತಿ ಐತಿಹಾಸಿಕವಾಗಿ ಸತ್ಯವಾಗಿದ್ದು ಜಗತ್ಪ್ರಸಿದ್ಧ 'ಕೋಹಿನೂರ', 'ಹೋಪ್', ನೀಲಿ ವಜ್ರ ಮತ್ತು ಪ್ಯಾರಿಸ್ಸಿನ 'ಲೋವೆ' ವಸ್ತು ಸಂಗ್ರಹಾಲಯದಲ್ಲಿರುವ ಪ್ರಸಿದ್ಧ 'ರೀಜೆಂಟ್' ವಜ್ರಗಳು ಇದೇ ಜಾಗೆಯಲ್ಲಿ ದೊರೆತವುಗಳೆಂದು ಪ್ರತೀತಿ.

ಅಲಿ ಹಾಫೆದ್ ವಜ್ರದ ಹುಡುಕಾಟಕ್ಕಾಗಿ ದೂರದ ನಾಡಿಗೆ ಹೋಗಿ, ಅನ್ನ, ನೀರಿಲ್ಲದೆ ಕಂಗಾಲಾಗಿ ಆತ್ಮಹತ್ಯೆ ಮಾಡಿಕೊಳ್ಳುವದಕ್ಕಿಂತ ಇಲ್ಲಿಯೇ ಇದ್ದು, ಒಂದು ವೇಳೆ ತನ್ನ ಹೊಲ, ಮನೆ, ತೋಟವನ್ನಾಗಲೀ ಅಗೆದು ನೋಡಿದ್ದರೆ ತನ್ನ ಕಾಲ ಕೆಳಗೆ ಎಕರೆಗಟ್ಟಳೆ ವಜ್ರ ಕಾಣಬಹುದಿತ್ತು.



(ಅಮೇರಿಕೆಯ ಉಪನ್ಯಾಸಕ ಡಾ॥ ರಸೆಲ್ ಎಚ್. ಕಾನ್‌ವೆಲ್‌ರು ತಮ್ಮ ಉಪನ್ಯಾಸಗಳಲ್ಲಿ ಪ್ರತಿ ಸಲವೂ ಬಳಸುವ ದೃಷ್ಟಾಂತ.) ■

ಹಾವೇರಿ — ಶಿವಾನಂದ ನಾಗನೂರ

# ಸಂದೇಶ

ಸೌಮ್ಯ ಬೆಳದಿಂಗಳ ಬಾಲೆ. ಅವಳದು ಬಣ್ಣದ ಕನಸುಗಳನ್ನು ಕಾಣುವ ಹದಿಹರೆಯ, ಆಗಸದ ಚುಕ್ಕೆಗಳನ್ನು ಹಿಡಿಯುವ ಲವಲವಿಕೆ. ಹನ್ನೆರಡನೆಯ ಕ್ಲಾಸಿನಲ್ಲಿ ಓದು. ಸಂಜಯ ದತ್‌ನ ಚಿತ್ರಗಳೆಂದರೆ ಪಂಚಪ್ರಾಣ. ತಂದೆ ಅನಿರುದ್ಧ ನಾಡಕರ್ಣಿ, ತಾಯಿ ಸುಹಾಸಿನಿ. ಇವರದು ಮೇಲ್ಮಧ್ಯಮವರ್ಗದ ಸುಖೀ, ಸುಂದರ ಕುಟುಂಬ.

ನಾಡಕರ್ಣಿಯವರಿಗೂ, ಕಾಮತ್ ಕುಟುಂಬದವರಿಗೂ ಅನ್ಯೋನ್ಯ ಸಂಬಂಧ. ನಿನಾದ್ ಕಾಮತ್ ಒಬ್ಬ ಕ್ರಿಕೆಟ್ ಪ್ರೇಮಿ. ಸೌಮ್ಯ ಹಾಗೂ ನಿನಾದ್ ಒಂದೇ ಕಾಲೇಜನಲ್ಲಿ ಓದುತ್ತಿರುತ್ತಾರೆ. ಇವರ ನಡುವೆ ಪ್ರೀತಿಯ ಸೇತುವೆ.

ಅಂತಿಮ ಪರೀಕ್ಷೆಗಳ ಸಮಯ. ಅನಿರುದ್ಧನಿಗೆ ಮಗಳು ಐಐಟಿ ಸೇರಬೇಕೆಂಬ ಬಯಕೆ. ಕೊನೆಯ ಪರೀಕ್ಷೆಯ ಮುನ್ನ ಸೌಮ್ಯ ತೀವ್ರ ಜ್ವರದಿಂದ ಬಾಧಿತಳಾಗುತ್ತಾಳೆ. ಪರೀಕ್ಷೆ ತೆಗೆದುಕೊಳ್ಳುವುದಿಲ್ಲ. ಕೆಲವು ವಾರಗಳು ಕಳೆದರೂ, ಜ್ವರ ಇಳಿಯುವುದಿಲ್ಲ. ತಂದೆ, ತಾಯಿ ಆತಂಕಗೊಳ್ಳುತ್ತಾರೆ. ವೈದ್ಯಕೀಯ ಪರೀಕ್ಷೆಗಳು ಆಕೆ ಏಡ್ಸ್‌ನಿಂದ ಪೀಡಿತಳಾಗಿದ್ದಾಳೆ ಎಂಬುದನ್ನು ಸಾಬೀತುಪಡಿಸುತ್ತವೆ. ಚಿಕ್ಕಂದಿನಲ್ಲಿ ರಕ್ತದಾನ ಪಡೆದದ್ದು,



ಮಾರಕವಾದ ವ್ಯಾಧಿಗೆ ಕಾರಣವಾಗುತ್ತದೆ. ನಾಡಕರ್ಣಿಯವರ ಕನಸಿನ ಗೋಪುರ ನುಚ್ಚುನೂರಾಗುತ್ತ ದಂಪತಿಗಳು ಮಮ್ಮಲ ಮರುಗುತ್ತಾರೆ, 'ವಿಜ್ಞಾನಿಗಳು ಪ್ರಾಣಿಗಳ ಕ್ಲೋನಿಂಗ್‌ಗಾಗಿ, ರೋಬೋಗಳ ಕಂಡುಹಿಡಿಯುವುದಕ್ಕಾಗಿ, ವಿನಾಶಕಾರಿ ಅಣು ಬಾಂಬುಗಳನ್ನು ತಯಾರಿಸುವುದಕ್ಕಾಗಿ ಹಣ, ಸಮ ಹಾಗೂ ಶಕ್ತಿಯನ್ನು ವಿನಿಯೋಗಿಸುತ್ತಾರೆ. ಆದರೆ ಗುಪ್ತವಾಗಿ ಮಾನವರ ದೇಹಗಳನ್ನು ಸೇರಿ, ಅವರ ಕೊಲ್ಲುವ ಸಣ್ಣ ಏಡ್ಸ್‌ನ ರೋಗಾಣುವನ್ನು ಸದೆಬಡಿಯಲು ಆಗುವುದಿಲ್ಲವಾ?' ಅವರದು ಅರ ರೋದನವಾಗುತ್ತದೆ.

ನಿಸಾದ್ ಹಾಗೂ ಮಗಳ ಒಡನಾಟ ಬಲ್ಲ ಅನಿರುದ್ಧ, ನಿಸಾದ್‌ಗೆ ಸಲಹೆ ನೀಡುತ್ತಾನೆ, "ನಿ ಅವಳಿಗೆ ಸಂದೇಹ ಬರದಂತೆ, ದೂರ ಸರಿ".

ನಂತರ, ಸೌಮ್ಯಳಿಗೆ ತಾನು ಏಡ್ಸ್ ರೋಗಿ ಎಂಬುದು ತಿಳಿಯುತ್ತದೆ. ನಿಸಾದ್ ದೂರ ಸರಿಯದೆ ಇನ ಹೆಚ್ಚಿನ ಪ್ರೀತಿ ತೋರಿಸುತ್ತಾನೆ. ಅವನ ಮನೆಯ ಮಂದಿ ಸಹ ಅವಳಲ್ಲಿ ಸ್ಥೈರ್ಯವನ್ನು ತುಂಬುತ್ತಾ ತರುವಾಯ ಅವರು ಅವಳನ್ನು ತಮ್ಮ ಸೊಸೆಯನ್ನಾಗಿ ಸ್ವೀಕರಿಸಲು ನಿಶ್ಚಯಿಸುತ್ತಾರೆ. ಈ ಉದಾತ್ತ ನಿಲುವ ಕೇಳಿ ನಾಡಕರ್ಣಿಯವರ ಹೃದಯ ತುಂಬಿಬರುತ್ತದೆ. ಅಂತೂ, ಜಯಶಾಲಿಯಾಗುತ್ತದೆ ನೈಜ ಪ್ರೇಮ.

ಸೌಮ್ಯ ಚಿಕಿತ್ಸೆ ತೆಗೆದುಕೊಳ್ಳುತ್ತಿರುತ್ತಾಳೆ. ಪುನಃ ಪರೀಕ್ಷೆಗೆ ಕೂರುತ್ತಾಳೆ. ಉತ್ತಮ ಅಂಕಗಳನ್ನು ಗಳ ಮೂರನೇ ಸ್ಥಾನ ಪಡೆಯುತ್ತಾಳೆ. ಎರಡೂ ಕುಟುಂಬದವರೂ ಆಕೆಯ ಮೇಲೆ ಪ್ರೀತಿ ಮಳೆಗರೆಯುತ್ತಾರೆ. ಆದರೂ ಸಾವು ಹೊಸ್ತಿಲಿನಲ್ಲಿ ಹೊಂಚು ಹಾಕುತ್ತಿರುತ್ತದೆ.

ತನ್ನ ಕೊನೆಯ ದಿನಗಳು ಹತ್ತಿರವಾಗಿದ್ದರೂ, ಅವಳ ಜೀವನ ಪ್ರೀತಿ ಕುಂದುವುದಿಲ್ಲ. 'ನಾ ಬದುಕಬೇಕು... ನನಗೆ ಸಾಯುವುದಕ್ಕೆ ಇಷ್ಟವಿಲ್ಲ... ನಾನು ತುಂಬ ಚಿಕ್ಕವಳು...' ಎನ್ನುವ ಅ ಸಾವಿನೊಡನೆ ಸೆಣಸಾಡುತ್ತಾಳೆ.

ಆರೋಗ್ಯ ಗಂಭೀರವಾದಾಗ, ನಗರದ ಪ್ರತಿಷ್ಠಿತ ನರ್ಸಿಂಗ್ ಹೋಮ್‌ಗೆ ಸೇರಿಸ ಪ್ರಯತ್ನಿಸುತ್ತಾರೆ. ಅಲ್ಲಿಯ ಪ್ರಖ್ಯಾತ ವೈದ್ಯ ಮೊದಲು ನಿರಾಕರಿಸಿದರೂ, ನಂತರ ಆಸ್ಪತ್ರೆಯಲ್ಲಿಟ್ಟುಕೊಂ 'ಚಿಕಿತ್ಸೆ' ನೀಡುತ್ತಾನೆ. ಆದರೆ ಯಾವುದೂ ಫಲಕಾರಿಯಲ್ಲ.

"ಅಂತಿಮ ಕ್ಷಣಗಳನ್ನು ಮನೆಯಲ್ಲಿ ಕಳೆಯುತ್ತೇನೆ. ನಿಮ್ಮೊಡನೆ ಇರುವಾಗ ಪ್ರಾಣ ಹೋಗಲಿ", ಸೌಮ್ಯ ತನ್ನ ಇಂಗಿತವನ್ನು ಮನೆಯವರಿಗೆ ತಿಳಿಸುತ್ತಾಳೆ.



ಮನೆಗೆ ಮರಳಿದ ಸ್ವಲ್ಪ ಅವಧಿಯಲ್ಲೇ ಆಕೆ ಚಿರಂತನ ನಿದ್ದೆಯ ವಶವಾಗುತ್ತಾ ಅರಳಬೇಕಾದ ಸುಮ ಮೊಗ್ಗಿನಲ್ಲೇ ಮಣ್ಣು ಸೇರುತ್ತದೆ. ಆದರೆ ಏಡ್ಸ್ ರೋಗಿಗ ಬೇಕಿರುವುದು ಪ್ರೀತಿ ಎಂಬ ಸಂದೇಶ ಅಮರವಾಗುತ್ತದೆ.

ಬೆಂಗಳೂರು

ಮ. ಶ್ರೀ ಮುರಳಿ

ಮುಂಚಕಪು



## ಬೇಂದ್ರೆ ಕಾದಂಬರಿಯನ್ನೇಕೆ ಬರೆಯಲಿಲ್ಲ?

ಭಾರತದ ಕಥನ ಪರಂಪರೆಗೆ ಪ್ರಾಚೀನ ಇತಿಹಾಸವಿದ್ದರೂ ಕಾದಂಬರಿಗೆ ಮಾತ್ರ ಸುಮಾರು ನೂ ವರ್ಷಗಳ ವಸಾಹತುವಾದದ ಹಿನ್ನಲೆಯಿದೆ. ಸಂಸ್ಕೃತ ಅಲಂಕಾರಶಾಸ್ತ್ರಜ್ಞರು 'ಕಥೆ', 'ಆಖ್ಯಾಯಿ ಮುಂತಾದ ಕಥನ ಶೈಲಿಗೆ ಸಂಬಂಧಿಸಿದ ಪರಿಕಲ್ಪನೆಗಳನ್ನು ಸುದೀರ್ಘವಾಗಿ ಚರ್ಚಿಸಿದ ದಾಖಲೆ ನಮ್ಮಲ್ಲಿವೆ. ಪುರಾಣ, ಮಹಾಕಾವ್ಯ, ಪಂಚತಂತ್ರ ಕಥೆಗಳು ಕಥನ ಪರಂಪರೆಯನ್ನು ಶ್ರೀಮಂತಗೊಳಿಸ ವೈವಿಧ್ಯಮಯ ತಂತ್ರಗಳನ್ನು ಒಳಗೊಂಡಿದ್ದವು. (ಮಾಸ್ತಿ, ಕಥನ ಪರಂಪರೆಯಿಂದ ನಿರೂಪಣಾ ತಂತ್ರವ ಆಯ್ದುಕೊಂಡು ಕಥೆಗಳನ್ನು ರಚಿಸಿದ್ದನ್ನು ನೆನಪಿಸಿಕೊಳ್ಳಬಹುದು.) ಸೊಗಸಾದ ಕತೆ, ವರ್ಣನೆ ಮತ್ತು ತಾ ಚರ್ಚೆಗಳನ್ನೊಳಗೊಂಡಿರುವ ಕಥನ ಪರಂಪರೆಗಿಂತ ಪಾಶ್ಚಾತ್ಯರ ವಾಸ್ತವ ಮಾರ್ಗ ಕಾದಂಬರಿ(Novel)ಯ ಸ್ವರೂಪವೇ ಹೆಚ್ಚು ಸೂಕ್ತವಾಗಿ ನಮ್ಮ 'ನವೋದಯದ', 'ನವ್ಯ' ಕಾಲದ ಮಹ ಲೇಖಕರಿಗೆ ಏಕೆ ಕಂಡಿತು? 'ಕಥನ ಪರಂಪರೆ' ಏಕೆ ಪೌರಾಣಿಕ, ರಮ್ಯ ಮತ್ತು ಐತಿಹಾಸಿಕ ಕಾದಂಬರಿ ರಚನೆಯ ಮಟ್ಟದಲ್ಲಷ್ಟೇ ಪ್ರಧಾನವಾಗಿ ಉಳಿಯಿತು? ವಾಸ್ತವ ಮಾರ್ಗದ ಕಾದಂಬರಿ ಬರವಣಿಗೆ ತಂತ್ರ ಮತ್ತು ಭಾರತೀಯ ಕಥನ ಪರಂಪರೆ ಇವರೆಡನ್ನು ಸಂಯೋಗಿಸಲು ಹೋದ ಲೇಖಕರು ಸೋತರು?

ಈ ಎಲ್ಲ ಪ್ರಶ್ನೆಗಳು ಕಾದಂಬರಿಗಳು ಹುಟ್ಟಿದ ಸಾಮಾಜಿಕ ಸಂದರ್ಭವನ್ನು ಐತಿಹಾಸಿಕವಾಗಿ ಗ್ರಹಿಸ ಒತ್ತಾಯಿಸುತ್ತವೆ. ಪರಿವರ್ತನೆಯ ತಲ್ಲಣಗಳಿಗೆ ಒಳಗಾಗುವ ಸಮಾಜದ ಅನುಭವಗಳನ್ನು ಹೊಸ ಬಗೆ ಅರ್ಥಪೂರ್ಣ ಕ್ರಮದಲ್ಲಿ 'ಪುನರ್‌ರಚಿಸುವ' (reconstruction) ಪ್ರಕ್ರಿಯೆಯ ಯತ್ನದ ಫಲವಾ ಕಾದಂಬರಿ ತನ್ನ ಸ್ವರೂಪವನ್ನು ಪಡೆಯುತ್ತದೆ. ವಸಾಹತು ಭಾರತದಲ್ಲಿ 'ಪುನರ್‌ರಚನೆ'ಯ ಪ್ರಕ್ರಿ ಪಾಶ್ಚಾತ್ಯರ-ಪ್ರಭಾವ (ಸಕಾರಾತ್ಮಕವಾಗಿಯೋ ನಕಾರಾತ್ಮಕವಾಗಿಯೋ)ದ ಮೂಲಕವೇ ನಡೆದಿದೆ. ಇದ ಸಾಹಿತ್ಯವೂ ಹೊರತಾಗಿಲ್ಲ. ಪ್ರತಿಭಾವಂತ ಲೇಖಕ ತನ್ನ ಪ್ರಜ್ಞೆ ಮತ್ತು ಪರಿಸರಗಳೆರಡರಲ ಪರಿವರ್ತನಶೀಲ ಸಾಂಸ್ಕೃತಿಕ ಗತಿಯನ್ನು ಶೋಧಿಸಿ, ಕಾದಂಬರಿಯಲ್ಲಿ 'ಪುನರ್‌ರಚಿಸಿ'ಕೊಳ್ಳುತ್ತಾ ವಸಾಹತೀಕರಣದಿಂದ ನಲುಗಿದ ಭಾರತೀಯ ಸಮಾಜದ ಸ್ಥಿತಿ-ಗತಿಗಳನ್ನು ವಸ್ತುನಿಷ್ಠ ಅಂತರದಲ್ಲಿ ನಿಂ ಪರೀಕ್ಷಿಸುವ 'ದೂರ'ವನ್ನು ಕಾರಂತ, ಕುವೆಂಪು ಅವರಂಥ ಮಹತ್ವ ಕಾದಂಬರಿಕಾರರಿಗೆ ಕಾದಂಬರಿ ಮಾರ್ಗವೇ ಪೂರೈಸಿತು. ನ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಹೋದ 'ಕಥನ ಪರಂಪರೆ'ಗಿಂತ 'ದೂರ'ವನ್ನು ಪಾಶ್ಚಾತ್ಯ ವಾಸ್ತವ ಮಾರ್ಗ ಒದಗಿಸಿತಲ್ಲದೆ, ತಾ ಪ್ರತಿನಿಧಿಸುವ ಸಮಾಜದಿಂದ ಹೊರಗೆ ನಿಂತೂ, ಅದನ ಒಳಗಿನಿಂದಲೇ ಆತ್ಮವಿಮರ್ಶೆಯ ಧಾಟಿಯಲ್ಲಿ ಅರಿಯುವ ಯತ್ನ



ಆದರ್ಶದ ನೆಲೆಯನ್ನು ಒದಗಿಸಿತು. ವಾಸ್ತವ ಮಾರ್ಗದಲ್ಲಿ ಬಂದ ಕನ್ನಡದ ಎಲ್ಲ ಮುಖ್ಯ ಕಾದಂಬರಿಗಳು ವಾಸ್ತವ-ಆದರ್ಶ, ಪ್ರಕೃತಿ, ಸಂಸ್ಕೃತಿ, ಗ್ರಾಮ-ನಗರ ಮುಂತಾದ ಡಯಲೆಕ್ಟಿಕಲ್ ರೀತಿಯನ್ನು ಅನುಸರಿಸಿದವು. ಜೊತೆಗೆ ಕಾದಂಬರಿ ರಚನೆಯ ಮೂಲಕ ವಾಚಕರಲ್ಲಿ ದೇಶೀಯ ಸಂಸ್ಕೃತಿಯ ವಿಮರ್ಶಿತ ಆವೃತ್ತಿಗಳನ್ನು ಜಾಗೃತಗೊಳಿಸುವ ಕಾರ್ಯವೂ ನಡೆಯಿತು. ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಮಹಾಕಥಾನಕವೂ ಇದೇ ಮಾದರಿಯದ್ದೇ.

ಹೀಗೆ ಚರಿತ್ರೆಯ ಅನಿವಾರ್ಯತೆಯಿಂದಾಗಿ ನವೋದಯದ ಅತ್ಯುತ್ತಮ ಕಾದಂಬರಿಕಾರರ ಸಂವೇದನೆಯನ್ನು ಪ್ರವೇಶಿಸಿದ ವಾಸ್ತವ ಪರಂಪರೆಯ ಕಥನ ಕ್ರಮ, ನವ್ಯಯುಗದ ಲೇಖಕರಲ್ಲೂ ವಿಭಿನ್ನ ಬಗೆಯ ವೈಚಾರಿಕ ಆಕೃತಿಗಳ ಸ್ಪರ್ಶ ಮತ್ತು ಅನುಸಂಧಾನದೊಂದಿಗೆ ಮುಂದುವರಿಯಿತು. ಈ ಘಟ್ಟದಲ್ಲಿ ವಾಸ್ತವ ಮಾರ್ಗ ಕತೆ-ಕಾದಂಬರಿ ಎರಡರಲ್ಲೂ ಕರಗತೊಡಗಿತು.

ಇದರ ಪರಿಣಾಮವಾಗಿಯೇ ನವ್ಯಯುಗದ ಮುಖ್ಯ ಲೇಖಕರು ಕಥೆಯ ಗರ್ಭಗುಡಿಯಲ್ಲಿ ವಾಸ್ತವ ಪರಂಪರೆಯ ವ್ಯಾಯಾಮ ಮಾಡಿ ಜಟ್ಟಿಗಳಾಗಿ, ಕಾದಂಬರಿಯ ಚಂದ್ರಶಾಲೆಯಲ್ಲಿ ಕುಸ್ತಿ ಆಡಿದ್ದು. ಕಥೆ ಮತ್ತು ಕಾದಂಬರಿಗಳನ್ನು ಭಿನ್ನ ಆಕೃತಿಗಳೆಂದು ಗುರುತಿಸಲು ಸಾಧ್ಯವಾಗದೇ ಹೋಯಿತು. ಅವುಗಳ ನಡುವಿನ ಗೆರೆಗಳು ಅಳಿಸಿಹೋಗಿ, 'ಒಡಲಾಳ' 'ಕಿರಗೂರಿನ ಗಯ್ಯಾಳಿಗಳಂಥ' ಕೃತಿಗಳನ್ನು ಕಥೆಗಳನ್ನಾಗಿಯೂ, ಕಾದಂಬರಿಗಳನ್ನಾಗಿಯೂ ಓದಿಕೊಳ್ಳುವುದು ಸಾಧ್ಯವಾಯಿತು. ''ಗದ್ಯಕ್ಕೂ ಕವಿತೆಗೂ ನಡುವೆ ನಾನು ವ್ಯತ್ಯಾಸ ಮಾಡುವವನಲ್ಲ. ಈ ವಿಷಯದಲ್ಲಿ ನಾನು ಭಾರತೀಯ ಕಾವ್ಯ ಮೀಮಾಂಸೆಯ ಪರಂಪರೆಯವನಾದ್ದರಿಂದ ಕಾವ್ಯ ಎನ್ನುವುದು ಗದ್ಯದಲ್ಲಾಗಲಿ, ಪದ್ಯದಲ್ಲಾಗಲಿ ಸಂಭವಿಸಬಹುದೆಂದು ತಿಳಿದವನು'' ಎಂಬ ಯು.ಆರ್. ಅನಂತಮೂರ್ತಿಯವರ ಮಾತನ್ನು ಗಮನಿಸಬೇಕು. ಇದೇ ಸಂದರ್ಭದಲ್ಲಿ ಡಿ.ಆರ್. ನಾಗರಾಜ್ ಸಾಹಿತ್ಯದ ವಿವಿಧ ಪ್ರಕಾರದ ಆಕೃತಿಗಳನ್ನು ಮುರಿಯುವ, ಮೀರುವ ಮಾತಾಡಿದ್ದನ್ನು ಕೇಳಿದ ನೆನಪು. ಈ ನಡುವೆ ಕಾವ್ಯ, ಕಥೆ, ಕಾದಂಬರಿ ಮತ್ತು ನಾಟಕಗಳ ಪರಸ್ಪರ 'ರೂಪಾಂತರ' ಪ್ರಯೋಗಗಳು ನಡೆದವು.

ನವ್ಯೋತ್ತರ ಲೇಖಕರು ವಸಾಹತ್ತೋತರ ಕಾಲದಲ್ಲಿ ಬರೆಯಲು ತೊಡಗಿದಾಗ ಹೊಸ ಬಗೆಯ ಸವಾಲುಗಳು ಎದುರಾದವು. ಸಿದ್ಧವಾದ ಪಾಶ್ಚಾತ್ಯ ಮಾದರಿಯನ್ನು ತಿರಸ್ಕರಿಸಿದ ಮಾರ್ಕ್ವೆಜ್ ಮತ್ತು ಸಮುದಾಯನಿಷ್ಠ ವ್ಯಕ್ತಿಗಳನ್ನು ತನ್ನ ಕಾದಂಬರಿಯ ನಾಯಕರನ್ನಾಗಿ ಆಯ್ದುಕೊಂಡ ಚಿನುವಾ ಅಚಿಬೆ ಇವರ ಪ್ರಯೋಗಗಳು ಎದುರಿಗಿವೆ. ಕನ್ನಡದ ಹೊಸ ತಲೆಮಾರಿನ ಲೇಖಕರು ಈ ಸವಾಲುಗಳಿಗೆ ತಮ್ಮ ಕಥಾರಚನೆಯಲ್ಲಿಯೇ ಪರ್ಯಾಯ ಕಲ್ಪನೆಗಳನ್ನು ಶೋಧಿಸುವ ದಿಶೆಯಲ್ಲಿದ್ದಾರೆಂದು ನನ್ನ ಭಾವನೆ.

ಯುವ ಕಥೆಗಾರರು ಕಾದಂಬರಿಯ ರಚನೆಯತ್ತ ಅಷ್ಟೊಂದು ಆಸ್ಥೆಯನ್ನು ಏಕೆ ತೋರುತ್ತಿಲ್ಲ ಎಂಬ ಪ್ರಶ್ನೆ ವಿಷಾದಪೂರ್ಣ ಆಪಾದನೆಯಾಗಬೇಕಿಲ್ಲ. ಏಕೆಂದರೆ ಕನ್ನಡದ ಪ್ರತಿಭಾವಂತ ಯುವ ಲೇಖಕರು ಕಾದಂಬರಿ ಬರೆಯದೆ, ಕಥಾ ಪ್ರಕಾರದ ಪುಟ್ಟ ವಿಶ್ವದಲ್ಲೇ ತಮ್ಮ ಕಥನ ಶಕ್ತಿಯ ಪರಿಪೂರ್ಣತೆಯನ್ನು ಸಾಧಿಸಬಹುದು. ಕಥೆ, ಕಾದಂಬರಿಯ ಭೇದಗಳು ತಮ್ಮ ವಿಲಕ್ಷಣ ಮಿಲನದಲ್ಲಿ ಲಯವಾಗಿ ಹೊಸ ಕಥನ ಕ್ರಮಗಳ ಉದಯಕ್ಕೆ ಕಾರಣವಾಗಬಹುದು. ಏಕೆಂದರೆ, ಬದಲಾದ ಹೊಸ ಕಾಣ್ಕೆಯ ನಡಿಗೆ ವೈಚಾರಿಕ ರೂಪದಲ್ಲಿ ವೇಗವಾಗಿಯೂ, ಅನುಭವದ ರೂಪದಲ್ಲಿ ನಿಧಾನವಾಗಿಯೂ ಚಲಿಸುತ್ತದೆ. ನಿರ್ವಸಾಹತೀಕರಣದ ನಿಟ್ಟಿನಲ್ಲಿ ದೇಶೀಯ ಚಿಂತನೆಗಳು ಆರಂಭವಾಗಿವೆ. ಬೇಂದ್ರೆ ಕಾದಂಬರಿಯನ್ನೇಕೆ ಬರೆಯಲಿಲ್ಲ? ಕಾರಂತರು ಕಾವ್ಯ ರಚನೆಗೆ ಏಕೆ ಹೋಗಲಿಲ್ಲ? ಇತ್ಯಾದಿ ಪ್ರಶ್ನೆಗಳನ್ನು ಯೋಚಿಸುವ ಅಗತ್ಯವೇ ಕಾಣದ ರೀತಿಯಲ್ಲಿ ಈ ಪ್ರಶ್ನೆಯೂ ಗಮನಕ್ಕೆ ಬಾರದೆ ಹೋದೀತು.

**ಶ್ರೀಧರ ಬಳಗಾರ**



# ಕಣ್ಮುಚ್ಚುವುದು ಬೇಡ

ಪ್ರಿಯ ಸಂಪಾದಕರೆ,

ನಿಮ್ಮ 'LIVE' ಓದಿದೆ. ಆ ಲೇಖನದಲ್ಲಿನ ನಿಮ್ಮ ಅಭಿಪ್ರಾಯಕ್ಕೆ ಪ್ರತಿಯಾ ನನ್ನದೊಂದಿಷ್ಟು ತರಲೆ, ತಕರಾರುಗಳಿವೆ!

ಮಾನವನ ವಿರುದ್ಧ ಮಾನವ ಎಸಗುವ ಕ್ರೌರ್ಯವನ್ನು, ಮಾನವನೆದುರ ಹೂಬೇಹೂಬಾಗಿ ತೆರೆದಿಡುವ ಮಾಧ್ಯಮದವರ ನಿಲುವು ಹೇಯ, ನಿರ್ಲಜ್ಜ ಅಂ ಅದ್ಯಾಕೆ ಖಂಡಿಸಬೇಕು? ಸಾಹಿತಿಗಳು ಮತ್ತು ಕಲಾವಿದರು ಹಿಂಸೆಯನ್ನು, ಸೆಕ್ಸ 'ಇದ್ದುದರಲ್ಲಿ ಇಲ್ಲದ್ದನ್ನು' ಮಿಕ್ಸ್ ಮಾಡಿ ವರ್ಣಿಸಿದರೆ ಅದಕ್ಕೆ ಸೃಜನಶೀಲತೆಯ ಮೊಹರು ಒತ್ತುವ ನಾವು, 'ಇದ್ದುದ್ದನ್ನು ಇದ್ದ ಹಾಗೆ' ತೋರಿಸುವ ಮಾಧ್ಯಮ ಮಂದಿಗೆ ಮಾತ್ರ ಅದ್ಯಾಕೆ ವಿಕೃತ ಮನಸ್ಕರೆಂದು ಜರಿಯಬೇಕು?

ಪ್ಯಾಲೆಸ್ತೇನ್ ಸೈನಿಕರ ಉನ್ಮತ್ತ ಗುಂಡುಗಳು ನಿಷ್ಪಾಪಿ ಬಾಲಕನೊಬ್ಬನನ ಇಂಚಿಂಚಾಗಿ ಸಾಯಿಸುವ ಆ ಒಂದು ದೃಶ್ಯ, ಮಾನವನ ರಕ್ತದಾಹದ ಪರಾಕಾಷ್ಠೆಯನ ಮತ್ತು ರಕ್ಷಣೆಯ ಹೆಸರಿನಲ್ಲಿ 'ದೇಶಭಕ್ತ ಸೈನಿಕರು' ಎಸಗುವ ಕೃತ್ಯವನ ಜಗಜ್ಜಾಹೀರುಪಡಿಸಿದವು. ನಿಜಕ್ಕಾದರೆ, ನಾಲ್ಕೂ ದಿಕ್ಕಿನಿಂದ ತೂರಿ ಬರುತ್ತಿದ್ದ ಗುಂಡಿನ ಮಳೆಯ ನಡುವೆಯೇ, ತನ್ನ ಜೀವವನ್ನು ಅಂಗೈಯಲ್ಲಿಟ್ಟುಕೊಂಡು ಅದೃಶ್ಯವಾಗುಳಿಯಲಿದ್ದ ಆ ದೃಶ್ಯವನ್ನು ಸೆರೆ ಹಿಡಿದು 'ಪರಿಶುದ್ಧ ಕರ್ತವ್ಯಪರತೆ ಪ್ರದರ್ಶಿಸಿದ ಆ ಫ್ರೆಂಚ್ ಪತ್ರಕರ್ತನಿಗೆ ಹ್ಯಾಟ್ಸಾಫ್ ಅನ್ನಬೇಕು.

ಮತ್ತೆ, ಮಾನವೀಯತೆ ಮರೆತ ಕ್ರಿಮಿನಲ್‌ಗಳನ್ನು ಗಲ್ಲಿಗೇರಿಸುವುದರ 'LIVE ಅದ್ಯಾಕೆ ಅಮಾನವೀಯತೆ ಅನ್ನಬೇಕು? ಅಪರಾಧ ಕೃತ್ಯಗಳು ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ, ಆದಷ್ಟು ಬೇಗ, ಭಾರತದಲ್ಲೂ ಅಪರಾಧಿಗಳನ್ನು ಗಲ್ಲಿಗೇರಿಸುವ 'ಮಜಾ', 'LIVE' ಆಗಿ ತೋರಿಸುವಂತಾಗಬೇಕು.

ಜೀವವೊಂದು ಎದುರು ಕಣ್ಮುಚ್ಚುವಾಗ ಅರೆಕ್ಷಣ ಕಣ್ಮುಚ್ಚಿ ನಿಲ್ಲುವುದಕ್ಕಿಂತ, ಅದನ್ನು ಕಣ್ತುಂಬ ನೋಡಿ, ನಾಲ್ಕು ಹನಿ ಕಣ್ಣೀರು ಸುರಿಸುವುದು ಅಥವಾ ಆ ಜೀವದ ಸಾವಿಗೆ ಕಾರಣವಾದ ವ್ಯಕ್ತಿ ಅಥವಾ ಶಕ್ತಿಯ ವಿರುದ್ಧ (ಕ್ಷೀಣವಾದರೂ ಸರಿಯೇ) ದನಿ ಎತ್ತುವುದು ಲೇಸು ಅನ್ನಿಸ್ತದೆ ನಂಗೆ...

**ರಮೇಶ್‌ಕುಮಾರ್ ನಾಯಕ್**



ಲಘು ಕತೆ



ಕೆ. ಸುನಿಲ್ ಪ್ರಭು

# ಮೆಕ್ತೂಬ್

ಸಿಗರೇಟಿನ ಉರಿಯುವ ತುದಿ ನಿಧಾನವಾಗಿ ಹೊಗೆ ಹೊಮ್ಮಿಸುತ್ತ ತನ್ನ ಬೆರಳುಗಳೆಡೆ ಬರುವುದನ್ನೇ ದಿಟ್ಟಿಸುತ್ತಿದ್ದ ಅನೀಶ. ಇನ್ನೇನು ಕೈಗೆ ಬಿಸಿ ತಗುಲುವುದೋ ಎನ್ನುವಾಗ, ಅದನ್ನು ರೂಂನ ಕಿಟಕಿಯಿಂದ ಹೊರಗೆಸೆದ. ಅವನ ಮನಸ್ಸು ಮತ್ತೆ ವಿಚಾರ ತರಂಗಗಳನ್ನೆಬ್ಬಿಸಿತು.

''ತನಗೆ ಏನಾಗಿದೆ? ಸೋಲು ತನಗೇ ಏಕೆ ಅಂಟಿಕೊಂಡಿದೆ? ಒಂದಲ್ಲ ಎರಡಲ್ಲ, ಐದು ಇಂಟರ್ವ್ಯೂಗಳಲ್ಲಿ ತಾನು ತಿರಸ್ಕೃತನಾಗಿದ್ದೇನೆ. ತನ್ನ ಬಿ.ಬಿ.ಎಂ. ಡಿಗ್ರಿ ಇನ್ನು ಯಾವ ಪ್ರಯೋಜನಕ್ಕೆ ಬಂದೀತು? ಮನೆಯಲ್ಲಿ ಓದುವವರು ಇನ್ನೂ ಇಬ್ಬರಿದ್ದಾರೆ. ಸರ್ಕಾರಿ ನೌಕರರಾದ ಅಪ್ಪ, ಸೀಮಿತ ಆದಾಯವಿದ್ದರೂ ಹಣ ಕಳಿಸುತ್ತಲೇ ಇದ್ದಾರೆ. ತಾನು ಯಾವುದಾದರೂ ಕೆಲಸ ಹುಡುಕಲು ಸಹಾಯವಾಗಲಿ ಎಂದು... ಕೆಲವು ಕಂಪನಿಗಳಲ್ಲೋ ತಮಗೆ ಬೇಕಾದವರಿಗೆ ಮಾತ್ರ ಕೆಲಸ ನೀಡುವಂತೆ ಕಾಣುತ್ತದೆ. ತನಗಂತೂ ಹಣ ಮತ್ತು ವಶೀಲಿಯ ಬೆಂಬಲವಿಲ್ಲ. ನಾಡಿದ್ದಿನ ಸಂದರ್ಶನದಲ್ಲೂ ತನಗೆ ಕೆಲಸ ಸಿಗದಿದ್ದರೆ... ಹೀಗೇ ನಿರುದ್ಯೋಗಿಯೇ ಆಗಿ ಬಹಳ ದಿನ ಇರಬೇಕಾದ ಪರಿಸ್ಥಿತಿ ಬಂದರೆ...''

ಆ ಸಂಭವನೀಯತೆಯನ್ನು ಊಹಿಸಿ ಅವನು ಅಸಮಾಧಾನಗೊಂಡ. ಎಲ್ಲ ಯೋಗ್ಯತೆ ಇದ್ದರೂ ತನಗೆ ಮನ್ನಣೆ ದೊರೆಯುತ್ತಿಲ್ಲ ಎಂಬ ವಿಷಯ ಮತ್ತೆ ಮತ್ತೆ ನೆನಪಿಗೆ ಬಂದು, ಸಿಟ್ಟಿನಿಂದ ಟೇಬಲಿಗೊಮ್ಮೆ ಗುದ್ದಿದ. ಲಾಡ್ಜಿನ ವೆರಾಂಡಾದಲ್ಲಿ ನಿಲ್ಲೋಣ ಎಂದುಕೊಂಡು ರೂಮಿನಿಂದ ಹೊರಗೆ ಬಂದ.

ಕಡಲತಡಿಯ ಕಡೆಯಿಂದ ಸಂಜೆಯ ತಂಪಾದ ಮಾದಕ ಗಾಳಿ ತೂರಿಬಂತು. ಆದರೆ ಅದರಿಂದ



ಈಗೀಗ ಏಕೋ ಮನಕ್ಕೆ ಶಾಂತಿ ಲಭಿಸುತ್ತಿಲ್ಲ ಎಂದು ಅನೀಶನಿಗೆ ಅರಿವಾಯಿತು.

ನೆಲಮಹಡಿಯ ಕೋಣೆಯಿಂದ, ''ಅಪುನ್ ಬೋಲಾ ತು ಮೆರಿ ಲೇಲಾ, ಓ ಬೋಲಿ ಫೆಕ್ಟಾ ಹೆ ಸಾಲಾ.. ಎಂದು ಹಿಂದಿ ಸಿನೆಮಾ ಹಾಡು ನುಗ್ಗಿಬಂದಿತು. ತಪ್ಪು ತಪ್ಪು ಹಿಂದಿಯಲ್ಲಿ, ಒರಟು ದನಿಯಿಂದ ಒಬು ಹಾಡುಗಳನ್ನು ಯಾವಾಗಲೂ ಅರಚುತ್ತಿರುತ್ತಾನೆ. ಒಬುಟು, ತಾಂಜಾನಿಯಾದಿಂದ ಸರ್ಕಾರಿ ಸ್ಕಾಲರ್‌ಶಿಪ್ ಮೆ ಉಚಿತ ಮ್ಯಾನೇಜ್‌ಮೆಂಟ್ ವಿದ್ಯಾಭ್ಯಾಸ ಪಡೆಯಲು ಬಂದ ಆಫ್ರಿಕನ್ ಯುವಕ. ಮೈ ಬಣ್ಣ ತೊಳೆದ ಇದ್ದಲಿನ ಇದ್ದರೂ ಸದಾ ಅವನ ಉಬ್ಬುಹಲ್ಲುಗಳು ನಗುಮುಖದಿಂದ ಹೊರಚಾಚಿ ಹೊಳೆಯುತ್ತಿರುತ್ತವೆ. ಎಂ.ಬಿ.ಎ. ಡಿ ಪಡೆದರೆ ಆ ದೇಶದಲ್ಲಿ ಅವನಿಗೆ ಬಹಳ ಬೇಡಿಕೆ. ಈಗ ತಿಂಗಳಿಗೆ 150 ಡಾಲರ್ ಸ್ಕಾಲರ್‌ಶಿಪ್ ಸಹ ಸಿಗುತ್ತದೆ.

''ನೀನು ಲಕ್ಕಿ ಫೆಲೋ ಕಣೋ... ಒಬುಟು'' ಎಂದು ಸ್ವಲ್ಪ ಅಸೂಯೆಯಿಂದಲೇ ಗೊಣಗಿಕೊಂಡು ಅನಿ ವಾಚ್ ನೋಡಿದ. ಐದು ಗಂಟೆ. ಅದು ಅವನ ಸಂಜೆಯ ಚಹಾದ ಹೊತ್ತು.

ಮನಸ್ಸಿಲ್ಲದಿದ್ದರೂ ಮುಖ ತೊಳೆದು ಡ್ರೆಸ್ ಮಾಡಿಕೊಂಡು ಹೋಟೆಲಿನೆಡೆಗೆ ನಡೆದ.

ಮಾಧವ ಕಾಮತರು 'ಗಣೇಶ ಭವನ'ದ ಬಾಗಿಲಲ್ಲಿ ಇಟ್ಟಿದ್ದ 'ಶೋ' ಗಿಡಗಳಿಗೆ ನೀರು ಹಾಕುತ್ತಿದ್ದರು. ಅನಿ ಬರುವುದನ್ನು ನೋಡಿದರು. ಕಳೆದ ಮೂರೂವರೆ ವರುಷದಿಂದ ಹೋಟೆಲಿನ ಖಾಯಂ ಗಿರಾಕಿ ಆಗಿದ್ದ ಅವನ ಕಂಡರೆ ಅವರಿಗೆ ಏನೋ ಒಂದು ಅಭಿಮಾನ. ಅವನು ಹೋಟೆಲಿನ ಕಟ್ಟೆ ಹತ್ತುವಾಗ, ''ಓ ಅನೀಶ, ಮಾರಾಯ. ಎಂತದು ಸಮಾಚಾರ'' ಎಂದರು. ''ಏನೂ ಸಮಾಚಾರ ಇಲ್ಲ ಮಾಮ್...'', ತಣ್ಣಗಿನ ಧ್ವನಿಯ ನುಡಿದು ಅವನು ತನ್ನ ಮಾಮೂಲಿನ ಗಾಜಿನ ಕಿಟಕಿ ಬಳಿಯ ಟೇಬಲಿನಲ್ಲಿ ಹೋಗಿ ಕುಳಿತ. ಅವನ ನಿತ್ ತಿಂಡಿಯಾದ ಗೋಳಿಬಜೆ, ಒಂದು ಟೀ ತಂದಿಟ್ಟ ಕಾಮತರು, ''ಜಾರ್ಜಿ ಪಯಸರು ಒಮ್ಮೆ ಕಾಣ ಹೇಳಿದ್ದರು...'' ಎಂದರು. ''ಓ ಥ್ಯಾಂಕ್ಸ್. ನಾನೂ ಹೋಗಬೇಕು ಅಂದುಕೊಳ್ಳುತ್ತಿದ್ದೆ. ಇವತ್ತು ಹೋಗ್ತಿ ಮಾಮ್'' ಎಂದುತ್ತರಿಸಿದ, ಅನೀಶ. ತಿಂಡಿ ತಿಂದು, ಚಹಾ ಕುಡಿದು, ಬಿಲ್ಲು ಕೊಟ್ಟು, ಕಾಮತರಿಗೊಂ ನಮಸ್ಕಾರ ಹಾಕಿ ಹೊರ ನಡೆದ. ಅವನ ಮುಖದಲ್ಲಿ ಒಂದು ಬೇಸರದ ಛಾಯೆ ಕಂಡ ಕಾಮತರು, ''ಛೆ! ಕೆ ಹುಡುಕುತ್ತಾ ಹುಡುಗ ಸುಸ್ತಾದ'' ಎಂದುಕೊಂಡರು.

ಜಾರ್ಜಿ ಪಯಸರು ಅರ್ಥಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರು. ಒಂದು ಸೆಮಿನಾರಿಗೆ ಬಂದಿದ್ದಾಗ ಅನೀ ಭಾಷಣವನ್ನು ಕೇಳಿ ಮೆಚ್ಚುಗೆ ಸೂಚಿಸಿದ್ದರು. ಸಂಗೀತ ಶಾಲೆಯಲ್ಲಿ ಗೌರವ ಶಿಕ್ಷಕರಾಗಿ ಕಲಿಸುತ್ತಿದ್ದ ಅವ ಪಾಶ್ಚಾತ್ಯ ಸಂಗೀತ ಅಭ್ಯಾಸ ಮಾಡುತ್ತಿದ್ದ ಅನೀಶನಿಗೆ ಸಲಹೆಗಳನ್ನು ನೀಡುತ್ತ ಸಹಾಯ ಮಾಡಿದ್ದರು. ಆರಂಭದ ಕಾಲಿನಿಂದ ಬೀಟ್ಸ್ ಹಾಕುತ್ತ ಕೀಬೋರ್ಡ್ ಬಾರಿಸಲು ಅವನು ಪರದಾಡಿದಾಗ, 'ಅಬೈಡ್ ವಿತ್ ಮಿ' ಟ್ಯೂನ್ ಉದಾಹರಣೆಯಾಗಿಸಿ ಬೀಟ್ಸ್ ಹಾಕುವುದು ಹೇಗೆಂದು ಹೇಳಿಕೊಟ್ಟಿದ್ದರು.

ಮೈಗಳ್ಳತನ ತೋರದ, ದುಡಿವ ಹುಮ್ಮಸ್ಸುಳ್ಳ ಯುವಜನರಿಗೆ ಮಾರ್ಗದರ್ಶನ ನೀಡುವುದರಲ್ಲಿ ಖ್ಯಾತರಾ ಪಯಸರು ತನ್ನನ್ನು ಭೇಟಿಯಾದಾಗಲೆಲ್ಲಾ ಪ್ರೀತಿಯಿಂದ ಮಾತನಾಡಿಸುತ್ತಿದ್ದದ್ದು ಅನೀಶನಿಗೂ ಅತೀವ ಸಮಾಧಾ ನೀಡುತ್ತಿತ್ತು. ಅವರು ಆಹ್ವಾನಿಸಿದಾಗ ಒಂದೆರಡು ಬಾರಿ ಅವರ ಮನೆಗೂ ಹೋಗಿದ್ದ. ಇಂದು ಕಾಮತ ಹೇಳಿದಂತೆ ತನ್ನ ಸಮಸ್ಯೆಯ ಬಗ್ಗೆ ಪಯಸರ ಹತ್ತಿರ ಮಾತನಾಡಬೇಕು. ಈ ಮೊದಲೇ ಹೋಗಿದ್ದ ಒಳ್ಳೆಯದಾಗಿರುತ್ತಿತ್ತೋ ಏನೋ, ಎಂದೆಲ್ಲ ಆಲೋಚಿಸುತ್ತ ನಡೆದವನು ಐದು ನಿಮಿಷಗಳಲ್ಲಿ 'ವಿಕ್ಟರ್ ವಿಲ್ಲಾ ಬಳಿ ತಲುಪಿದ್ದ. ಲಾನಿನ ಮೇಲೆ ಮೊಮ್ಮಗ ಸ್ಟೀಫನ್‌ನೊಟ್ಟಿಗೆ ಫುಟ್‌ಬಾಲ್ ಆಡುತ್ತಿದ್ದ ಪಯಸರು ಅನೀಶನ ಕೈಬೀಸಿ ಕರೆಯುತ್ತ, ''ಕಮಿನ್ ಕಮಿನ್ ಸ್ಮಾರ್ಟ್ ಮ್ಯಾನ್'' ಎಂದು ಸ್ವಾಗತಿಸಿದರು. ಅವರ ನಾಯಿ ಡಾಟ ಅವನ ಕಂಡು ಬಾಲ ಅಲ್ಲಾಡಿಸುತ್ತ ಬಂದು, ಕಾಲು ಮೂಸಿತು. ಉಭಯ ಕುಶಲೋಪರಿ ಮಾತನಾಡುತ್ತ ಎಲ್ಲರ ಒಳನಡೆದರು. ಹಾಲ್‌ನಲ್ಲಿ ಸೋಫಾ ಮೇಲೆ ಕುಳಿತರು.

ಪಯಸರ ಪತ್ನಿ ಕ್ಯಾಥರೀನ್, ಮುಗುಳ್ನಗುತ್ತ ಬಂದು ಎಲ್ಲರಿಗೂ ಕುಡಿಯಲು ಕಿತ್ತಳೆ ರಸ ನೀಡಿದರು.

''ಅನೀಶ್, ಏನು ಸಮಾಚಾರ, ಏನು ಮಾಡ್ತಿದ್ದೀಯ ಈಗ, ಮ್ಯೂಸಿಕ್ ಎಲ್ಲಿಯವರೆಗೆ ಬಂತು?'' ಪಯಸರು ಮಾತು ಆರಂಭಿಸಿದರು. ''ಮ್ಯೂಸಿಕ್ ಅಭ್ಯಾಸ ಮಾಡಲು ಮೂಡಿಲ್ಲ ಸರ್'', ಉದಾಸವಾಗಿ ಹೇಳಿ

ಅನೀಶ. ''ಯಾಕೆ? ಏನಾಯ್ತು?'' ''ನನಗೆ ಮೊದಲಿಗೆ ಒಂದು ಕೆಲಸ ತೊಗೋಬೇಕು ಅಂತ ಅನ್ನಿಸುತ್ತೆ ಸರ್.''

''ಹೌದು, ಕೆಲಸ ಇರಲೇಬೇಕು. ಆದರೆ ದಿನವೂ ಸ್ವಲ್ಪ ಹೊತ್ತು ಕೀಬೋರ್ಡ್ ನುಡಿಸಿದರೆ ಅಭ್ಯಾಸದಲ್ಲಿ ನಿರಂತರತೆ ಇರುತ್ತದೆ.'' ''ನಾಲ್ಕೈದು ಇಂಟರ್ವ್ಯೂನಲ್ಲಿ ಫೇಲಾದೆ, ಈಗ ಆತ್ಮವಿಶ್ವಾಸವೇ ಕಡಿಮೆ ಆಗ್ತಿದೆ'', ತನ್ನ ದುಗುಡ ತೋಡಿಕೊಂಡ ಅನೀಶ.

''ಓ ಯಂಗ್ ಮ್ಯಾನ್, ಅಷ್ಟು ಬೇಗ ನಿರಾಶನಾಗಬೇಡ. ಸರಿ, ಮುಂದೇನು ಮಾಡ್ತೀಯ?'' ಸಮಾಧಾನದಿಂದಲೇ ಕೇಳಿದರು ಪಯಸರು. ''ನಾಡಿದ್ದು, ಬೆಂಗಳೂರಲ್ಲಿ ಕೆ.ಎಸ್.ಎಲ್.ಜಿ. ಸಾಫ್ಟ್‌ವೇರ್‌ನಲ್ಲಿ ಒಂದು ಮಾರ್ಕೆಟಿಂಗ್ ಹುದ್ದೆಗೆ ವಾಕಿನ್ ಇಂಟರ್ವ್ಯೂ ಇದೆ ಸರ್.''

''ವೆಲ್, ಅದಕ್ಕಾಗಿ ಇವತ್ತೇನು ಓದಿದೆ?'' ''ಏನೂ ಇಲ್ಲ ಸರ್. ಬೆಳಗ್ಗಿನಿಂದ ಸುಮ್ಮನೆ ಇದ್ದೆ.'' ''ಅದು ಸರಿಯಲ್ಲ. ಸಮಯ ಹಾಳು ಮಾಡಬಾರದಿತ್ತು.'' ''ನಾಡಿದ್ದು ಇಂಟರ್ವ್ಯೂನಲ್ಲಿ ಫಲಿತಾಂಶ ಏನಾಗುತ್ತೋ ಎಂದು ಬಹಳ ಚಿಂತೆ ಸರ್...'', ಅನೀಶ ಮ್ಲಾನವದನನಾಗಿ ನುಡಿದ.

''ಮಿ॥ ಅನೀಶ್, ನಾನೊಂದು ವಿಷಯ ಹೇಳ್ತೀನಿ. ಬುದ್ಧಿವಂತರು ಭೂತ ಭವಿಷ್ಯಗಳ ಬಗ್ಗೆ ದುಃಖಿಸದೆ, ಚಿಂತಿಸದೆ ವರ್ತಮಾನ ಕಾಲದಲ್ಲಿ ತಮ್ಮ ಕೆಲಸ ಮಾಡುತ್ತಾರೆ. ನನ್ನ ವರ್ಕ್‌ರೂಂನ ಬಾಗಿಲಿನ ಮೇಲೆ ಬೈಬಲಿನ ಒಂದು ಮಾತಿದೆ ನೋಡಿದ್ದೀಯಾ? ಎಂದು. 'Take no thought for the morrow' ನಾಳೆ ಸಂಭವಿಸುವುದರ ಬಗ್ಗೆ ಚಿಂತಿಸಬಾರದು. ನಾಳೆಯ ಕೆಲಸಗಳನ್ನು ಯೋಜಿಸಿ, ಬರೆದಿಟ್ಟು, ಇಂದಿನ ಕೆಲಸಗಳನ್ನು ಪೂರ್ತಿ ಶಕ್ತಿಯಿಂದ ಮಾಡಬೇಕು...'', ಪಯಸರು ಪ್ರತಿ ಶಬ್ದವನ್ನೂ ಪ್ರಭಾವ ಬೀರುವಂತೆ ನುಡಿದರು.

ಅನೀಶ, ಅವರು ಹೇಳಿದ್ದು ಅರ್ಥವಾಗಿದೆಯೆಂದು ತಲೆದೂಗಿದ. ಮನಸ್ಸು ಸಮಾಧಾನಗೊಂಡು ಒಂದು ನಿಡಿದಾದ ಉಸಿರು ಹೊರಬಂತು.

''ನೀವು ಹೇಗೆ ಯಾವಾಗಲೂ ಹರ್ಷದಿಂದ ಇರುತ್ತೀರೆಂದು ಈಗ ತಿಳಿಯಿತು ಸರ್. ನಿನ್ನೆ, ನಾಳೆ ಬಗ್ಗೆ ನಾವು ಚಿಂತಿಸದಿದ್ದರೆ, ಇಂದು ಖುಷಿಯಾಗಿ ಇರಬಹುದು. ಇವತ್ತಿನಿಂದಲೇ ಆಯಾ ದಿನದ ಕರ್ತವ್ಯಗಳ ಬಗ್ಗೆ ಮಾತ್ರ ಏಕಾಗ್ರತೆ ನೀಡುತ್ತೇನೆ'' ಎಂದು, ಹೊರಡಲು ಅವರ ಅನುಮತಿ ಕೇಳಿದ.

''ನಿನ್ನ ನೂರು ಪರ್ಸೆಂಟ್ ಪ್ರಯತ್ನ ಮಾಡು. ಸಂದರ್ಶನಕ್ಕೆ ಹೋಗಿ ಬಾ. ರಿಸಲ್ಟ್ ಏನೋ ಆಗಲಿ, ಬಂದ ಕೂಡಲೇ ನಿಮ್ಮ ರೂಂನ ಹತ್ತಿರ ಇದ್ದಾನಲ್ಲ ಒಬುಟು, ಅವನ ಬಳಿ ಹೋಗು. ಮೆಕ್ತೂಬ್ ಅಂದರೆ ಏನೆಂದು ಕೇಳು. ಈಗಲೇ ಹೋಗಬೇಡ. ಆ ಶಬ್ದದ ಅರ್ಥವೇ ಸಾಕು ನಮ್ಮ ಬಾಳು ಬೆಳಗಲು'' ಎಂದು ಹೇಳಿ ಬೀಳ್ಕೊಟ್ಟರು ಜಾರ್ಜ್ ಪಯಸರು.

ಹೊರಬಂದ ಅನೀಶನಿಗೆ ಪಡುವಣದ ಗಾಳಿ ಆಹ್ಲಾದ ನೀಡುತ್ತಿದೆ ಅನ್ನಿಸಿತು.

ಎರಡು ದಿನಗಳ ನಂತರ ಬೆಂಗಳೂರಿನಿಂದ ಮರಳಿ ಬರುವಾಗ ಅನೀಶನ ಕೈಯಲ್ಲಿ ಕೆಲಸದ ಆಯ್ಕೆಯ ಆದೇಶದ ಪತ್ರವಿತ್ತು. ತನ್ನ ಕೋಣೆಗೆ ಹೋಗುವ ಮೊದಲು ಒಬುಟುವಿನ ಕೋಣೆಯ ಬಾಗಿಲು ಬಡಿದ.

ಒಬುಟು ತನ್ನ ಬರ್ಮುಡ ಚಡ್ಡಿಯ ದಾರವನ್ನು ತಿರುಗಿಸುತ್ತಾ ಹೊರಬಂದು, ''ಆಹಾ ಅಣೀಸ್, ಏಣು ಸಮಾಚಾರ.'' ಎಂದ. ''ಮ್ಯಾನ್. ಪ್ಲೀಸ್ ಮೆಕ್ತೂಬ್ ಎಂದರೆ ಏನಂತ ಹೇಳ್ತೀಯಾ?''

''ಓ.ಕೆ. ಓಕೆ. ಓಕೆ. ಅದು ಅರೆಬಿಕ್ ವರ್ಡ್. ನಿನ್ನ ಎಲ್ಲ ಎಫರ್ಡ್ (ಪ್ರಯತ್ನ) ಹಾಖಿ ಆಮೇಲೆ ನೀಣು ಹೇಳು ಮೆಕ್ತೂಭ್ ಅಂತ. ಇಟ್ ಈಸ್ ಆಲ್ ರಿಟನ್. ನಮ್ಮ ಲೈಫಲ್ಲಿ ಏನಾಗುತ್ತೆ ಎಲ್ಲ ಬರ್ದು ಆಗಿದೆ. ತಲೆ ಬಿಶಿ ಬೇಡ ಅಂತ. ಬಟ್ ನೀಣು ಏಕೆ ಇಷ್ಟು ಹ್ಯಾಪಿ??...''

''ಏಕೆಂದರೆ ಮೆಕ್ತೂಬ್'' ಎನ್ನುತ್ತಾ ತನ್ನ ಬ್ಯಾಗ್‌ನಿಂದ ಅಪಾಯಿಂಟ್‌ಮೆಂಟ್ ಆರ್ಡರ್ ತೆಗೆದು ತೋರಿಸಿದ ಅನೀಶ. ಎರಡು ಮುಖಗಳೂ ಮಂದಹಾಸದಿಂದ ಮಿನುಗಿದವು.

ಕೆ. ಶಾಮ್ ಪ್ರಿನ್ಸ್

# ಬತ್ತಲ ಕನ್ನಿಕೆಗೆ ಬಣ್ಣದ ಸೀರೆ ಉಡಿಸುವ ಚಂದ್ರಕಾಂತ ಕುಸನೂರ್

■ ಜಯ

ಕತ್ತಲೆಯಲ್ಲಿ ಬತ್ತಲೆ ತಿರುಗುತ್ತಿರುವ
ನಮ್ಮ ಶೀಲ ಕನ್ನಿಕೆಗೆ
ಒಂದು ಬೆಳಕಿನ ಸೀರೆ ತರುವುದಿದೆ
ಬರುವಿರಾ?

ಈ ಅಪ್ರತಿಮ ಹೈಕು ಬರೆದವ
ಚಂದ್ರಕಾಂತ ಕುಸನೂರ್. ಕನ್ನಡದ ಶ್ರ
ಅಸಂಗತ ನಾಟಕಗಳನ್ನು ಬರೆದವರು ಇವ
'ನಂದಿಕೋಲು', 'ಹಳ್ಳಾ ಕೊಳ್ಳಾ ನೀ
ಸಂಗ್ರಹಗಳ ಹೊಸ ಸಂವೇದನೆಯ ಕ
1968ರಲ್ಲೇ ಅತ್ಯಂತ ವಿಶಿಷ್ಟವ
'ಚರ್ಚ್‌ಗೇಟ್' ಕಾದಂಬರಿಯನ್ನು ಬ
ದವರು. 'ಯಾತನಾ ಶಿಬಿರ' ಇ
ಮತ್ತೊಂದು ಸೂಕ್ಷ್ಮ ಕಾದಂಬರಿ. ಜೊ
'ಅನುಭವ-ಅನುಭಾವ', 'ಸಾಹಿತ್ಯ ಮತ್ತು ಕ
ಪುಸ್ತಕಗಳನ್ನೂ ಬರೆದಿದ್ದಾರೆ. 'ದಿಂಡಿ' ಇತ್ತೀ
ಜನಪ್ರಿಯವಾದ ನಾಟಕ. ಕಳೆದ ನಾ
ದಶಕಗಳಿಂದ ತೆರೆಮರೆ ಯಲ್ಲಿದ್ದುಕೊಂಡ
ತಮ್ಮ ಸೂಕ್ಷ್ಮ ಬಹುಮುಖಿ ಪ್ರತಿಭೆಯಿ
ಉತ್ತರ ಕರ್ನಾಟಕದ ಸಂವೇದನಾಶೀಲರ
ಅಕ್ಕರೆಯಿಂದ ಪ್ರೇರೇಪಿಸಿದವರು ಚಂದ್ರಕಾ
ಕುಸನೂರ್.



ಕವಿ, ನಾಟಕಕಾರ, ಕಾದಂಬರಿಕಾರ, ರಂಗ ಪ್ರೇಮಿ ಕುಸನೂರ್ ವಿಶಿಷ್ಟವಾದ ಚಿತ್ರಕಲಾವಿದರೂ ಹೌದು ಎಂಬುದು, ಸಾಹಿತ್ಯ ಪ್ರೇಮಿಗಳಿಗಿರಲಿ, ಕಲಾಪ್ರೇಮಿಗಳಿಗೂ ಗೊತ್ತಿಲ್ಲ.

ಎಪ್ಪತ್ತು-ಎಂಬತ್ತರ ದಶಕದಲ್ಲಿ ಧಾರವಾಡದಿಂದ ಹೇಮಾ ಪಟ್ಟಣಶೆಟ್ಟಿ ಪ್ರಕಟಿಸುತ್ತಿದ್ದ ಪುಸ್ತಕಗಳ ಹೊದಿಕೆಯ ಮೇಲೆ ಕುಸನೂರರ ರೇಖಾಚಿತ್ರಗಳಿರುತ್ತಿದ್ದವು.

'ರಾಯಚೂರಿನಲ್ಲಿ ಶಾಂತರಸರ ಸಂಪರ್ಕ, ಸಹವಾಸ ಒದಗಿಬಂದಿರದಿದ್ದರೆ ನಾನು ಉರ್ದು ಸಾಹಿತಿಯಾಗಿಬಿಡಬಹುದಾಗಿತ್ತು' ಎನ್ನುವ ಕುಸನೂರ್, ಕನ್ನಡದ ಎಲ್ಲ ಮುಖ್ಯ ಸಾಹಿತ್ಯಿಕ ಚಳವಳಿಗಳ ಅಬ್ಬರದಿಂದ ದೂರವಿದ್ದುಕೊಂಡೇ ಅವುಗಳ ಸತ್ವವನ್ನು ಮಾತ್ರ ತಮ್ಮದೇ ರೀತಿಯಲ್ಲಿ ಸಂವೇದನೆಯಲ್ಲಿ ಮೇಳೈಸಿಕೊಂಡು ಮಾಗಿದರು. ತಮ್ಮ ಅಂತರಂಗದ ವಿಶ್ವವನ್ನು, ಎಂದೂ ಬಡಬೀಳದಂತೆ ಕಾಪಾಡಿಕೊಂಡರು.

## 'ಮಿಸಳ್' ಸಂವೇದನೆ

ಉರ್ದು, ಹಿಂದಿ, ಮರಾಠಿಗಳ ಧಾತುವನ್ನು ತನ್ನೊಳಗೆ ಇಟ್ಟುಕೊಂಡ ಉತ್ತರ ಕರ್ನಾಟಕದ 'ಮಿಸಳ್‌ಸಂವೇದನೆ'ಯಿಂದ ಹೊಮ್ಮಿರುವ ಕುಸನೂರರ ಕಲಾಕೃತಿಗಳು ಯಾವ 'ಶಾಲೆಗೂ' ಒಳಪಡದೆ ವಿಶಿಷ್ಟವಾಗಿವೆ.





ಮಡದಿ ಸರೋಜಿನಿ ಅವರೊಂದಿಗೆ

ಯಾವ ಬಗೆಯ ಮಹತ್ವಾಕಾಂಕ್ಷೆಯ
ಇಟ್ಟುಕೊಳ್ಳದೇ ಬರೆ ತಮ್ಮನ್ನು ಬೆನ್ನ
ಪ್ರತಿಮೆಗಳನ್ನು ಹಿಡಿಯಲು ಹವಣಿಸ
ಕುಸನೂರರ ಸಾಹಿತ್ಯವೇ ಚಿತ್ರವತ್ತಾಗಿರುವಾ
ಇನ್ನವರು ಬಿಡಿಸಿದ ಚಿತ್ರಗಳು ಹೇಗಿದ್ದಾವು?

ಕ್ಯಾನ್‌ವಾಸ್, ಮ್ಯೂರಲ್ ಎಂದು ಪ್ರತಿ
ಕಲಾವಿದರ ವರಸೆ ಹಿಡಿಯದ ಕುಸನೂ
ಚಿಕ್ಕಪುಟ್ಟ ಕಾಗದದಲ್ಲಿ, ಮನೆಗೆ ಬಂ
ಕರೆಯೋಲೆಗಳ ಹಿಂಭಾಗದಲ್ಲಿ ತಮ್ಮ ಚಿತ್ರಗಳ
ಬರೆಯುತ್ತಾರೆ. ಯಾವುದೋ ಬೃಹತ್ ಕಲಾ
ಯೊಂದರ ಮೂಲ ಮಿನಿ ಮಾದರಿಯಂತಿರು
ಇವರ ಚಿತ್ರಗಳ ವೈವಿಧ್ಯ, ಪ್ರಯೋಗಶೀ
ಬೆರಗು ಹುಟ್ಟಿಸುವಂತಿವೆ. ಜಲವರ್ಣ, ಪೇಸ್ಟ
ಕಲರ್‌ಗಳನ್ನೇ ಬಳಸಿ 'ಮಿನಿಯೇಚ
ಪರಿಮಿತಿ'ಯೊಳಗೇ ಕುಸನೂರ್, ವಿಸ್ತ
ಕಲಾಕೃತಿಯೊಂದರ ಬೀಸನ್ನು, ಆಳವನ್ನು ಅದ್ಭ
ವಾಗಿ ಸಾಧಿಸುತ್ತಾರೆ.

ಕೇವಲ ಒಂದೇ ಬಣ್ಣದಲ್ಲಿ ಬೇರೆ ಬೇ
ಛಾಯೆ ಹೊರಡಿಸುವುದು, ಜಲವರ್ಣದ
ತೈಲವರ್ಣದ ಟೆಕ್ಸಚರ್ ಹೊಮ್ಮಿಸುವುದ
ಬಣ್ಣದ ಟೆಕ್ಸಚರ್ ಜೊತೆಗೆ ರೇಖೆಗಳನ
ಸತ್ವಶಾಲಿಯಾಗಿ ಬಳಸುವುದು, ಗಿಮಿ
ಮಾಡದೆ, ವಾಚ್ಯವಾಗಿಸದೆ ಅನುಭವ ವೊಂದ
ಮೂಡಿಸುವುದನ್ನೇ ಮುಖ್ಯ ಗುರಿಯಾ
ಇಟ್ಟುಕೊಳ್ಳುವುದು... ಹೀಗೆ ತಮ್ಮ ಪುಟ್ಟ ಪು





ರೇಖಾ ಚಿತ್ರಗಳು

# ಕುಸನೂರ್ ಶಬ್ದಗಳಲ್ಲಿ ಬಿಡಿಸಿದ ಚಿತ್ರಗಳು

ನೀಲಿ ಹಾಳೆಯ ಮೇಲೆ ಕಪ್ಪುಗೆರೆ ಎಳೆದಂತೆ
ಹಕ್ಕಿ ಹಾರಿತು ನನ್ನ ಕಣ್ಣ ಮುಂದೆ



ಲಾಟೀನಿನ ಗಾಜಿನಲ್ಲಿ
ಸಂಜೆಗತ್ತಲು ಮಲಗುತ್ತದೆ



ಗುಲಗಂಜಿಯ ಕೆಂಪು ಮುಖದ ಮೇಲಿದ್ದ
ಆ ಕಪ್ಪು ಕಲೆ
ಅದು ಸುಡುವ ತುಟಿಗಳ ತಂಪು
ಚುಂಬನದ ಪ್ರತಿಬಿಂಬ



ಕೆಂಪು ಬಣ್ಣದ ನಡುವೆ ಹಸಿರು ಅಕ್ಷರಗಳು
ಗುಲ್‌ಮೊಹರ್ ಗಿಡ ತುಂಬಾ ಲಕ್ಷ ಗಿಣಿಗಳು



ಭಯಂಕರ ನಾಯಿಗಳನ್ನು ಬಿಟ್ಟಿದ್ದಾರೆ ಬೆನ್ನಹಿಂದೆ
ನಾನು ಓಡುತ್ತಲಿದ್ದೇನೆ
ಜಡ ಅಸ್ತಿತ್ವದ ರಂಗು ರಂಗಿನ ಚಿತ್ರ,
ಕೆನ್ವಾಸಿನ ಮೇಲೆ ನೃತ್ಯ ಮಾಡುತ್ತಲಿದೆ
ಗಾಳಿಯ ಪಾರದರ್ಶಕ ಹಾಳೆಯ ಮೇಲೆ ಕಂಪಿಸುತ್ತ.
ನಾನು ಓಡುತ್ತಿದ್ದೇನೆ
ಯಾಕೆಂದರೆ ಭಯಂಕರ ನಾಯಿಗಳನ್ನು ಬಿಟ್ಟಿದ್ದಾರೆ ಅವರು.

ಚಂದ್ರಕಾಂತ ಕುಸನೂರು







ಕಾಗದದಲ್ಲಿ ಚಂದ್ರಕಾಂತರು ನಡೆಸ
ವರ್ಣಲೀಲೆ ಅದ್ಭುತವಾಗಿದೆ.



**ಕುಸನೂರ್‌ರ ಮಹಿಳೆಯರು**

ಕುಸನೂರ್ ಮತ್ತೆ ಮತ್ತೆ ಬಿಡಿಸ
ಮಹಿಳೆಯರ ಚಹರೆಗಳು ವಿಶಿಷ್ಟವಾಗಿ
ತಮ್ಮೆಲ್ಲಾ ಹೆಣ್ತನದ ಅಂಶಗಳನ್ನು ಹೊಂದಿ
asexual (ಲಿಂಗಾತೀತ) ವಾಗುವ ಹೆ
ಕುಸನೂರ್‌ರ ನಿರಂತರ ವಸ್ತುವಾಗಿ
ಹೆಣ್ಣೊಂದು ತನ್ನ ಪರಿಸರ (spac
ದೊಂದಿಗೆ ನಡೆಸುವ ಅಸ್ತಿತ್ವದ ಸಂಘಷ
ಪ್ರತಿ ಹೆಣ್ಣಿನ ನಿಲುವಿನಲ್ಲೇ ಹೊಮ್ಮುವಂತ
ಲೈಂಗಿಕತೆಯನ್ನು ದಾಟಿದ ambience
ಪಡೆಯಲು ಕುಸನೂರ್ ಮಹಿಳೆಯ
ಹವಣಿಸುತ್ತಿರುವಂತೆ ಭಾಸವಾಗುತ್ತದೆ.

ಸಂಬಂಧಗಳನ್ನಿಟ್ಟುಕೊಂಡೂ ಅವು
ಕಟ್ಟಳೆಗಳನ್ನು ಕರಗಿಸುವ, ಆತ್ಮಮರುಕ ಮ
ಪೊಳ್ಳು ಪ್ರತಿಷ್ಠೆ-ಎರಡನ್ನೂ ತೊರೆದು ನೇ
ನಂಟಿಗೆ ಕಾದಂತಿರುವ ಕುಸನೂ
ಜೀವಿಗಳು, ಹಸಿ ಹಸಿ ದೈಹಿಕತೆಯ
ಎದುರಿಸುವಲ್ಲೇ ಅದನ್ನು ದಾಟುವ
ಪಡೆಯುತ್ತಾರೆ. ಆದ್ದರಿಂದ ಈ ಕಲಾವಿ

ಕುಸನೂರ್‌ರ ಮಹಿಳೆಯರು










ಏಕವರ್ಣದ ಛಾಯೆಗಳು

ಪ್ರಕೃತಿ ಚಿತ್ರಗಳೂ ಕೂಡ ಮನಸ್ಸಿನ ಒಳಗಿನ landscapeಗಳೇ ಆಗುತ್ತವೆ.

ತಮ್ಮ ನಿವೃತ್ತಿಯ ನಂತರವೇ ತುಂಬಾ ಚಿತ್ರಗಳನ್ನು ಬರೆದಿರುವ ಕುಸನೂರ್ ಬೆಳಗಾವಿಯಲ್ಲಿ ನೆಲೆಸಿದ್ದಾರೆ. ಬದುಕಿನ ಕಾಲುದಾರಿಯಲ್ಲಿ ತಾಳ್ಮೆ ಮತ್ತು ಸಹನೆಯಿಂದ 'ಸಾಥ್' ನೀಡುತ್ತ ಬಂದಿರುವ ಪತ್ನಿ ಸರೋಜಿನಿಯವರ ಪ್ರೋತ್ಸಾಹ ಬಲು ದೊಡ್ಡದು ಎನ್ನುತ್ತಾರೆ. "ನಿಮಗಾದರೂ ಇದರಿಂದ ಪ್ರಯೋಜನವಾಗಲಿ" ಎಂದು ಪ್ರೀತಿ, ವಿಶ್ವಾಸಗಳಿಂದ ತಮ್ಮ ಕಲಾಕೃತಿಗಳನ್ನು ನಮ್ಮ ಪುಟಗಳಲ್ಲಿ ಆಗಾಗ ಬಳಸುವ ಭಾಗ್ಯವನ್ನು ಒದಗಿಸಿದ ನಾಡಿನ ಈ ಶ್ರೇಷ್ಠ ಕಲಾವಿದನ ಹೃದಯವಂತಿಕೆ, ವಿನಯ ಬಲು ದೊಡ್ಡದು.

**ಬಿಂಬಗಳು**

ಕನ್ನಡದ ಶ್ರೇಷ್ಠ ಬಹುಮುಖಿ ಪ್ರಯೋಗಶೀಲ ಬರಹಗಾರರಾಗಿದ್ದೂ, ನಮ್ಮ ಸಾಹಿತ್ಯಿಕ ಖಾನೆಸುಮಾರಿಯ ಗಮನದಿಂದ ಆಚೆಗೇ ಉಳಿದಿರುವ ಚಂದ್ರಕಾಂತ ಕುಸನೂರ್, ನಾಡಿನ ಶ್ರೇಷ್ಠ ಚಿತ್ರಕಲಾವಿದರೂ ಹೌದು ಎಂಬುದನ್ನು ನಮ್ಮ ನಾಡು ಮನಗಾಣಬೇಕಿದೆ.

ಮುಳುಗುತ್ತಿರುವ ನಿರ್ಜನ ಹಡಗಿನಂತೆ ತೋರುವ ಊರು, ಬೆಳದಿಂಗಳ ಬಟ್ಟೆಯನ್ನು ತೊಟ್ಟುಕೊಳ್ಳುತ್ತಾ, ರಾತ್ರಿಯನ್ನೇ ಆತ್ಮಗತ ಮಾಡಿಕೊಳ್ಳುತ್ತಿರುವ ಹೆಣ್ಣು, ತಮ್ಮ ಚಿತ್ರ-ವಿಚಿತ್ರ ಕೈಗಳಿಂದ ತಮ್ಮನ್ನೇ ಸ್ಪರ್ಶಿಸುತ್ತಿರುವ ವಿವಿಧ ವಿಸ್ಮೃತ ಮನುಜಾಕೃತಿಗಳು, ಇಡೀ ವಿಶ್ವದ ಉಸಿರನ್ನು ತನ್ನ ಬಸಿರೊಳಗಿಟ್ಟುಕೊಂಡಂತಿರುವ ಹೂಕುಂಡಗಳು, ಆಗಷ್ಟೆ ಹೊತ್ತಿಕೊಂಡ ಜ್ವಾಲೆಯಂತಿರುವ ಹಳದಿ ಹೂವು...

ಕುಸನೂರರ ವರ್ಣಲೀಲೆಯ ಬಿಂಬಗಳಿಗೆ ಎಣೆಯಿಲ್ಲ... ಎಲ್ಲೆಯಿಲ್ಲ... ನೋಡುವ ಕಣ್ಣುಗಳು ಮಾತ್ರ ಬೇಕು ಅಷ್ಟೆ. ■



# ತೆರೆದ ಅಂಚ

ಬದುಕನ್ನು ತೀವ್ರವಾಗಿ ಪ್ರೀತಿಸುವ, ಮತ್ತು ಪ್ರತಿಯೊಬ್ಬರನ್ನೂ ಅವರ ಅಂಕು ಡೊಂಕುಗಳೊಂದಿಗೇ ಸ್ವೀಕರಿಸುವ 'ಭಾವನಾ' ಮನೆಗೊಬ್ಬ ಬಂಧು ಬಂದಂತೆ.

**ಮುಂಬಯಿ ಮುಕುಂದ ಜೋಷಿ**

ನನ್ನ ಹೆಂಡತಿ ಬೇರೆಲ್ಲ ಕೆಲಸಗಳನ್ನು ಬಿಟ್ಟು 'ಭಾವನಾ'ಳನ್ನು ಆಪಾದಮಸ್ತಕ (end to end) ಓದುತ್ತಾಳೆ. ಇಷ್ಟು ಶ್ರದ್ಧೆಯಿಂದ ಮತ್ತೇನನ್ನೂ, ಕೊನೆಗೆ ನನ್ನ ಬರಹಗಳನ್ನೂ, ಆಕೆ ಓದಿದ್ದು ನಾನು ನೋಡಿಲ್ಲ.

**ದೆಹಲಿ ಶಾ. ಬಾಲೂರಾವ್**

'ಭಾವನಾ' ಪತ್ರಿಕೆಗಳನ್ನು ಕೊಂಡು ನನ್ನ ಇತರ ಪ್ರೀತಿಯ ಪುಸ್ತಕಗಳ ನಡುವೆ ಜೋಪಾನ ಮಾಡಿ ಇಟ್ಟಿದ್ದೇನೆ. ಈ ಗೌರವ ಈವರೆಗೂ ಬೇರಾವ ಮ್ಯಾಗಜಿನ್‌ಗೂ ಕೊಟ್ಟಿರಲಿಲ್ಲ ನಾನು.

**ಸಾಗರ ವಿಜಯ ವಾಮನ**

'ಭಾವನಾ' ಈಗ ಬರಹಗಾರರ ಬಳಗದಂತೆ ಕಾಣುತ್ತಿದೆ. 'ಭಾವನಾ'ದ ಸಾಹಿತ್ಯ ತೀರಾ ಪ್ರತಿಭಾವಂತರ ಸ್ವತ್ತಲ್ಲ, ನಮಗೂ ಸೇರಿದ್ದು ಎಂಬ ಭಾವನೆಯನ್ನು, ಸಾಮಾನ್ಯ ಓದುಗರಲ್ಲಿ ನಿಮ್ಮ ಓದುಗರ ಅಂಕಣಗಳು ಹುಟ್ಟಿಸುತ್ತವೆ.

**ಚೆನ್ನೈ ಕೆ. ಸತ್ಯನಾರಾಯಣ**

'ಭಾವನಾ'ದ ಒಂದು ಪುಟವನ್ನೂ ಸುಮ್ಮನೆ ತಿರುವಿ ಹಾಕುವಂತಿಲ್ಲ. ನಿಮ್ಮಂತೆ ಹೀಗೆ ಮನಸ್ಸು ಹಾಕಿ ಕೆಲಸ ಮಾಡುವವರು ಕಮ್ಮಿ.

**ಬೆಂಗಳೂರು ಎಚ್.ಎಸ್. ವೆಂಕಟೇಶಮೂರ್ತಿ**

ಓದುಗರನ್ನೂ ಬಹು ವಿಧ
'ಭಾವನಾ'ದಲ್ಲಿ ಒಳಗೊಳ್ಳುತ್ತಿರುವುದು ವಿ
ಲೇಖಕರು ಹೊರೆಯಿಲ್ಲದೆ ಬರೆಯ
ಸಂತೋಷಿಸುತ್ತ ಇರುವುದನ್ನು ನೋಡುವ
ಒಂದು ಸಂತೋಷ.

**ಕಾಸರಗೋಡು ಎಂ. ವ**

ತಿಂಗಳಿನಿಂದ ತಿಂಗಳಿಗೆ 'ಭಾವನಾ'
ಆಕ್ಕೊಂತ, ಉದ್ದ ಆಕ್ಕೊಂತ ಹೊಂಟೀತಿ.

**ಬೆಳಗಾವಿ ಸಂಕು**

ಮೊನ್ನೆ ಮಸ್ಕಾಟ್‌ಗೆ ಹಿಂದಿರುಗುವ ಮೊ
ವಿಮಾನ ನಿಲ್ದಾಣದಲ್ಲಿ ಕಾಲಹರಣಕ್ಕೆ
ಮೊದಲ ಬಾರಿ ಕೊಂಡುಕೊಂಡಿದ್ದ 'ಭಾವನ
ಮೂರು ಗಂಟೆಗಳನ್ನು ಅರಿವಿಗೇ ಬಾರದ
ಕಳೆಸಿಬಿಟ್ಟಿತು. ನಿಮ್ಮ ಇಂಥ ಒಂದು ಪ್ರಾಮಾ
ಪ್ರಯತ್ನಕ್ಕೆ ಎಲ್ಲೇ ಇದ್ದರೂ, ಎಂದೇ ಇದ್ದ
ಕನ್ನಡಿಗನ ಪ್ರೋತ್ಸಾಹ ಇದ್ದೇ ಇರುತ್ತದೆ.

**ಮಸ್ಕಾಟ್ ಕೃಷ್ಣಮೂ**

ತಿಂಗಳಿಗೊಮ್ಮೆ ಸಿಹಿಯೂಟ ಬಡಿಸುವ '
ಆಗಮನಕ್ಕಾಗಿ ನಮ್ಮನೆಯವರೆಲ್ಲಾ ಎಷ್ಟೊ
ಕಾತರದಿಂದ ಕಾಯುತ್ತೇವೆಂದರೆ, ಮ
ಹದಿನೈದನೇ ತಾರೀಖಿಗೇ ಪುಸ್ತಕದಂಗಡಿಯ
ಹತ್ತಿರ 'ಹೊಸ 'ಭಾವನಾ' ಬಂತೇ' ಎಂದು
ಬಯ್ಸಿಕೊಂಡೆ ಮಾರಾಯ್ತಿ!

**ನಾಗೂರು ವಿಶಾ**

ಸೊಗಸಾದ ವಸ್ತು, ಕಲೆ, ವಿನ್ಯಾಸದೊಂ
ಬರುತ್ತಿರುವ 'ಭಾವನಾ' ಕನ್ನಡದಲ್ಲೊಂ
ಅನನ್ಯ ಮಾಸಪತ್ರಿಕೆ.

**ಕಾಸರಗೋಡು ರಾಧಾಕೃಷ್ಣ ಬೆಳ್ಳೂ**

ಹಸೆ ಗೌರಮ್ಮನ ಕೈ ಕುಸುರಿಯ ಅದ್ಭುತ ಮುಖಪುಟ ಹೊತ್ತು ಬಂದ ಡಿಸೆಂಬರ್ ಸಂಚಿಕೆ ಸೊಗಸಾಗಿತ್ತು. ಪ್ರತಿ ತಿಂಗಳೂ ಹೊಸದನ್ನು ನೀಡು ತ್ತಿರುವ ನಿಮ್ಮ ಶ್ರಮ, ಉತ್ಸಾಹ ಮೆಚ್ಚುವಂಥದು.

**ಕುಷ್ಟಗಿ** **ನಟರಾಜ ಸೋನಾರ**

ಆಕರ್ಷಕ ಚಿತ್ತಾರದ ಮುಖಪುಟ ನೋಡಿ ದೊಡನೆ ಒಳಗೆ ಒಳ್ಳೆಯ ಹೂರಣ ಇದೆ ಯೆನಿಸಿತು. ನನ್ನ ನಿರೀಕ್ಷೆ ಸುಳ್ಳಾಗಲಿಲ್ಲ.

**ಬೆಂಗಳೂರು** **ಎಂ.ಕೆ. ಮಂಜುನಾಥ್**

ಮುಖಪುಟ ಮತ್ತು 'ಕ್ಯಾನ್‌ವಾಸ್' ಮೂಲಕ ಹಸೆ ಗೌರಮ್ಮನವರು ನಮ್ಮ ಮನಸ್ಸನ್ನು ಸೂರೆ ಗೊಂಡಿದ್ದಾರೆ. ಮೊಗ್ಗಿನಜಡೆ ಚೆನ್ನಾಗಿ ಮೂಡಿ ಬರುತ್ತಿದೆ.

**ಕೋಲಾರ** **ಎಚ್.ಕೆ. ರಾಘವೇಂದ್ರ ರಾವ್**

ಹಸೆ ಗೌರಮ್ಮನಂಥ ಎಲೆಮರೆ ಕಾಯಿ ಯನ್ನು ಪರಿಚಯಿಸಿದ್ದಕ್ಕೆ ಧನ್ಯವಾದಗಳು.

**ಹುಬ್ಬಳ್ಳಿ** **ಎಸ್.ಸಿ. ದೇಸಾಯಿ**

ಒಳ ರಕ್ಷಾಪುಟಗಳಲ್ಲಿನ ಇನ್ನೇನು ಅಳಲಿರುವ ಮುದ್ದು ಕಂದನ ಇಂಟರ್‌ನೆಟ್ ಚಿತ್ರ ಹಾಗೂ ಪ.ಸ. ಕುಮಾರರ ಒಂಟಿ ನೀಲಿಹಕ್ಕಿಯ ಜಲವರ್ಣಚಿತ್ರ ಅದ್ಭುತವಾಗಿದ್ದವು.

**ಬಾದಾಮಿ** **ಕಸ್ತೂರಿ, ರೋಹಿಣಿ**

ಇತ್ತೀಚೆಗೆ ನಮ್ಮನ್ನು ಅಗಲಿದ ಕವಿ ಜಿ.ಎಸ್. ಶಿವಪ್ರಕಾಶರ 'ಕಾಲ ವಿಚಾರ' ಉತ್ತಮ ಕವನ.

**ಮೂಡಿಗೆರೆ** **ಅನುಷಾ ಹೊನ್ನೆಕೂಲು**

ವೆಂಕಟ್ರಮಣಗೌಡರ 'ಮೀನು ಪೇಟೆಯಲ್ಲಿ ಒಂದು ದಿನ' ಕತೆಯ ಉಗ್ರಾಣಿ ಸ್ವಾಮಿ, ರಾಮಿ, ಬೀಡಿಬೊಮ್ಮನ ಅಂಗಡಿಗಳು ಕೇವಲ ಕತೆ ಪಾತ್ರಗಳಾಗದೆ ಸುತ್ತಮುತ್ತ ಸುಳಿ ದಾಡುವ ಪರಿಚಿತ ವ್ಯಕ್ತಿಗಳಂತೆ ತೋರುತ್ತಾರೆ. ಕತೆ ತುಂಬಾ ಖುಷಿ ಕೊಟ್ಟಿತು.

**ಧಾರವಾಡ** **ಪ್ರಕಾಶ ಕಡಮೆ**

ಡಿಸೆಂಬರ್ 'ಭಾವನಾ'ದ ಪ್ರತಿ ಕತೆ, ಅಂಕಣವೂ ಬೆಚ್ಚಗಿನ ಆಹ್ಲಾದ ನೀಡಿತು. ಶೂದ್ರ ಶ್ರೀನಿವಾಸರ 'ಲೋಕದ ಮಾಯೆಯೊಳಗೆ' ಕತೆ ಉತ್ತಮವಾಗಿದೆ.

**ಮೈಸೂರು** **ರಾಂಚಂದ್ರ, ಕೊಪ್ಪಲು**

ಸಂಪಾದಕೀಯದಲ್ಲಿ ನೀವು ಬರೆದಿರುವ 'ಹಸಿಬಿಸಿ' ಕುರಿತ ಮಾತು ನನ್ನ ಬರೆಯುವ ಆಸೆಯನ್ನು ಚಿಗುರಿಸಿದೆ. ವೆಂಕಟ್ರಮಣಗೌಡರ ಕತೆ ಚಲೋ ಇದೆ.

**ಶಿರಸಿ** **ರಾಜು ಹೆಗಡೆ**

ಜೀವಂತಿಕೆಯ ಲಕ್ಷಣವಾದ 'ಹಸಿಬಿಸಿ' ನಮ್ಮಂತಹ ಹೊಸಬರಿಗಿರಲೆಂಬ ನಿಮ್ಮ ಹಾರೈಕೆ ನಮಗೆ ಸ್ಫೂರ್ತಿ.

**ತುಮಕೂರು** **ರಂಗಮ್ಮ ಹೊದೇಕಲ್**

ವಿವೇಕ ಶಾನಭಾಗ ಬರೆದ 'ಭಾಷೆಯಿಂದ ಭಾಷೆಗೆ' ಅರ್ಥಪೂರ್ಣ. ಭಾಷೆ ಒಂದು ಸಂವಹನ ಸಾಧನವಾದ್ದರಿಂದ 'ಆ ಇನ್ನೊಂದು ಭಾಷೆ ಕನ್ನಡಿಯಂತೆ' ಎನ್ನುವ ಮಾತು ಗಮನಾರ್ಹ.

**ಬೆಂಗಳೂರು** **ನಾಗರಾಜ ಬಾಡ**

'ಶಬ್ದತೀರ'ದಲ್ಲಿ ಚಪ್ಪಾಳೆಯ ಬಗ್ಗೆ ಓದುತ್ತಿದ್ದಂತೆ, ನಾನು ಪ್ರೈಮರಿಯಲ್ಲಿದ್ದಾಗ ನಮ್ಮ ಗುರುಗಳ ತಾಯಿ ತೀರಿಕೊಂಡದ್ದರಿಂದ ಶಾಲೆಗೆ ರಜೆ ಘೋಷಿಸಿದ ಸಂದರ್ಭದಲ್ಲಿ, ಎಲ್ಲ ವಿದ್ಯಾರ್ಥಿಗಳು ತಟ್ಟಿದ ಚಪ್ಪಾಳೆ ನೆನಪಾಯಿತು.

**ಬೆಳಗಾವಿ** **ಆನಂದ ರಾಮತೀರ್ಥ**

ಶಬ್ದಾತೀತವಾದ ಅನುಭವ-ಅನಿಸಿಕೆಗಳನ್ನು ಅಂಗೈಯೊಳಗಿನ ನೆಲ್ಲಿಕಾಯಂತೆ ತೆರೆದಿಡುವ 'ಶಬ್ದತೀರ' ನನಗೆ ಬಹಳ ಮೆಚ್ಚಿಗೆಯಾಗುತ್ತದೆ.

**ಮುಂಬಯಿ** **ಬಿ.ಎ. ಸನದಿ**

'ಭಾವನಾ' ಸವಿಯಲು ಪ್ರತಿ ತಿಂಗಳೂ ಆನಂದವೆನಿಸುತ್ತದೆ.

**ಚಿಕ್ಕೋಡಿ** **ದಯಾನಂದ ನೂಲಿ**

'ಭಾವನಾ' ಓದುಗರ ಸೃಜನಶೀಲ ಉತ್ಸಾಹಕ್ಕೆ ಇಂಬು ಕೊಡುತ್ತಿದೆ.

**ಕುಮಟಾ** **ಟಿ.ಜಿ. ಭಟ್ ಹಾಸಣಗಿ**





ಕೊನೇ-ಸಿಪ್



## ಅತಿಥಿಗಳನ್ನು ದೂರವಿಡುವುದು ಹೇಗೆ?

### ಭಾಗ ಒಂದು: ಊರಿಂದ ಬರುವ ಅತಿಥಿಗಳು

- ಯಾವಾಗಲೂ ಸೂಟ್‌ಕೇಸ್ ಕಟ್ಟಿ ಎಲ್ಲೋ ಹೊರಟಂತೆ ತಯಾರಾಗಿರುವುದು. ಕಡೆ ಬಂದವರು ಬೇಗ ಜಾಗ ಖಾಲಿ ಮಾಡಿಯಾರು!
- ಸಿಕ್ಕವರನ್ನೆಲ್ಲಾ ಬೇರೆಯವರ ಮನೆಗೆ ಆಹ್ವಾನಿಸುವುದು- "ಹೌಹೌದು, ಬನ್ನಿ ಬನ್ನಿ, ಅವರ ಹ ಕಾರಿದೆ. ನಮ್ಮೂರಿಗೆ ಬಂದಾಗ ಅವರ ಮನೇಲೇ ಇಳಿದುಕೊಳ್ಳಬಹುದು, ಚೆ ನೋಡಿಕೋತಾರೆ..."
- "ಬನ್ನಿ ಬನ್ನಿ... ನಿಮಗಾಗಿ ಸಮೀಪದ ಹೋಟೆಲಿನಲ್ಲಿ ರೂಂ ಮಾಡಿರುವೆ. ಯಾವುದ ಸಂಕೋಚಪಟ್ಟುಕೊಳ್ಳಬೇಡಿ." (ಸಾಧ್ಯವಾದರೆ ಹೋಟೆಲಿನವನಿಂದ ಕಮಿ ಪಡೆಯುವುದು.)
- "ನಮ್ಮೂರಿಗೆ ಬರಲು ಮಳೆಗಾಲವೇ ಸೂಕ್ತ ಕಾಲ. ಆಗ ದಿನಕ್ಕೆ ಒಂದು ಘಂಟೆ ನೀರು ಬರು ಮುಖವನ್ನಾದರೂ ತೊಳೆಯಬಹುದು. ಖಂಡಿತ ಬರಬೇಕು..."

### ಭಾಗ ಎರಡು: ಲೋಕಲ್ ಅತಿಥಿಗಳು

- ಮನೆಗೆ ಬರುವ ಪ್ರಸ್ತಾಪ ಗೋಚರಿಸಿದಾಕ್ಷಣ, "ಹಲೋ... ಹಲೋ..." ಅಂತ ಫೋ ಕತ್ತರಿಸುವುದು.
- ಮುಂದಿನ ಬಾಗಿಲಿಗೆ ಬೀಗ ಹಾಕಿ ಒನ್ ಡೇ ಮ್ಯಾಚ್ ನೋಡುವುದು.
- ಯಾರಾದರೂ ಮನೆ ಹೊಕ್ಕರೆ, ನಿಮ್ಮ ಹೆಂಡತಿ ಮಾಡಿದ ಕೋಡುಬಳೆ, ಸುತ್ತಿಗೆ ಕೊಟ್ಟು, ' ಮಾಡಿ, ಸಂಕೋಚಪಟ್ಟುಕೊಳ್ಳಬೇಡಿ, ಈವತ್ತಷ್ಟೇ ಮೊದಲ ಸಾರಿ ಮಾಡಿದ್ದಾಳೆ, ನಿ ತಿನ್ನದಿದ್ದರೆ ನಾವು ಚೆನ್ನಾಗಿಲ್ಲಾಂತ ಅಂದುಕೊಂಡು ಬೇಸರ ಮಾಡಿಕೊಳ್ಳಬೇಕಾಗುತ್ತೆ..."
- ತಿಂಡಿಗೆ ಸಿಕ್ಕಾಪಟ್ಟೆ ಉಪ್ಪು ಹಾಕಿ, "ತಿಂಡಿಗೆ ಉಪ್ಪು ಜಾಸ್ತಿಯಾಗಿದೆ, ಪರವಾಗಿಲ್ಲ ಉಪ್ಪು ತಿ ಮನೆಗೆ ಎರಡು ಬಗೆಯಬೇಡಾಂತಾರಲ್ಲಾ ಹಾಗೆ" ಅಂತ ಮೈ ಪರಚಿಕೊಳ್ಳುವ ಜೋ ಹೇಳುವುದು. (ಎರಡು ಬಗಿಯಬೇಡಾಂತ ಹೇಳಿಲ್ಲ ಎಂಬುದು ನೆನಪಿರಲಿ!)

**ಸದಾ ನೀವೇ ಬೇರೆಯವರ ಮನೆಗೆ ಅತಿಥಿಗಳಾಗಿ ವಕ್ಕರಿಸುವುದೇ ಅತಿಥಿಗಳನ್ನು ದೂರವಿಡುವ ಅತ್ಯುತ್ತಮ ಮಾಗ**

- **ಕಚಗುಳಿ** : 'ಮಗು'ವನ್ನು ಕುರಿತ ಅತ್ಯಂತ ಸುಂದರವಾದ ಸಂಗತಿ ಯಾವುದು?
  -ಅದನ್ನು ತಯಾರಿಸುವುದು.

---

Printed, published and owned by **Vijay Sankeshwar**, Published at 1st Floor, "Giriraj Annexe', P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-253
Printed at Anand Printers & Publishers, 6/127, 5th Cross, KPN Extn., Bangalore - 560 002
Editor: **Jayant Kaikini**

